UNIVERSITY OF MYSORE

ORIENTAL LIBRARY PUBLICATIONS

KANNADA SERIES No. 9.

ಲಿಂಗಣ್ಣ ಕವಿ ವಿರಚಿತ

# ಕೆಳದಿನೃಪವಿಜಯಂ



# KELADINRIPA VIJAYA

BY

LINGANNA KAVI

EDITED BY

R. SHAMA SASTRY, B.A., M.R.A.S.,

*Curator, Government Oriental Library, Mysore, Periodical Lecturer to the Post-Graduates' classes, Calcutta University and B. B. R. A. S. Campbell Memorial Medalist.*

MYSORE
PRINTED AT THE GOVERNMENT BRANCH PRESS
1921



**Price Rs. 1—8—0**

# ಉಪೋದ್ಘಾತ.

"ಕೆಳದಿನೃಪವಿಜಯ" ದಲ್ಲಿ ಕೆಳದಿಯ ಅರಸರ ಚರಿತ್ರೆಯು ಹೇಳಿದೆ. ಈ ಅರಸರು ಕೆಳದಿಯನ್ನು ಬಿಟ್ಟು ಮೊದಲು ಇಕ್ಕೇರಿಯಲ್ಲಿಯೂ ಆಮೇಲೆ ಬಿದುರೂರಿನಲ್ಲಿಯೂ ಅಧಿಕಾರ ಮಾಡುತ್ತಿದ್ದುದರಿಂದ ಇವರಿಗೆ ಇಕ್ಕೇರಿಯ ಅರಸರು ಅಥವಾ ನಾಯಕರು, ಬಿದುರೂರಿನ ಅರಸರು ಎಂಬ ಹೆಸರೂ ಉಂಟು.[1]

ಈ ಗ್ರಂಥಕ್ಕೆ ಪೀಠಿಕೆ ಇಲ್ಲದಿರುವುದರಿಂದ ಇದನ್ನು ಬರೆದ ಕವಿಯ ಹೆಸರು ಮುಂತಾದುವುಗಳ ವಿಚಾರವಾಗಿ ಈ ಕಾವ್ಯದಿಂದ ಏನೂ ಗೊತ್ತಾಗುವುದಿಲ್ಲ. ಕವಿಚರಿತ್ರಕಾರರೂ[2] ವಿಲ್ಸನ್‌ಸಾಹೇಬರೂ[3] "ಕೆಳದಿಅರಸರ ಪೂರ್ವೋತ್ತರಂ" ಎಂಬ ಗ್ರಂಥವನ್ನು ಚಿನ್ನಭಂಡಾರದ ನಾರಣಪ್ಪಯ್ಯನು ಬರೆದನೆಂದು ಹೇಳುತ್ತಾರೆ. ಆದರೆ ಇವರು ಹೇಳುವುದು ಈ ಚಂಪೂಗ್ರಂಥವಾಗಿ ತೋರುವುದಿಲ್ಲ.[4] ಗದ್ಯಗ್ರಂಥವಾಗಲಿ ಚಂಪೂಗ್ರಂಥವಾಗಲಿ, ಅದನ್ನು ಚಿನ್ನಭಂಡಾರದ ಪುರುಷೋತ್ತಮಯ್ಯನ

---

1 ಕೆಳದಿ, ಇಕ್ಕೇರಿ, ಬಿದುರೂರು ಇವು ಶಿವಮೊಗ್ಗಾ ಡಿಸ್ಟ್ರಿಕ್ಟಿನಲ್ಲಿರುವ ಗ್ರಾಮಗಳು. ಬಿದುರೂರಿಗೆ ವೇಣುಪುರವೆಂಬ (ಸಂಸ್ಕೃತ) ಹೆಸರೂ ಈ ಗ್ರಂಥದಲ್ಲಿ ಉಪಯೋಗಿಸಲ್ಪಟ್ಟಿದೆ. ಹೈದರನು ೧೭೬೩ ರಲ್ಲಿ ಈ ಪಟ್ಟಣವನ್ನು ಜಯಿಸಿ ಅದಕ್ಕೆ 'ಹೈದರ್‌ನಗರ' ಎಂಬ ಹೆಸರಿಟ್ಟನು. ಅಲ್ಲಿಂದ ಅದಕ್ಕೆ ನಗರವೆಂಬ ಹೆಸರು ಬಳಕೆಯಲ್ಲಿದೆ.

2 ಕರ್ಣಾಟಕ ಕವಿಚರಿತ್ರೆ, ಪ್ರಥಮಸಂಪುಟ; ಅನುಬಂಧ, ಪುಟ. ೨೨.

3 A descriptive catalogue of the Oriental Manuscripts etc., collected by Col., Mackenzie—by H. H. Wilson; p. 332.

4 ಇದರಂತೆ 'ಕೆಳದಿ ಅರಸರ ವಂಶಾವಳಿ,' 'ಇಕ್ಕೇರಿಅರಸರ ವಂಶಾವಳಿ' 'ಇಕ್ಕೇರಿ ಅರಸರ ಪೀಳಿಗೆ' ಮುಂತಾದ ಕೆಲವು ಗದ್ಯಗ್ರಂಥಗಳಿವೆ. ಇವುಗಳಲ್ಲಿರುವುದೆಲ್ಲಾ ಸ್ವಲ್ಪ ಹೆಚ್ಚು ಕಡಮೆ ಒಂದೇವಿಷಯ; ಈ ಗ್ರಂಥಗಳನ್ನು ಯಾರು ಬರೆದ

ಬರೆದನೆಂದು ಹೇಳುವುದಕ್ಕೆ ಆಧಾರವೇನಿದೆಯೋ ತಿಳಿಯದು.[1] ಆದರೆ ಮದರಾಸಿನ ಓರಿಯಂಟಲ್ ಲೈಬ್ರರಿಯಲ್ಲಿರುವ ಕೆಳದಿನೃಪವಿಜಯ ಚಂಪೂಗ್ರಂಥದ ಒಂದು ಕಡತದ ಪ್ರತಿಯ ಕೊನೆಯಲ್ಲಿ —

---

ರೋ ತಿಳಿಯುವುದಿಲ್ಲ. "ಕೆಳದಿ ಸಂಸ್ಥಾನದ ಚರಿತ್ರೆ" ಎಂಬ ಸಂಕ್ಷೇಪವಾದ ಗದ್ಯಾನುವಾದವು ೧೯೧೪-೧೯೧೯ನೆಯ ವರ್ಷಗಳ "ಮಲೆನಾಡು ಸಮಾಚಾರ" ದಲ್ಲಿ ಪ್ರಕಟಿತವಾಗಿದೆ. ಇದು "ಹಿಂದೆ ಆಸ್ಥಾನಕವಿಗಳಾದ ಮ॥ ಕವಿಕೃಷ್ಣಪ್ಪನವರಿಂದ ಬರೆಯಲ್ಪಟ್ಟದ್ದು" ಎಂದು ಆ ಪತ್ರಿಕೆಯ ಸಂಪಾದಕರು ತಿಳಿಸುತ್ತಾರೆ. "ಕೆಳದಿ ರಾಯ ಪದ್ಧತಿ"(?)ಎಂಬ ಒಂದು ಪದ್ಯಗ್ರಂಥವೂ ಇದ್ದ ಹಾಗೆ ಬುಕನನ್ ಸಾಹೇಬರ ಹೇಳಿಕೆಯಿಂದ ತಿಳಿಯುತ್ತದೆ :—

"I here found a Brahman named Bayluru Deweuppa, ( ಬೇಲೂರು ದೇವಪ್ಪ ? ) whose ancestors have been the hereditary writers of the chronicles of the Kilidi (ಕೆಳದಿ) family. He engaged to give me the family book, called Kilidi Raya Paditti (ಕೆಳದಿರಾಯಪದ್ಧತಿ?). It is in the old dialect and character of Karnata and contains 400 slokas or distichs; for, like all other works of any note among the Hindus it is poetical. He afterwards forwarded a copy of the work to Purnea (ಪೂರ್ಣಯ್ಯ) who was so good as to add a translation into the modern language and character and both of them have been delivered to the Bengal Government. The family of the historiographer enjoyed an Enam, or free land, to the amount of sixty pagodas a year"——*A Journey from Madras through the Countries of Mysore Canara and Malabar* by Francis Buchanan Vol II. P. 378.

ಇಲ್ಲಿ ಹೇಳಿರುವ ಬೇಲೂರು ದೇವಪ್ಪನೂ ಲಿಂಗಣ್ಣನೂ ಸಾಂಬಂಧಿಗಳೋ ಅಲ್ಲವೋ ತಿಳಿಯದು.

1 ತಾಳೀಕೋಟೆ ಯುದ್ಧವಾದಮೇಲೆ ರಾಮರಾಯನ ಮನೆವಾರ್ತೆ ಬೊಕ್ಕಸದ ಸೇನಬೋವ ಚಿನ್ನಭಂಡಾರದ ನಾರಣಪ್ಪಯ್ಯನೆಂಬಾತನು ಇಕ್ಕೇರಿಗೆ ಬಂದು ಚಿಕ್ಕ ಸಂಕಣ್ಣನಾಯಕನನ್ನು ಸೇರಿ ದೊಡ್ಡ ಅಧಿಕಾರವನ್ನು ಪಡೆದಂತೆ ಗೊತ್ತಾಗುತ್ತದೆ. ಚಿನ್ನಭಂಡಾರದ ಮನೆತನದವರು ಈಗಲೂ ಶಿವಮೊಗ್ಗಾ ಡಿಸ್ಟ್ರಿಕ್ಟಿನಲ್ಲಿ ಕೆಲವರಿದ್ದಾರೆ.

ಮೆರೆವೀಸತ್ಕೃತಿಯಂ ತಾಂ
ವಿರಚಿಸಿದಂ ಸಕಲನೃಪಶಿರೋಮಣಿ ಕೆಳದೀ ।
ವರಬಸವೇಂದ್ರಾಶ್ರಿತಭೂ
ಸುರಕುಲಮಣಿ ವೆಂಕಪಾತ್ಮಜಂ ಲಿಂಗಬುಧಂ ॥

ತೊದಳೊಂದಿದ ಬಾಲಕರೊ
ಳ್ಮದುವಾತಂ ಕೇಳ್ದು ಸಂತಸಂದಳೆಯರೆ ದಿ ।
ಟ್ಮದರಂತಾಂ ನಿಮ್ಮಯ ಪಸು
ಳೆ ದಲೆಂದಾಲಿಪುದು ಸುಜನರೆಸೆವೀಕೃತಿಯಂ ॥

ಎಂಬ ಕಂದಗಳೂ ಅನಂತರ ಕೆಳದಿಯ ಅರಸರ ವಂಶಾವಳಿಯನ್ನು ತಿಳಿಸುವ "ವರಕೆಳದಿಯ ಚೌಡಮಹೀಶ್ವರ" ಮುಂತಾದ ಹದಿಮೂರ ಕಂದಗಳೂ[1] ಕಂಡುಬರುತ್ತವೆ. ಈ ಕಡತದ ಪ್ರತಿಯು ಬಹಳ ಹಳೆಯದೆಂದು ತೋರಿಬಂದುದರಿಂದ ಅದನ್ನು ಪ್ರಮಾಣವಾಗಿಟ್ಟುಕೊಂಡು ಗ್ರಂಥಕರ್ತನು ಲಿಂಗಬುಧ ಅಥವಾ "ಲಿಂಗಣ್ಣ" ಎಂದು ನಿಶ್ಚಯಿಸಿದ್ದೇವೆ. ಆತನ ವಂಶಸ್ಥರಾದ (ಮತ್ತು ಅದೇ ಹೆಸರುಳ್ಳ) ಮ॥ ರಾ॥ ಕವಿ ಲಿಂಗಣ್ಣಯ್ಯನವರು ತಮ್ಮ ವಂಶದಲ್ಲಿ ಎಲ್ಲರೂ ಕವಿಗಳಾಗಿದ್ದರೆಂದು ಹೇಳಿದುದಲ್ಲದೆ ಅದಕ್ಕೆ ಆಧಾರವಾಗಿ ಅವರ ಪೂರ್ವಿಕರು ಬರೆದ ಕೆಲವು ಗ್ರಂಥಗಳನ್ನು ತೋರಿಸಿದರು. ಇವುಗಳಲ್ಲಿ ಶಿವಕಲ್ಯಾಣವೆಂಬ ಒಂದು ಯಕ್ಷಗಾನವಿದೆ.[2] ಇತರ ಯಾವ ಯಕ್ಷಗಾನವೂ ಇಷ್ಟು ದೊಡ್ಡದಾಗಿಯಾಗಲಿ ಪ್ರೌಢವಾಗಿಯಾಗಲಿ ಇಲ್ಲ. ಅವರ ಪ್ರತಿಯೊಂದು

---

[1] ೯೧ ನೆಯ ಪುಟವನ್ನು ನೋಡಿ.

[2] ಇದರಲ್ಲಿ ಹತ್ತು ಆಶ್ವಾಸಗಳಿವೆ. ಅವುಗಳ ಸಾರಾಂಶ :—
(೧) ಪೀಠಿಕಾರಚನ (೨) ಪರ್ವತರಾಜವರ್ಣನ, ಅಂಬಿಕಾವರಪ್ರಸಾದವರ್ಣನ (೩) ಮೇನಾದೇವೀಗರ್ಭವರ್ಣನ, ಪಾರ್ವತೀಜನನ, ಬಾಲಲೀಲಾವಿವರಣ, ಯೌವನವರ್ಣನ, ಶಿವಸೇವಾಪರಿಚರ್ಯಾದಿವರ್ಣನ (೪) ಮಾಯೋತ್ಪತ್ತಿ, ಶೂರಪದ್ಮಾದಿಜನನ, ತಾರಕಕೃತ ದಿಗ್ವಿಜಯಾದಿ ವರ್ಣನ (೫)ಇಲ್ವಲವಾತಾಪಿಜನನ, ಅಗಸ್ತ್ಯಾಗಮನ, ತದಿಲ್ವಲವಾತಾಪಿಮರಣ, ಶಚೀದೇವೀಗ್ರಹಣ, ಅಜಮುಖಾ ಬಾಹುಖಂಡನ,

ಆಶ್ವಾಸದ ಕೊನೆಯಲ್ಲಿಯೂ "ಇದಖಿಲಸುರನರೋರಗಮಕುಟತಟಘಟಿತಶ್ರೀಮತ್ಸಾಂಬಸದಾಶಿವಚರಣಾರವಿಂದದ್ವಂದ್ವ ಭಕ್ತಿರಸನವೀನಮಕರಂದಮತ್ತಮಧುಕರಾಯಮಾಣಮಾನಸಹರಿತಸಗೋತ್ರೋದ್ಭವಭೂಸುರವರ್ಯ **ಲಿಂಗಣಸೂರಿ** ವಿರಚಿತ ಶಿವಕಲ್ಯಾಣ ಪುಣ್ಯಕಥಾಸಮನ್ವಿತ ಯಕ್ಷಗಾನ ಮಹಾಪ್ರಬಂಧದೊಳ್ ......." ಎಂಬ ಗದ್ಯವಿದೆ. ಇದರಿಂದ ಈ ಗ್ರಂಥಕರ್ತೃವು ಹರಿತಸಗೊತ್ರೋದ್ಭವನಾದ ಲಿಂಗಣ್ಣನೆಂಬ ಬ್ರಾಹ್ಮಣನೆಂದೂ ಹಿಂದಿನ ಕಂದಪದ್ಯದಿಂದ ಆತನ ತಂದೆಯ ಹೆಸರು ವೆಂಕಪ್ಪನೆಂದೂ ಗೊತ್ತಾಗುತ್ತದೆ. ಈತನು ಇವೆರಡು ಗ್ರಂಥಗಳಲ್ಲದೆ ಮತ್ತಾವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು; ಈತನ ಮಗನಾದ ವೆಂಕಪ್ಪನು "ಪಾರ್ವತೀವಲ್ಲಭ ಶತಕ" ವನ್ನೂ, ಭಾಮಿನೀಷಟ್ಪದಿಯಲ್ಲಿ "ನರಹರಿವಿಜಯ" ವನ್ನೂ ಬರೆದಿದ್ದಾನೆ.

ಈ ಕವಿಯು "ಕೆಳದೀವರಬಸವೇಂದ್ರಾಶ್ರಿತ" ನೆಂದು ಹೇಳಿಕೊಂಡಿದ್ದಾನೆಯಷ್ಟೆ. ಬಸವಪ್ಪನಾಯಕನೆಂಬ ಹೆಸರಿನವರು ಇಬ್ಬರಿದ್ದಾರೆ. ಇವರಲ್ಲಿ ಮೊದಲನೆಯವನು ಶಕ ೧೬೧೯ರಿಂದ ೧೬೩೬ರ ವರೆಗೆ ಆಳಿದನು. ಇವನಿಗೆ ಹಿರಿಯಬಸವಪ್ಪನಾಯಕನೆಂದು ಹೆಸರು (ಪುಟ ೧೩೦). ಎರಡನೆಯವನು ಶಕ ೧೬೬೧ರಿಂದ ೧೬೭೬ರ ವರೆಗೆ ಆಳಿದನು(ಪುಟ ೧೯೬). ಹಿರಿಯಬಸವಪ್ಪ ನಾಯಕನು ಪಂಡಿತರಿಗೆ ಆಶ್ರ

---

ಜಯಂತಗ್ರಹಣ, ತಾರಕಾಸುರಸಂಗ್ರಾಮಾಭಿವರ್ಣನ, (೬) ಶೂರಪದ್ಮಾದಿನಿಧನ, ಮಂತ್ರಾಲೋಚನ, ಮದನಪ್ರಯಾಣವರ್ಣನ, ತದ್ದಹನ, ರತೀದೇವೀಪ್ರಲಾಪ, ಪಾರ್ವತಿದೇವೀ ಪ್ರಸನ್ನತೆ, ತತ್ತಪೋವರ್ಣನ(೭) ಪಾರ್ವತೀತಪಃಪ್ರಭಾವವರ್ಣನ, ಪರಮೇಶ್ವರಪ್ರಸನ್ನತೆ, ಮನ್ಮಥೋಜ್ಜೀವನ, ಪಾರ್ವತೀಪುರಪ್ರವೇಶ, ಸರ್ವರ್ಷ್ಯಾಗಮನ, ಹಿಮಾಚಲ ಪ್ರವೇಶ, ಉಮಾವಿಹಾರೋತ್ಸವ ಪ್ರಸಂಗ, ಓಷಧಿಪ್ರಸ್ಥ ಪುರವರಾಲಂಕಾರ ವರ್ಣನ, ಪಾರ್ವತೀಪರಿಣಯೋಚಿತವಿಭವಾಲಂಕಾರಾದಿವರ್ಣನ (೮) ಶಿವಕೃತ ಕಲ್ಯಾಣಯಾತ್ರಾ ಮಹೋತ್ಸವ ವರ್ಣನ (೯) ಪಾರ್ವತೀಪರಮೇಶ್ವರಕಲ್ಯಾಣ ವಿಸರಣ ವರ್ಣನ (೧೦) ಪಾರ್ವತೀಪರಮೇಶ್ವರವಿರಚಿತ ಚೂಣೋತ್ಸವವಿಲಾಸ, ರಜತಾಚಲ ಶಿಖರಮಂದಿರ ಪ್ರವೇಶ, ಷಣ್ಮುಖೋತ್ಪತ್ತಿ, ಶೂರಪದ್ಮಸಿಂಹಾಸ್ಯ ತಾರಕಾದಿ ದೈತ್ಯನಿಧನ, ಬ್ರಹ್ಮೇಂದ್ರಾದಿದೇವತಾಸ್ವಸ್ವಪದಪ್ರೇಕ್ಷಣಾದಿವರ್ಣನ.

ಯನಾಗಿದ್ದನೆಂದು ಅವನ ಕಾಲದಲ್ಲಿ ಹುಟ್ಟಿದ ಗ್ರಂಥಗಳಿಂದ ಗೊತ್ತಾಗುತ್ತದೆ [1]. ಇದರಿಂದ ಅವನ ಕಾಲದಲ್ಲಿಯೇ ಲಿಂಗಣ್ಣನೂ ಇದ್ದನೆಂದು ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಈ ಗ್ರಂಥದಲ್ಲಿ ಶಕ ೧೬೮೫ ರ ವರೆಗೂ ನಡೆದ ಚರಿತ್ರೆಯು ಹೇಳಿದೆ. ಆದ್ದರಿಂದ ಈತನು ಎರಡನೆಯ ಬಸವಪ್ಪನ ಕಾಲದಲ್ಲಿ ಎಂದರೆ ಕ್ರಿ. ಶ. ೧೭೫೦ ರ ಸುಮಾರಿನಲ್ಲಿದ್ದನೆಂದು ಹೇಳಬಹುದು. ಈತನು ಜೀವಿಸಿದ್ದ ಕಾಲವನ್ನು ಖಂಡಿತವಾಗಿ ಗೊತ್ತು ಮಾಡುವುದಕ್ಕೆ ಸದ್ಯದಲ್ಲಿ ಯಾವಸಾಧನಗಳೂ ದೊರೆತಿಲ್ಲ.

ಈ ಗ್ರಂಥದ ಒಂದು ನಕಲನ್ನು ಶಕವರ್ಷ ೧೭೨೬ ನೆಯ ಕ್ರೋಧನ ಸಂವತ್ಸರದ ಆಷಾಢಮಾಸದಲ್ಲಿ ಮೇಜರ್ ಮೆಕಂಜ್ಸಿಸಾಹೇಬರ ಕಡೆಯ ಮುತ್ಸದ್ದಿ ನಾರಾಯಣರಾಯರು ಬರೆಸಿಕೊಂಡು ಹೋದರೆಂದು ಒಂದು ಪ್ರತಿಯ ಕೊನೆಯಲ್ಲಿ ಬರೆದಿದೆ. ಇದರಿಂದ ಈ ಕಾವ್ಯವು ಶಕ ೧೬೮೫ರ ಮೇಲೆ ಮತ್ತು ಶಕ ೧೭೨೬ರ ಒಳಗೆ ಎಂದರೆ ಕ್ರಿ. ಶ. ೧೭೬೩ರ ಮೇಲೆ ೧೮೦೪ರ ಒಳಗೆ ಹುಟ್ಟಿತೆಂದು ಹೇಳಬಹುದು.

ಹಳಗನ್ನಡದಲ್ಲಿ ಚರಿತ್ರೆಯನ್ನು ಇದ್ದದ್ದಿದ್ದಹಾಗೆ ಬರೆದ ಗ್ರಂಥಗಳೇ ಇಲ್ಲ. ಆದಿಪಂಪನನ್ನು ಮೊದಲುಮಾಡಿಕೊಂಡು ಅನೇಕ ಕವಿಗಳು ತಮಗೆ ಆಶ್ರಯದಾತರಾದ ರಾಜರಮೇಲೆ ತಮಗೆ ಇದ್ದ ಕೃತಜ್ಞತೆಯನ್ನು ತೋರಿಸುವ ಉದ್ದೇಶದಿಂದ ಚರಿತ್ರಾಂಶಗಳನ್ನು ಗರ್ಭೀಕರಿಸಿ ಕಾವ್ಯಗಳನ್ನೇನೋ ಮಾಡಿದ್ದಾರೆ. ಆದರೆ ಮೊದಲಿನಿಂದ ಕೊನೆಯವರೆಗೂ ರಾಮಾಯಣಭಾರತಾದಿ ಪುರಾಣ ಕಥೆಯನ್ನು ಅವಲಂಬನವಾಗಿಟ್ಟುಕೊಳ್ಳದೆ, ಕವಿಯ ಹಕ್ಕೆಂದು ಅತಿಶಯೋಕ್ತ್ಯಾದ್ಯಲಂಕಾರಗಳನ್ನು ತುಂಬದೆ, ರಾಜನ ಸಂಬಂಧವಾಗಿ ತಾವು ತಿಳಿದ ವಿಷಯಗಳನ್ನು ಯಥಾರ್ಥವಾಗಿ ಬರೆದಿಡಬೇಕೆಂಬ ಉದ್ದೇಶದಿಂದಲೇ ಬರೆದುವುಗಳಲ್ಲ. ಅವರು ಕವಿಗಳು ; ಚರಿತ್ರಕಾರರಲ್ಲ. ಅದಕ್ಕೋಸ್ಕರವೇ ಅವರ ಗ್ರಂಥಗಳು ಒಟ್ಟಿನಮೇಲೆ ಕಾವ್ಯಗಳೇ ಹೊರತು ಚರಿತ್ರೆಗಳಲ್ಲ. ಕನ್ನಡ ಸಾಹಿತ್ಯಕ್ಕೆ ಮಾತೃಸ್ವರೂಪವಾದ ಸಂಸ್ಕೃತದಲ್ಲಿಯೂ, ನಡೆದುದನ್ನು

---

1 ೧೭೫ ಮತ್ತು ೧೭೬ ನೆಯ ಪುಟಗಳನ್ನು ನೋಡಿ.

ನಡೆದಹಾಗೆ ತಿಳಿಸತಕ್ಕ ಚರಿತ್ರಗ್ರಂಥಗಳು ಒಂದೆರಡು ಮಾತ್ರ. ಇದಕ್ಕೆ ಕಾರಣವನ್ನು ಇಲ್ಲಿ ವಿಚಾರಮಾಡಬೇಕಾದುದಿಲ್ಲ. ಒಟ್ಟಿನಲ್ಲಿ ಹಿಂದೆ ನಮ್ಮವರು ಧಾರ್ಮಿಕ ವಿಷಯಗಳಿಲ್ಲದ ಕಾವ್ಯವನ್ನು ರಚಿಸುತ್ತಿದ್ದುದು ಕೇವಲ ಅಪರೂಪ[1]ವೆಂದು ಹೇಳಬಹುದು. ಆದುದರಿಂದ ಒಂದು ಕಡೆ ಚರಿತ್ರೆಯು ಬಣ್ಣವುಳ್ಳ 'ವಿಕ್ರಮಾರ್ಜುನವಿಜಯ' 'ಸಾಹಸ ಭೀಮ ವಿಜಯ' ಮುಂತಾದ ಪೌರಾಣಿಕ ಚಂಪೂ ಕಾವ್ಯಗಳೂ, ಮತ್ತೊಂದು ಕಡೆ 'ಚಿಕ್ಕದೇವರಾಯ ವಂಶಾವಳಿ' ಮುಂತಾದ ಗೌಡಶೈಲಿಭೂಯಿಷ್ಠವಾಗಿಯೂ ಶಬ್ದಾಲಂಕಾರಾರ್ಥಾಲಂಕಾರಪರಿಪೂರ್ಣವಾಗಿಯೂ ಇರುವ ಗದ್ಯಗ್ರಂಥಗಳೂ ಹುಟ್ಟಿದುವು: ಇವುಗಳಿಂದ ಕೆಲವು ಸ್ಥೂಲವಾದ ಐತಿಹಾಸಿಕ ಸಂಗತಿಗಳು ತಿಳಿದುಬರುತ್ತವೇ ವಿನಾ ಆಯಾ ಕಾಲದ ಚರಿತ್ರೆಯು ಪೂರ್ಣವಾಗಿ ಗೊತ್ತಾಗುವುದಿಲ್ಲ.

ಕೆಳದಿನೃಪವಿಜಯವೂ ಇಂತಹ ಗ್ರಂಥವೇ ಆದರೂ ಇದರಲ್ಲಿ ಕಾವ್ಯಾಂಶಕ್ಕಿಂತಲೂ ಚರಿತ್ರಾಂಶವೇ ಹೆಚ್ಚಾಗಿದೆ. ಮೊದಲಿನಿಂದ ಕೊನೆಯವರೆಗೆ ಮುಖ್ಯವಾಗಿ ಕೆಳದಿಯ ಅರಸರ ಚರಿತ್ರೆಯೂ ಪ್ರಾಸಂಗಿಕವಾಗಿ ಚಿತ್ರದುರ್ಗದ ನಾಯಕರು, ಬೇಲೂರ ಅರಸರು, ವಿಜಯನಗರದ ಅರಸರು, ಷಾಹಿರಾಜರು, ಮರಾಟೆರಾಜರು, ಡಿಳ್ಳಿಯ ಸುಲ್ತಾನರು ಇವರ ವಿಷಯವೂ ಹೇಳಿದೆ. ಶಾಸನಗಳನ್ನು ನೋಡಿದರೆ ಇಲ್ಲಿ ಹೇಳಿರುವ ಕೆಳದಿಯ ಅರಸರ ಕಾಲಕಾರ್ಯಾದಿಗಳು ಸತ್ಯವೆಂದು ಹೇಳಬೇಕಾಗುತ್ತದೆ[2]. ರೈಸ್ ಮುಂತಾದ ಪಂಡಿತರೂ ಹಾಗೆಯೇ ಒಪ್ಪಿಕೊಂಡಿದಾರೆ. ಆದರೆ ಈ ಗ್ರಂಥದ ಮಧ್ಯದಲ್ಲಿ ಅಲ್ಲಲ್ಲಿ ಬರುವ ಇತರ ರಾಜರ

---

1 ಮನುಷ್ಯಮಾತ್ರನಾದವನ ಚರಿತ್ರೆಯನ್ನು ಬರೆದುದರಿಂದ ರಾಘವಾಂಕನನ್ನು ಅವನ ಮಾವನಾದ ಹರಿಹರನು ಶಿಕ್ಷೆ ಮಾಡಿದನೆಂದು ಹೇಳುತ್ತಾರೆ.

2 ಆದರೆ ಚೌಡಪ್ಪನಿಗೆ ಹಾವು ನಿಧಿಯನ್ನು ತೋರಿಸಿಕೊಟ್ಟುದು, ದೊಡ್ಡ ಸಂಕಣ್ಣನಾಯಕನು ಡಿಳ್ಳಿಗೆಹೋಗಿ ಅಂಕುಶಖಾನನೊಡನೆ ಹೋರಾಡಿ ಅವನನ್ನು ಗೆದ್ದುದು, ಮುಂತಾದ ಕೆಲವು ಸಂಗತಿಗಳು ಕೇವಲ ಜನಜನಿತವಾದ ಕಥೆಗಳೆಂದು ತೋರುತ್ತದ.

ಚರಿತ್ರೆಗಳು ಮಾತ್ರ ತುಂಡುತುಂಡಾಗಿದ್ದು ಜನರ ಹೇಳಿಕೆಯ ಮಾತಿನ ಮೇಲೆ ಬರೆದಹಾಗೆ ಕಾಣುತ್ತವೆ. ಆದುದರಿಂದ ಅವುಗಳಲ್ಲಿ ಯಾವುದಕ್ಕೂ ಗಮನ ಕೊಡಬೇಕಾದುದಿಲ್ಲ. ಆದರೆ ಇಲ್ಲಿ ಹೇಳಿರುವ ವಿಜಯನಗರದ ಚರಿತ್ರೆ ಮಾತ್ರ ಸ್ವಲ್ಪ ವಿಚಾರಾರ್ಹವಾಗಿದೆ. ಈ ಹೇಳಿಕೆಗೆ ಎಷ್ಟರಮಟ್ಟಿಗೆ ಪ್ರಾಮಾಣ್ಯವನ್ನು ಕೊಡಬೇಕೆಂದು ತಿಳಿಯಬೇಕಾದರೆ ಕೆಳದಿನೃಪವಿಜಯಕ್ಕೆ ಮೂಲಗ್ರಂಥವಾವುದು, ಅದರಲ್ಲಿಯೂ ಈ ವಿಜಯನಗರದ ಚರಿತ್ರೆಯನ್ನು ಗ್ರಂಥಕರ್ತನು ಎಲ್ಲಿಂದ ಸಂಗ್ರಹಿಸಿದನು ಎಂಬುದನ್ನು ತಿಳಿದುಕೊಳ್ಳಬೇಕು.

ಶಕ ೧೬೨೦ ರಿಂದ ೧೬೩೩ರ ವರೆಗೆ ಆಳಿದ ಹಿರಿಯ ಬಸಪ್ಪನಾಯಕನು "ಶಿವತತ್ವರತ್ನಾಕರ" ಎಂಬ ಸಂಸ್ಕೃತ ಗ್ರಂಥವನ್ನು [ಕ್ರಿ. ಶ. 1709ರಲ್ಲಿ] ಬರೆದಿದ್ದಾನೆ. ಇದು ನಾನಾಶಾಸ್ತ್ರಾರ್ಥಸಾರವನ್ನು ಒಳಗೊಂಡಿದೆ. ಇದರ ನಾಲ್ಕನೆಯ ಕಲ್ಲೋಲದ ಹನ್ನೆರಡನೆಯ ತರಂಗದಲ್ಲಿ ವಿಜಯನಗರದ ರಾಜ್ಯಸ್ಥಾಪನೆಯಾದ ಸಂದರ್ಭ, ಅಲ್ಲಿಂದ ಮುಂದೆ ಆಳಿದ ರಾಜರ ಪರಂಪರೆ ಕಾಲ ಮುಂತಾದುವುಗಳು ಹೇಳಲ್ಪಟ್ಟವೆ. ಐದರಿಂದ ಎಂಟು ಕಲ್ಲೋಲಗಳ ವರೆಗೂ ಅಲ್ಲಲ್ಲೆ ಸುಮಾರು ಇಪ್ಪತ್ತು ತರಂಗಗಳಲ್ಲಿ ಕೆಳದಿಯ ರಾಜರ ಚರಿತ್ರೆಯೂ ಬರುತ್ತದೆ[1]. ಕೆಳದಿನೃಪವಿಜಯವು ಈ ಸಂಸ್ಕೃತಗ್ರಂಥದ ಆಧಾರದ ಮೇಲೆ ಬರೆದುದೋ ಅಥವಾ ಇವೆರಡಕ್ಕೂ ಮೂಲವಾಗಿ ಮತ್ತಾವುದಾದರೂ ಗ್ರಂಥವಿದ್ದಿತೋ ಗೊತ್ತಾಗುವುದಿಲ್ಲ. ಅಂತು ನಾಲ್ಕನೆಯ ಕಲ್ಲೋಲದ ಹನ್ನೆರಡನೆಯ ತರಂಗದಲ್ಲಿ ನರಪತಿ ಸಿಂಹಾಸನ ವೃತ್ತಾಂತವನ್ನು ಹೇಳುವಾಗ 'ಹ ಬು ಹೋ ವಿ ಬು ದೇ ರಾ ವಿ ದೇ ವಿ ಮಾ ರಾ ವಿ ಸಂ ಜ್ಞಾ ತಾಃ। ತ್ರಯೋದಶಮಹೀ

[1] ಮ॥ ರಾ॥ ಎಸ್. ಕೃಷ್ಣಸ್ವಾಮಯ್ಯಂಗಾರ್ಯರ "Sources of Vijayanagar History" ಎಂಬ ಗ್ರಂಥದ ೧೯೪–೨೦೨, ೩೩೭–೩೬೪ ಪುಟಗಳನ್ನು ನೋಡಿ. ಆದರೆ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ಶಿವತತ್ವ ರತ್ನಾಕರದ ಪ್ರತಿಯಲ್ಲಿ ಕೆಳದಿಯ ಅರಸುಗೆ ಸಂಬಂಧಪಟ್ಟ ವಿಷಯಗಳೆಲ್ಲಾ ಸಂಪೂರ್ಣವಾಗಿ ಬಿಟ್ಟುಹೋಗಿವೆ. ಏನುಕಾರಣವೋ ತಿಳಿಯದು.

ಪಾಲಾಃ ರತ್ನಸಿಂಹಾಸನಾಧಿಪಾಃ ’ [1] ಎಂಬ ಶ್ಲೋಕವು ಮಧ್ಯದಲ್ಲಿ ಬರುತ್ತದೆ ಈ ಕಲ್ಲೋಲಕ್ಕೆ ವಿದ್ಯಾರಣ್ಯಕೃತಿ [2] (ವಿದ್ಯಾರಣ್ಯರ ಕಾಲಜ್ಞಾನ) ಪಿತಾಮಹ ಸಂಹಿತೆ ಇವು ಮೂಲವೆಂದು ಗೊತ್ತಾಗುತ್ತದೆ [3]. ಈ ಗ್ರಂಥಗಳಲ್ಲಿ ವಿಜಯನಗರದ ಚರಿತ್ರೆಗೆ ಸಂಬಂಧಪಡುವ ಕೆಲವು ಶ್ಲೋಕಗಳಿವೆ [4]. ಇವುಗಳಿಂದ ತಿಳಿಯಬಹುದಾದ ಅಂಶಗಳೇನೆಂದರೆ:—ಹಕ್ಕಬುಕ್ಕರು ಮೊದಲು [ಓರಗಲ್ಲಿನ ರಾಜನಾದ] ವೀರರುದ್ರನಲ್ಲಿ ಕೋಶಾಧಿಕಾರಿಗಳಾಗಿದ್ದರು. ಯವನರು (1323ರಲ್ಲಿ) ಓರಗಲ್ಲಿಗೆ ಮುತ್ತಿಗೆ ಹಾಕಲು ಅಲ್ಲಿಂದ ಹೊರಟು ಶಿಲಾಪುರಿಗೆ [5] ಬಂದು ಅದರ ರಾಜನಾದ ರಾಮನಾಥನಲ್ಲಿ ಕೋಶಾಧಿಕಾರಿಗಳಾಗಿ ನಿಂತರು. ಇಲ್ಲಿ ಸುಲ್ತಾನನ (ಮಹಮ್ಮದ್ ಬಿನ್ ತೊಗಲಕ್ಕನ) ಕೈಗೆ ಸೆರೆಸಿಕ್ಕಿ ಅವನ ಆಜ್ಞೆಯಂತೆ ಕೃಷ್ಣವೇಣೀನದಿಯನ್ನು ದಾಟಿ ಬಲ್ಲಾಳರಾಯನೊಡನೆ ಯುದ್ಧಮಾಡಿ ಸೋತುಹೋದರು. ಆಮೇಲೆ ವಿದ್ಯಾರಣ್ಯರನ್ನು ಕಂಡು ಅವರ ಅನುಗ್ರಹದಿಂದ ಚದರಿಹೋದ ಸೈನ್ಯವನ್ನು ಕೂಡಿಸಿಕೊಂಡು ಪುನಃ ದಂಡೆತ್ತಿಹೋಗಿ ಬಲ್ಲಾಳರಾಜನನ್ನು ಸೋಲಿಸಿ

---

1 ೧೩ನೆಯ ಪುಟವನ್ನು ನೋಡಿ.

ಈಗ್ರಂಥವನ್ನು ಭಾರತೀಕೃಷ್ಣಯತಿಯು ಮಾಡಿದನೆಂದು ಹೇಳಿದೆ. ಯಾವ ಭಾರತೀಕೃಷ್ಣಯತಿಯೆಂದು ಗೊತ್ತಾಗುವುದಿಲ್ಲ. ವಿದ್ಯಾರಣ್ಯರಿಗೆ ಭೋಗನಾಥನೆಂಬ ಒಬ್ಬ ಸಹೋದರರಿದ್ದಂತೆಯೂ ಆತನಿಗೆ ಆಶ್ರಮವನ್ನು ತೆಗೆದುಕೊಂಡಮೇಲೆ ಭಾರತೀ ಕೃಷ್ಣನೆಂಬ ಹೆಸರು ಬಂದಂತೆಯೂ ಗೊತ್ತಾಗುತ್ತದೆ.

3 ಪುರಾಣಸ್ಮೃತಿಸಿದ್ಧಾಂತಾನಿತಿಹಾಸವಿಮಿಶ್ರಿತಾನ್ ।
ವಿದ್ಯಾರಣ್ಯಕೃತಿಂ ಚೈವ ಪಿತಾಮಹಸುಸಂಹಿತಾಂ ॥
ವಿಲೋಕ್ಯಾಯಂ ವಿರಚಿತಃ ಕಲ್ಲೋಲೋಭೂಚ್ಚತುರ್ಥಕಃ ॥

4 ಅವುಗಳನ್ನು ಈ ಉಪೋದ್ಘಾತದ ಕೊನೆಯಲ್ಲಿ ಕೊಟ್ಟಿದ್ದೇವೆ.

5 ಇದನ್ನೇ ಫಿರಿಷ್ಟನು ‘Stronghold among the mountains’ ಎಂದು ಕರೆದಿರಬಹುದು;—ಸ್ಯೂಯೆಲ್ ಸಾಹೇಬರ ‘A Forgotten Empire’ ಎಂಬ ಗ್ರಂಥದ ೧೩ನೆಯ ಪುಟವನ್ನು ನೋಡಿ.

ರಾಜ್ಯಸಂಪಾದನೆ ಮಾಡಿ ಆನೆಗೊಂದಿಯಲ್ಲಿ [ಹಸ್ತಿಕೋಣ] ಆಳುತ್ತಿದ್ದರು. ಒಂದುದಿನ ಇವರು ತುಂಗಭದ್ರಾನದಿಯನ್ನು ದಾಟಿ ಆಚೆಯ ದಡದಲ್ಲಿ ಬೇಟೆಯಾಡುತ್ತಿರುವಾಗ ತಾವು ಅಟ್ಟಿಸಿಕೊಂಡು ಹೋಗುತ್ತಿದ್ದ ಮೊಲವು ಬೇಟೆಯ ನಾಯಿಗಳನ್ನು ಕಚ್ಚಿ ಅದೃಶ್ಯವಾಯಿತು. ಈ ಸ್ಥಳವು ರಾಜಧಾನಿಯನ್ನು ಕಟ್ಟುವುದಕ್ಕೆ ಸರ್ವೋತ್ತಮವಾದುದೆಂದು ತಿಳಿದು ವಿದ್ಯಾರಣ್ಯರು ಅಲ್ಲಿ ವಿಜಯನಗರವನ್ನು ಕಟ್ಟಿಸಿ ಹಕ್ಕನಿಗೆ ಪಟ್ಟಾಭಿಷೇಕ ಮಾಡಿದರು. ಇದು ಶಾ. ಶಕ ೧೨೫೮ರಲ್ಲಿ ಎಂದರೆ ಕ್ರಿ. ಶ. ೧೩೩೬ರಲ್ಲಿ ನಡೆಯಿತು.

ಇಲ್ಲಿ ' ಹ ಬು ಹೋ ವಿ ಬು ದೇ ರಾ ವಿ ದೇ ವಿ ಮಾ ರಾ ವಿ ' ಎಂಬ ಹದಿಮೂರುಜನ ರಾಜರು ಆಳುವರು [1]; ಇವರಲ್ಲಿ ಒಂಬತ್ತನೆಯವನು ಆಳಿದ ಮೇಲೆ ರಾಷ್ಟ್ರಕ್ಷೋಭಾದಿಗಳು ಬಹಳವಾಗುವುವು. ಕೊನೆಯವನು ದೇಶಭ್ರಷ್ಟನಾಗಿ ಶತ್ರುದೇಶದಲ್ಲಿ ಮೃತಿಯನ್ನೈದುವನು. ನೂರೈವತ್ತುವರ್ಷಗಳಲ್ಲಿ ಈ ವಂಶವು ಕೊನೆಗಾಣುತ್ತದೆ. ಇತ್ಯಾದಿ.

ವಿಜಯನಗರರಾಜ್ಯಸ್ಥಾಪನೆಯಾದ ಸಂದರ್ಭವನ್ನು ನ್ಯೂನಿಸ್ ಎಂಬ ಪೋರ್ಚುಗೀಸ್ ಚರಿತ್ರಕಾರನೂ ಸ್ವಲ್ಪ ಹೆಚ್ಚು ಕಡಿಮೆ ಇದೇ ರೀತಿಯಲ್ಲಿ ಹೇಳಿದ್ದಾನೆ. ಇದು ನಿಜವೆಂದು ಕೆಲವರು ಒಪ್ಪುತ್ತಾರೆ ಕೆಲವರು ಒಪ್ಪುವುದಿಲ್ಲ; ಇದರಲ್ಲಿ ಕೆಲವುಭಾಗ ನಿಜವೆಂದು ಸ್ಯೂಯಲ್ ಸಾಹೇಬರ ಅಭಿಪ್ರಾಯವಿರುವಂತೆ ಕಾಣುತ್ತದೆ. ಕ್ರಿ. ಶ. ೧೩೩೬ ರಲ್ಲಿ ವಿಜಯನಗರವು ಸ್ಥಾಪನೆಯಾಯಿತೆಂದು ಇದುವರೆಗಿನ ಚರಿತ್ರಲೇಖಕರೆಲ್ಲರೂ ಒಪ್ಪಿಕೊಂಡಿದ್ದಾರೆ. ಇಲ್ಲಿಂದ ನೂರೈವತ್ತು ವರ್ಷಗಳಿಗೆ ಸರಿಯಾಗಿ "ವಂಶಪೂರ್ತಿ" ಯಾಯಿತೆಂದೂ ಹೇಳಬಹುದು. ಏಕೆಂದರೆ ಎರಡನೆಯ ವಂಶವು ಆರಂಭವಾದದ್ದು ಸಾಳ್ವನರಸಿಂಗನಿಂದ. ಈತನು ೧೪೮೬ ರಲ್ಲಿ ಪಟ್ಟಕ್ಕೆ ಬಂದನು. ಆದರೆ 'ಹಬುಹೋವಿಬುದೇ......' ಎಂಬ ಶ್ಲೋಕಗಳಲ್ಲಿ ಹೇಳಿರುವ ರಾಜಪರಂಪರೆಯೂ ಆಳಿಕೆಯ

---

1 ಈ ಗ್ರಂಥವು "ಕಾಲಜ್ಞಾನ" ವಾದುದರಿಂದ ಭವಿಷ್ಯದ್ರೂಪವು ಉಪಯೋಗಿಸಲ್ಪಟ್ಟಿದೆ.

ಕಾಲವೂ ಚರ್ಚಾಸ್ಪದವಾಗಿವೆ. ಇವುಗಳಲ್ಲಿ ಅಚ್ಯುತರಾಯನಾದಮೇಲೆ ಕೃಷ್ಣರಾಯನು ೪೦ವರ್ಷ ಆಳಿದನೆಂದೂ, ವೀರನರಸಿಂಹನಾದಮೇಲೆ ಸಾಳ್ವನರಸಿಂಹನಾಳಿದನೆಂದೂ ಯಾವ ಚರಿತ್ರಕಾರರೂ ಹೇಳುವುದಿಲ್ಲ. ಆದರೂ ನರಸರಾಜನು ತನ್ನ ಅವಸಾನಕಾಲದಲ್ಲಿ ತನ್ನ ಪಟ್ಟದ ಹೆಂಡತಿಯ ಮಗನಾದ ಅಚ್ಯುತರಾಯನಿಗೆ ಪಟ್ಟವನ್ನು ಕಟ್ಟಿ ಭಂಗಾರದವಳ ಮಗನಾದ ಕೃಷ್ಣರಾಯನು ಯುವರಾಜನಾಗಿದ್ದುಕೊಂಡು ರಾಜ್ಯವಾಳಬೇಕೆಂದು ನೇಮಿಸಿದುದಾಗಿ ಒಂದು ಕಥೆಯು ಪ್ರಚಾರದಲ್ಲಿದೆ.[1] ಮೊದಲನೆಯ ಹರಿಹರರಾಯನಿಂದ ಸಾಳ್ವನರಸಿಂಗನ ವರೆಗೆ ಹದಿಮೂರು ಜನ ರಾಜರು ಆಳಿದಂತೆ ಯಾರೂ ಹೇಳುವುದಿಲ್ಲ. ಸಾಮಾನ್ಯವಾಗಿ ಹಲಜನರು ಪಟ್ಟಕ್ಕೆ ಬಂದಂತೆ ತಿಳಿಸುತ್ತಾರೆ. ಈ ಶ್ಲೋಕದಲ್ಲಿ ಹೇಳಿರುವಂತೆ ಹದಿಮೂರು ಜನರೇ ಆಳಿದ್ದರೆ ಕೆಲವರು ಬಹು ಸ್ವಲ್ಪಕಾಲ ಆಳಿರಬೇಕು.[2] ಇನ್ನು ಕೆಲವರ ಕಾಲದಲ್ಲಿ ಶಾಸನಗಳೇ ಇಲ್ಲದಿರಬಹುದು ; ಒಬ್ಬನು ರಾಜನಾಗಿ ಆಳುತ್ತಿದ್ದಾಗ ಆತನ ತಮ್ಮ ಅಥವಾ ಮಗನ ಹೆಸರಿನಲ್ಲಿಯೂ ಕೆಲವುವೇಳೆ ಶಾಸನಗಳು ಹುಟ್ಟಿರಬಹುದು[3] ; ಇವೇ ಮೊದಲಾದ ಕಾರಣಗಳಿಂದ ವಿಜಯನಗರದ ರಾಜ್ಯವನ್ನು ಆಳಿದ ಅರಸರ ಪರಂಪರೆಯು ಇದುವರೆಗೂ ಸರಿಯಾಗಿ ವ್ಯವಸ್ಥಿತವಾಗಿಲ್ಲ. ಅದು ಹೇಗಾದರೂ ಇರಲಿ, ಮೇಲಿನ ಶ್ಲೋಕದಲ್ಲಿ ಬರತಕ್ಕ ಹದಿಮೂರು ಅಕ್ಷರಗಳಿಗೂ, ಹರಿಹರ I, ಬುಕ್ಕ I, ಹರಿಹರ II, ವಿರೂಪಣ್ಣ (ವಿರೂಪಾಕ್ಷ ?)[4] ಬುಕ್ಕ II, ದೇವರಾಯ I, ರಾಮಚಂದ್ರ, ವಿಜಯ, ದೇವರಾಯ II, ವಿರೂಪಾಕ್ಷ[5]

---

1 'ಸೀತಿಚಿಂತಾಮಣಿ' ಯನ್ನು ನೋಡಿ.

2 ಹೀಗೆ 1404 ರಲ್ಲಿ ಸ್ವಲ್ಪಕಾಲ ವಿರೂಪಾಕ್ಷನು ಆಳಿದಂತ ತೋರುತ್ತದೆ.

3 ಈ ಪದ್ಧತಿಗೆ ಕೆಳದಿನೃಪವಿಜಯದಲ್ಲಿಯೇ ಒಂದು ಉದಾಹರಣೆ ಇದೆ. ಪುಟ ೪೯—೬೦.

4 ವಿರೂಪಣ್ಣನಾದರೆ ಎರಡನೆಯ ಹರಿಹರನ ತಮ್ಮನಾಗಬಹುದು; ವಿರೂಪಾಕ್ಷನಾದರೆ ಅವನ ಜ್ಯೇಷ್ಠಪುತ್ರನಾಗಬಹುದು. (ಎರಡನೆಯವನಲ್ಲ).

5 ಈತನು ಎರಡನೆಯ ದೇವರಾಯನ ಹಿರಿಯಮಗನಾಗಿರಬಹುದೇ? ಈತನು ಬಹಳ ಸ್ವಲ್ಪಕಾಲವಾಳಿರಬಹುದು.

ಮಲ್ಲಿಕಾರ್ಜುನ, ರಾಜಶೇಖರ,[1] ವಿರೂಪಾಕ್ಷ ಎಂದು ಅರ್ಥಮಾಡಿದರೆ ಸಂಗತವಾಗುವಂತೆ ತೋರುತ್ತದೆ.

ವಿಜಯನಗರದ ಅರಸರಿಗೂ ಕೆಳದಿಯ ನಾಯಕರಿಗೂ ಬಹುಕಾಲ ಸಂಬಂಧವಿತ್ತು. ಕೃಷ್ಣರಾಯರು[2] ಪ್ರಬಲನಾಗುತ್ತಿದ್ದ ಚೌಡಪ್ಪ ನಾಯಕನನ್ನು ಕರೆಸಿ ಅವನಿಂದ ಆದ ಸಹಾಯಕ್ಕೆ ಪ್ರತಿಫಲವಾಗಿ ಕೆಳದಿ ಮುಂತಾದ ಗಣಿಗಳ ಮೇಲೆ ಅಧಿಕಾರವನ್ನು ಕೊಟ್ಟನೆಂದೂ ಆಮೇಲೆ ಚೌಡಪ್ಪನಾಯಕನಿಗೆ ಶಕ ೧೪೨೨ರಲ್ಲಿ ಎಂದರೆ ಕ್ರಿ. ಶ. ೧೫೦೦ ರಲ್ಲಿ ಪಟ್ಟವಾಯಿತೆಂದೂ ಗೊತ್ತಾಗುತ್ತದೆ.[3] ಶಿವಪ್ಪನಾಯಕನ ಕಾಲಕ್ಕೆ ವಿಜಯನಗರದ ರಾಜ್ಯವು ಕ್ಷೀಣದೆಸೆಗೆ ಬಂದು ಶ್ರೀರಂಗರಾಯನು ಅಸಹಾಯನಾಗಿರಲು, ಶಿವಪ್ಪನಾಯಕನು "ಬೇಲೂರಂ ತೆಗೆದುಕೊಂಡು ಶ್ರೀರಂಗರಾಯಗಿತ್ತು ರಾಜಸಂಸ್ಥಾನಮಂ ನೆಲೆಗೊಳಿ"ಸಿದನು. ಈ ಶಿವಪ್ಪನಾಯಕನೇ ಇಕ್ಕೇರಿಯ ಅರಸರಲ್ಲೆಲ್ಲ ಪ್ರಸಿದ್ಧನು. ಈತನ ಸುಪ್ರಸಿದ್ಧವಾದ ಸಿಸ್ತಿನ ವಿಚಾರವಾಗಿ ಈ ಗ್ರಂಥದಿಂದ ಯಾವುದೂ ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಆದರೆ ವ್ಯವಸಾಯವನ್ನು ಹೆಚ್ಚಿಸಿ ಒಂದು ಗೋಷ್ಪಾದದಷ್ಟು ಭೂಮಿಯನ್ನು ಕೂಡ ಪಾಳು ಬೀಳಿಸದಂತೆ ರೈತರಿಗೆ ಬೇಕಾದಷ್ಟು ಸಹಾಯವನ್ನು ಕಲ್ಪಿಸಿಕೊಟ್ಟು "ನೆರೆವರಿ ವರಾಡ" ಮುಂತಾದ ದಂಡಗಳನ್ನೂ ಅನ್ಯಾಯವಾದ ತೆರಿಗೆಗಳನ್ನೂ

---

[1] "There are inscriptions which indicate unmistakably that Mallikarjuna's son Raja Sekhara succeeded followed probably by Virupaksha II" —*A Little known chapter of Vijaya Nagar History* by Prof. S. Krishnaswami Iyengar p. 21.

[2] ಈ ಗ್ರಂಥದಲ್ಲಿ ಮೊದಲು ಅಚ್ಯುತರಾಯನೆಂದ, ಆಮೇಲೆ ಕೃಷ್ಣರಾಯನೆಂದೂ ಹೇಳಿದೆ. ಪುಟ ೧೯—೨೦

[3] ಕೃಷ್ಣರಾಯನು ೧೫೦೯ ರಲ್ಲಿ ಪಟ್ಟಕ್ಕೆ ಬಂದನೆಂದು ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ಆದುದರಿಂದ ಇದಕ್ಕೆ ಸಾಂಗತ್ಯವನ್ನು ಹೇಳುವುದು ಕಷ್ಟವಾಗಿದೆ.

ತಪ್ಪಿಸಿ, "ಸೀಮೆಯುಂ ರಕ್ಷಿಸಿದಂ" ಎಂದೂ, ಇವನ ಕಾಲದಲ್ಲಿ ಕಳ್ಳ ಕಾಕರಕಾಟವಿರಲಿಲ್ಲವೆಂದೂ, ಕಳವುಮಾಡಿದ ಒಂದು ನರಿಯನ್ನೂ ಹಿಡಿತರಿಸಿ ಶಾಸ್ತಿಯಂ ಮಾಡಿಸಿದನೆಂದೂ ಗೊತ್ತಾಗುತ್ತದೆ. ಇಕ್ಕೇರಿಯ ಅರಸರಿಗೆ "ಎಡವಮುರಾರಿ, ಕೋಟೆಕೋಲಾಹಲ, ಏಕಾಂಗಿವೀರ, ದೋನೇಜ, ದೋಖಂಡೆರಾಯ, ವೈರಿಸಪ್ತಾಂಗಹರಣ, ಪಶ್ಚಿಮಸಮುದ್ರಾಧೀಶ್ವರ, ವಿಶುಧ್ಧಾದ್ವೈತಸಿದ್ಧಾಂತಪ್ರತಿಷ್ಠಾಪನಾಚಾರ್ಯ" ಎಂಬ ಬಿರುದುಗಳು ಇದ್ದುವು. [1]

ಇವರಿಗೂ ಮೈಸೂರಿನವರಿಗೂ ಪದೇಪದೇ ಯುದ್ಧವಾಗುತ್ತಲೇ ಇತ್ತು. ಇವರುಗಳು ಎಂದೂ ಪರಸ್ಪರ ಮೈತ್ರಿಯಿಂದ ಇದ್ದಹಾಗೆ ಕಾಣುವುದಿಲ್ಲ. ಅದಕ್ಕೋಸ್ಕರವೇ ಮೈಸೂರಿನ ರಾಜರ ಪ್ರಸ್ತಾಪ ಬಂದಾಗಲೆಲ್ಲಾ 'ಮಾಯಾವಿಗಳು' ಅಥವಾ 'ಮಾಯಾವಾದಿಗಳು' ಎಂಬ ಪದವು ಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆ. ಮತ್ತು ಅವರ "ಮದೋದ್ರೇಕವನ್ನು ಮಗ್ಗಿಸಿದ"ನೆಂದು ಮುಂತಾಗಿ ಹೇಳಲ್ಪಟ್ಟಿದೆ. [2]

ಈ ನಾಯಕರು ವೀರಶೈವಮತಾವಲಂಬಿಗಳು. ಇವರು ಜನಸಾಮಾನ್ಯರಿಗೂ ಉಪಯೋಗವಾಗುವಂತೆ ತಟಾಕಾರಾಮಾಗ್ರಹಾರಾದಿಗಳನ್ನು ಕಲ್ಪಿಸಿಕೊಟ್ಟರು. ಶೃಂಗೇರಿಯಮಠ, ಕೃಷ್ಣಾನಂದಸ್ವಾಮಿಗಳಮಠ, ಇವುಗಳಿಗೆ ಬೆಂಬಲವಾಗಿ ನಿಂತು ಸಹಾಯಮಾಡಿದರು. ಇದರಂತೆ ಶೈವ ವೈಷ್ಣವ ದೇವಾಲಯಗಳಿಗೂ ಜೈನರ ಬಸದಿಗಳಿಗೂ ಮಹಮ್ಮದೀಯರ ಮಸೀದಿಗಳಿಗೂ ಅಗ್ರಹಾರಕ್ಷೇತ್ರಾರಾಮಗಳನ್ನು ಕೊಟ್ಟಂತೆ ತಿಳಿಯಬರುತ್ತದೆ.

ಇವರ ಕಾಲದಲ್ಲಿ ರಾಮೇಶ್ವರದೇವಸ್ಥಾನ, ವೀರಭದ್ರದೇವಸ್ಥಾನ ಅಘೋರೇಶ್ವರದೇವಸ್ಥಾನ, ಮುಂತಾದ ವಿಚಿತ್ರತರವಾದ ಶಿಲ್ಪಕೆಲಸ

---

1 ೩೩; ೩೮, ೭೩, ೭೪, ೮೯, ಪುಟಗಳನ್ನು ನೋಡಿ. ರೈಸ್‌ಸಾಹೇಬರು "ಎಡವಮುರಾರಿ" ಎಂಬ ಬಿರುದಿಗೆ ಬೇರೆ ಕಾರಣವನ್ನು ಹೇಳುತ್ತಾರೆ.

2 ಪುಟ, ೯೯, ೧೧೪, ೧೧೮, ೧೧೯, ೧೨೫, ೧೩೩, ೧೩೫, ೧೭೪, ೧೮೦, ೧೮೧, ೧೮೮, ೧೮೯, ೨೦೫,

ಗಳಿಂದ ಕೂಡಿದ ಕಟ್ಟಡಗಳು ಕಟ್ಟಲ್ಪಟ್ಟುವು. ಹಿರಿಯ ವೆಂಕಟಪ್ಪ ನಾಯಕನು "ಇಕ್ಕೇರಿಯ ಅರಮನೆಯೊಳ್ ವಿಚಿತ್ರತರರಚನಾಕೌಶಲ್ಯದಿಂ ನಾಟಕಶಾಲೆಯುಂ ನಿರ್ಮಾಣಂಗೈಸಿ"ದನು. ಆತನು ವಿದ್ವಾಂಸರಿಗೆ ಕೊಟ್ಟ ಆಶ್ರಯದಿಂದ ತಿರುಮಲಭಟ್ಟರ ಕರ್ಣಾಟ ಶಿವಗೀತೆ, ಶಿವಾಷ್ಟಪದಿ, ಗೀತಗೌರೀವರ, ರಂಗನಾಥದೀಕ್ಷಿತನ ತಂತ್ರಸಾರವ್ಯಾಖ್ಯಾನ ಮುಂತಾದ ಗ್ರಂಥಗಳು ಹುಟ್ಟಿದುವು. ಆಮೇಲೆ "ಸೂರಿನಿಕರ ಕಲ್ಪದ್ರುಮ"ನೆಂದು ಹೊಗಳಿಸಿಕೊಂಡ ಹಿರಿಯ ಬಸಪ್ಪನಾಯಕನು ಕೊಟ್ಟ ಪ್ರೋತ್ಸಾಹದಿಂದ ಮಂತ್ರಿ ಷಡಕ್ಷರಯ್ಯನ ವೀರಶೈವಧರ್ಮ ಶಿರೋಮಣಿ, ಸಂಗಮೇಶ್ವರನ ಶಿವಸಹಸ್ರನಾಮವ್ಯಾಖ್ಯಾ, ಮರಿತೋಂಟದಾರ್ಯನ ವೀರಶೈವಾನಂದಚಂದ್ರಿಕೆ ಮುಂತಾದ ಗ್ರಂಥಗಳು ಹುಟ್ಟಿದುವು. ಹಿರಿಯ ಬಸಪ್ಪನಾಯಕನ ಹೆಸರಿನಲ್ಲಿಯೇ ಶಿವತತ್ವರತ್ನಾಕರ, ವೀರಶೈವಸಂಜೀವಿನೀ, ಸುಭಾಷಿತಸುರದ್ರುಮ, ಸೂಕ್ತಿಸುಧಾಕರ ಎಂಬ ನಾಲ್ಕು ಸಂಸ್ಕೃತಗ್ರಂಥಗಳಿವೆ. ಇವಲ್ಲದೆ ಇವರ ಕಾಲದಲ್ಲಿ ಇನ್ನೂ ಹಲವುಗ್ರಂಥಗಳು ಹುಟ್ಟಿದುವೆಂದು ಊಹಿಸುವುದಕ್ಕೆ ಕಾರಣವಿದೆ.

ಕೆಳದಿನೃಪವಿಜಯವು ಚಂಪೂಗ್ರಂಥ; ನಾವು ನೋಡಿದ ನಾಲ್ಕು ಪ್ರತಿಗಳಲ್ಲಿ ಒಂದರಲ್ಲಿಯೂ ಇದರ ಪೀಠಿಕಾಪ್ರಕರಣವು ಕಂಡುಬರುವುದಿಲ್ಲ. ಈ ಪ್ರತಿಗಳಿಗೆಲ್ಲ ಮೂಲವಾಗಿದ್ದಿರಬಹುದಾದ ಮಾತೃಕೆಯಲ್ಲಿಯೇ ಗ್ರಂಥಪಾತವಾಗಿ ಈ ಭಾಗವು ಬಿಟ್ಟುಹೋಗಿತ್ತೋ, ಅಥವಾ ಕವಿಯು ಬರೆಯಲೇ ಇಲ್ಲವೋ ತಿಳಿಯದು. ಅಂತು ಇತರ ಚಂಪೂಗ್ರಂಥಗಳಲ್ಲಿರುವಹಾಗೆ ಕವಿಸಂಪ್ರದಾಯವನ್ನನುಸರಿಸಿ ಸಮುದ್ರವರ್ಣನೆ, ಮೇರು ಪರ್ವತದ ವರ್ಣನೆ, ಜಂಬೂದ್ವೀಪದ ವರ್ಣನೆ, ಕರ್ಣಾಟಕದೇಶದ ವರ್ಣನೆ ಮುಂತಾದವುಗಳು ಕ್ರಮವಾಗಿ ಬರುತ್ತವೆ.

ಆದಿಭಾಗದಲ್ಲಿ ವಿಶೇಷವಾಗಿಯೂ ಮುಂದೆ ಅಲ್ಪಸ್ವಲ್ಪವಾಗಿಯೂ ಶಬ್ದಾಲಂಕಾರ ಅರ್ಥಾಲಂಕಾರ ಮುಂತಾದ ಕಾವ್ಯಚಮತ್ಕಾರಗಳು ಕಂಡುಬರುತ್ತವೆ. ಇಷ್ಟುಪಟ್ಟರೆ ಕವಿಯು ಪ್ರೌಢವಾಗಿಯೂ

ಮನೋಹರವಾಗಿಯೂ ಬರೆಯ ಬಲ್ಲನು.[1] ಸಂಕಣನಾಯಕನು ಅಂಕುಶಖಾನನೊಡನೆ ಮಾಡಿದ ಕಾಳಗವು ಬಹು ಸ್ವಾರಸ್ಯವಾಗಿ ವರ್ಣಿಸಲ್ಪಟ್ಟಿದೆ. ಆದರೆ ಒಟ್ಟಿನಮೇಲೆ ನೋಡಿದರೆ ಚರಿತ್ರಕಥನಕ್ಕೇ ಹೆಚ್ಚು ಪ್ರಾಶಸ್ತ್ಯ ಕೊಟ್ಟಿರುವಹಾಗೂ, ಪ್ರೌಢಕಾವ್ಯರಚನೆಯನ್ನೇ ಮುಖ್ಯೋದ್ದೇಶ್ಯವನ್ನಾಗಿಟ್ಟುಕೊಳ್ಳದಿದ್ದಂತೆಯೂ ಕಾಣುತ್ತದೆ. ಅದರಿಂದಲೇ ಇದರಲ್ಲಿ ದೊಡ್ಡದೊಡ್ಡ ವೃತ್ತಗಳು ಕಡಿಮೆ; ಕಂದಗಳು[2] ಮತ್ತು ಗದ್ಯವೇ ಹೆಚ್ಚಾಗಿ ಉಪಯೋಗಿಸಲ್ಪಟ್ಟಿವೆ. ಭಾಷೆಯು ಸುಲಭವಾಗಿದೆ. ಹಳಗನ್ನಡವಾದರೂ ಅದರ ಬಿಗಿಯಿಲ್ಲ; ಹೊಸಗನ್ನಡರೂಪಗಳೂ ಪ್ರಯೋಗಗಳೂ ಹೇರಳವಾಗಿವೆ; ಮರಾಟಿ ಅಥವಾ ಹಿಂದೂಸ್ಥಾನಿಯ ಪದಗಳು ಅಲ್ಲಲ್ಲೇ ಉಪಯೋಗಿಸಲ್ಪಟ್ಟಿವೆ. ಉದಾ:—ಗನೀಮ, ಜಿಲೆಯ, ತಕತ್, ಬಕತರ, ಬೊಕ್ಕಸೀಸ, ಮೀರುಮಾನಿ, ಸಲಾಮು, ಹುಕುಂ, ಇತ್ಯಾದಿ. ಈತನು 'ಅನಂತರ' ಎಂಬ ಅರ್ಥದಲ್ಲಿ 'ನಂತರ' ಎಂಬ ಪದವನ್ನು ಉಪಯೋಗಿಸುತ್ತಾನೆ. ಇದನ್ನು ಸಾಧುವೆಂದು ಹೇಳುವುದಕ್ಕಾಗುವುದಿಲ್ಲ. ಆದರೂ ಮರಾಟಿಯಲ್ಲಿ ಈ ರೂಪವುಂಟು. ಆದುದರಿಂದ ಇದು ತದ್ಭವರೂಪವೆಂದು

---

1 ಇದಕ್ಕೆ ಉದಾಹರಣೆಯಾಗಿ II ೪೨, ೬೯, III ೬೫; ೬೬; V ೩೦ VII ೧೯, ೨೧, ೪೧; ಈ ಪದ್ಯಗಳನ್ನು ಹೇಳಬಹುದು.

2 ಈ ಕವಿಯು, ಕಂದದ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕುನಾಲ್ಕು ಮಾತ್ರೆಗಳ ಮೂರುಮೂರು ಗಣಗಳಿರಬೇಕೆಂಬ ನಿಯಮವನ್ನಿಟ್ಟುಕೊಂಡಂತಿಲ್ಲ. ಒಟ್ಟು ಹನ್ನೆರಡುಮಾತ್ರೆಗಳಾದರೆ ಸರಿಯೆಂದು ಭಾವಿಸಿದಹಾಗೆ ತೋರುತ್ತದೆ. ಆದುದರಿಂದ ಅಲ್ಲಲ್ಲೇ ಮೂರುಮಾತ್ರೆಯ ಒಂದು ಗಣ, ಐದುಮಾತ್ರೆಯ ಒಂದುಗಣ, ಆಮೇಲೆ ನಾಲ್ಕು ಮಾತ್ರೆಯ ಒಂದುಗಣ ಈರೀತಿ ಹನ್ನೆರಡು ಮಾತ್ರೆಗಳುಳ್ಳ ಎಷ್ಟೋ ಕಂದಪಾದಗಳು ಕಂಡುಬರುತ್ತವೆ. ಅಂಥ ಪಾದಗಳನ್ನು ನಕ್ಷತ್ರ ಚಿಹ್ನೆಯಿಂದ ಗುರುತುಮಾಡಿದ್ದೇವೆ. ಹೀಗೆಯೇ 'ಜಗಣಂ ವಿಷಮದೊಳಾಗದು, ಜಗಣಂ ಮೇಣ್ ನಗಣಮಕ್ಕೆಯಾರನೆಯಡಿಯೊಳ್' ಎಂಬ ಸೂತ್ರಕ್ಕೂ ವಿರೋಧವಾಗಿ ಬರೆದ ಕೆಲವು ಕಂದಗಳಿವೆ. ಉದಾ:—X 103, XI 5, XII 2,

ಕವಿಯ ಅಭಿಪ್ರಾಯವಿರಬಹುದು. ಆದರೆ ಇದರಂತೆ, ವಡ್ಡಿ, ಪ್ರತಿದಿನಂಗಳ್, ಪೆಣ್ಮಣಿಗಳಂ ವಿವಾಹಮಂ ರಚಿಸಿ, ದೇವಾಲಯಮಂ ನಿರ್ಮಾಣಮಂ ರಚಿಸಿ, ಇತ್ಯಾದಿ ಪ್ರಯೋಗಗಳಿಗೆ ಸಾಧುತ್ವವನ್ನು ಕಲ್ಪಿಸುವುದು ಸುಲಭವಲ್ಲ.

ಗ್ರಂಥವು ಆರಂಭವಾದುದು ಹೇಗೋ ಮುಗಿಯುವುದೂ ಹಾಗೆಯೇ. ಕೊನೆಯಲ್ಲಿಯೂ ಮಂಗಳಶ್ಲೋಕಾದಿಗಳು ಇಲ್ಲ.

ಎ. ಆರ್. ಕೃಷ್ಣಶಾಸ್ತ್ರಿ.

---

# ವಿದ್ಯಾರಣ್ಯಕಾಲಜ್ಞಾನದ ಶ್ಲೋಕಗಳು.

---

I

ಏತಸ್ಮಿನ್ನಂತರೇ ಕಾಲೇ ಕುರುವಂಶಪ್ರಸೂತಿಜೌ ।
ಕೋಶಾಗಾರಪ್ರತೀಹಾರೌ ವೀರರುದ್ರಮಹೀಪತೇಃ ॥
ಆಗತೌ ಯವನಾಕ್ರಾಂತಾವಸಹಾಯೌ ಶಿಲಾಪುರೀಂ ।
ರಾಮನಾಥಂ ನಿಷೇವಾತೇ ರಾಜಾನಂ ಕೋಶಪಾಲನೇ ॥

ಸಾಮ್ರಾಜ್ಯಲಕ್ಷಣೋಪೇತೌ ಮಹೋರಸ್ಕೌ ಮಹಾಭುಜೌ
ಉಡುಪೇನ ಸಮುತ್ತೀರ್ಯ ಕೃಷ್ಣವೇಣೀಂ ಸಮಾಗತೌ ।
ಬಲ್ಲಾಳಕ್ಷಿತಿಪಾಲೇನ ಯುದ್ಧಂ ಕೃತ್ವಾ ಪರಾಜಿತೌ ॥

. . . . . . . . . . . . . . . . . . . . . . . . . . . .

ಅನುಜ್ಞಾಪ್ಯ ತತೋ ಗತ್ವಾ ಬಲ್ಲಾಳಕ್ಷಿತಿಪಂ ಪುನಃ ।
ವಿಜಿತ್ಯ ರಾಜ್ಯಮಾಕ್ರಮ್ಯ ಹಸ್ತಿಕೋಣಾಹ್ವಯೇ ಪುರೇ ॥

. . . . . . . . . . . . . . . . . . . . . . . . . . . .

II

ಪುರಾ ದ್ವೌ ಪುರುಕ್ಷೌ ವೀರೌ ಭ್ರಾತರೌ ತು ಯಶಸ್ವಿನೌ ।
ಗೃಹೀತೌ ತೌ ಸುರತ್ರಾಣಭಟ್ಯೈರ್ನಿರ್ಗತ್ಯ ಸಂಸ್ಥಿತೌ ॥
ಸುರತ್ರಾಣಗೃಹೀತೌ ತೌ ತತ್ರೈಕದಿವಸಾತ್ಯಯೇ ।
ರಾತ್ರಾವಶನಿಪಾತಾಂಬುಮೇಘಘೋಷನಿರಾಕುಲೌ ॥

ದ್ವಾರಭಿತ್ತ್ಯಾಸ್ಸಮೀಪಸ್ಥೌ ಸುರತ್ರಾಣೇಪಿ ನಿದ್ರಿತೇ ।
ಬಹಿರ್ನಿರ್ಗತ್ಯ ತೌ ಪೃಷ್ಟೌ ಕಾವೇತಾವತ್ರ ಸಂಸ್ಥಿತೌ ॥

ಗೃಹೀತೌ ಭ್ರಾತರೌ ಮತ್ವಾ ಸತ್ಯಸಂಧೌ ತತಸ್ಸುಧೀಃ ।
ತಯೋರ್ದತ್ವಾದೇಶಮಾದೌ ಕರ್ಣಾಟಂ ತು ವಿಸೃಷ್ಟವಾನ್ ॥

ತೇನಾಜ್ಞಪ್ತೌ ತು ತೌ ವೀರೌ ಶೀಘ್ರಮಾಗತ್ಯ ತೌ ನದೀಂ ।
ಉಡುಪೇನ ಸಮುತ್ತೀರ್ಯ ಕೃಷ್ಣವೇಣೀಂ ಸಮಾಗತೌ ॥
ಬಲ್ಲಾಳಕ್ಷಿತಿಪಾಲೇನ ಯುದ್ಧಂ ಕೃತ್ವಾ ಪರಾಜಿತೌ ।
ವನಮಧ್ಯೇ ಪರಿಶ್ರಾಂತೌ ವೃಕ್ಷಮೂಲಮುಪಾಶ್ರಿತೌ ॥

. . . . . . . . . . . . . . . . . . . . . . . . .

ತಸ್ಮಿನ್ನೇವ ಕ್ಷಣೇ ಪೂರ್ವಂ ಭಗ್ನಂ ಸೈನ್ಯಂ ಸಮಾಗತಂ ।
ಕ್ರೋಡೀಕೃತ್ಯ ತದಾ ಸರ್ವಂ ವಿದ್ಯಾರಣ್ಯಮುನೀಶ್ವರಂ ॥
ದದರ್ಶತುರ್ವದಾನ್ಯೌ ತೌ ತೇನಾಶೀರ್ವಚನಾದಿಭಿಃ ।
ಅನುಜ್ಞಾತೌ ತದಾ ವೀರಬಲ್ಲಾಳನೃಪತಿಂ ಪುನಃ ॥
ನಿರ್ಜಿತ್ಯ ರಾಜ್ಯಮಾಕ್ರಮ್ಯ ಶಾಸತುರ್ಬಾಹುಶಾಲಿನೌ ।
ತದಾ ಹಿ ಕ್ಷೇತ್ರನಿಕ್ಷಿಪ್ತಂ ಸಿಂಹಪೀಠಂ ಪ್ರಲೇಭತುಃ ॥
ಲಬ್ಧ್ವಾ ತು ಸಿಂಹಪೀಠಂ ಚ ಸಮಾಗತ್ಯ ಸಮಾಶ್ರಿತೌ ।
ತುಂಗಭದ್ರಾನದೀತೀರೇ ಹಸ್ತಿಕೋಣಾಹ್ವಯೇ ಪುರೇ ॥

ತಸ್ಮಿನ್ನೇವ ತು ಕಾಲೇ ಚ ಮೃಗಯಾಂ ಗಂತುಮುದ್ಯತೌ ।
ತುಂಗಭದ್ರಾನದೀಂ ತೀರ್ತ್ವಾ ದಕ್ಷಿಣೇ ದಿಗ್ವಿಭಾಗಕೇ ॥

. . . . . . . . . . . . . . . . . . . . . . . . . . .

ತಚ್ಛ್ರುತ್ವಾ ವಚನಂ ಯೋಗೀ ಸಮಯಾತಸ್ತದನ್ವಿತಃ ।
ತಾಂ ಸ್ಥಲೀಂ ಸ ಸಮೀಕ್ಷ್ಯಾಥ ರಾಜಧಾನೀಂ ಮಹೀಕ್ಷಿತಾಂ ॥
ತದ್ವಂಶಜಾನಾಮನ್ಯೇಷಾಂ ಕರ್ತುಮೇವೋಪಚಕ್ರಮೇ ।
ದಿಕ್ಸಂಖ್ಯಾಬಾಣಯುಕ್ತದ್ವಿಚಂದ್ರೈರ್ಯುಕ್ತಶಕಾ (೧೨೫೮) ನ್ವಿತೇ ॥

ಧಾತ್ವಬ್ದೇ ಸಿತಸಪ್ತಮ್ಯಾಂ ವೈಶಾಖೇ ಮಾಸಿ ಭಾಸ್ಕರೇ ।
ಸುಲಗ್ನೇ ಶುಭನಕ್ಷತ್ರೇ ಮಾಘಾಖ್ಯೇ ಚ ವಿಶೇಷತಃ ॥

ರಚಿತಾ ನಗರೀ ರಮ್ಯಾ ಪುರುಷಾಕೃತಿಶಾಲಿನೀ ।

. . . . . . . . . . . . . . . . . . . . . . . . . .

ತಸ್ಯಾಂ ಪುರ್ಯಾಂ ಚ ರಾಜಾನಸ್ತ್ರಯೋದಶ ಯಥಾಕ್ರಮಂ ।
ಹ ಬು ಹೋ ವಿ ಬು ದೇ ರಾ ವಿ ದೇ ವಿ ಮಾ ರಾ ವಿ ಸಂಜ್ಞಿತಾಃ ॥
ಭವಿಷ್ಯಂತಿ ಮಹೀಪಾಲಾಃ ಕರ್ಣಾಟಕ್ಷಿತಿಮಂಡಲೇ ।

. . . . . . . . . . . . . . . . . . . . . . . . . . . .

ಭೂಪಾಲೇ ನವಮೇ ಯಾತೇ ರಾಷ್ಟ್ರಕ್ಷೋಭಾದಿಕಂ ಬಹು ।
ಭವಿಷ್ಯತಿ ತತೋ ರಾಜ್ಯಂ ತ್ರಿಭಿರೇವ ಹಿ ಪಾಲ್ಯತೇ ॥
ತತೋ ವೈ ನಗರೀ ಸಾ ತು ಪಾಲ್ಯತೇ ಕೃಚ್ಛ್ರತೋ ನೃಪೈಃ ।
ತದ್ವಂಶಪ್ರಭವೋಂತ್ಯಸ್ತು ಶತ್ರುಭಿಃ ಪರಿಪೀಡಿತಃ ॥

ಪ್ರಪಲಾಯ್ಯ ನದೀಂ ತೀರ್ತ್ವಾಪ್ಯನ್ಯದೇಶಂ ಸಮಾಶ್ರಿತಃ ।
ಮರಿಷ್ಯತಿ ನ ಸಂದೇಹಃ . . . . . . . . . . . . .

. . . . . . . . . . . . . . . . . . . . . . . . . . . . . .

ಪಂಚಾಶದುತ್ತರಶತೇ ವಂಶಪೂರ್ತಿರ್ಭವಿಷ್ಯತಿ ।

. . . . . . . . . . . . . . . . . . . . . . . . . .

. . . . . . . .ಇತಿ ಸಂಪ್ರೋಕ್ತಂ ಪುರಾ ಪೃಷ್ಟೇನ ಧೀಮತಾ ।

. . . . . . . . . . . . . . . . . . . . . . . . . . .

ವಿದ್ಯಾರಣ್ಯೇನ ಯತಿನಾ ರಾಜ್ಞೇ ಹರಿಹರಾಯ ಚ ॥

ತತ್ಸರ್ವಂ ತನ್ಮುಖಾಚ್ಛ್ರುತ್ವಾ ವಿದ್ಯಾರಣ್ಯಸಕಾಶತಃ ।
ಭಾರತೀಕೃಷ್ಣಯತಿನಾ ನೃಪಾಣಾಮಾವಳಿಸ್ತಥಾ ॥
ಕಾಲಸಂಖ್ಯಾ ಚ ಕರ್ಣಾಟಕ್ಷಿತಿದೇಶೇ ಯಥಾಕ್ರಮಂ ।
ಆಖ್ಯಾತೋ ಗ್ರಂಥರೂಪೇಣ ವಿದ್ಯಾರಣ್ಯಸ್ಯಚಾಜ್ಞಯಾ ॥

# ಶೋಧನಪತ್ರ.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 1 | 2 | ಸಲೀಲೇಖ | ಸಲಿಲೇಖ |
| 2 | 21 | ನಿಲಿಸೆ | ನಿಲಿಸಲ್ |
| 6 | 19 | ಗಳಧ್ವದೊಳ್ | ಗಳಧ್ವದೊಳ್ |
| 9 | 6 | ಭೂರ್ಜವಂಚೌಡ | ಭೂರ್ಜವಂಹಿತಚೌಡ |
| ,, | 8 | ರನೆಸಿ | ರೆನಿಸಿ |
| ,, | 10 | ಭುಂಪಿ | ಬುಂವಿ |
| ,, | 14 | ವೃಧ್ಧಿಯುಂ | ವೃದ್ಧಿಯುಂ |
| ,, | ,, | ಕೂವಮಾರಗೆ | ಕುಂವುಾರಗೆ |
| 10 | 12 | ಪರವಂಹರ್ಷಿತ | ಪರಮಹರ್ಷಿತ |
| 11 | 7 | ನೆಳ್ಬಟ್ಟಲ್ಕೆ | ನೆಳ್ಬಟ್ಟಲ್ಕೆ |
| 13 | 7 | ದುತ್ಕಲಷ | ದುತ್ಕಲಸ್ಟ |
| 14 | 24 | ಕಟ್ಟಿಸಿ | ಕಟ್ಟಿಸಿ |
| 17 | 3 | ಸಂಸ್ಥಿತಾಃ | ಸಂಜ್ಞಿತಾಃ |
| ,, | 8 | ತ್ರಿಸ್ತ್ರತೋ | ತ್ರೀಂಸ್ತ್ರತೋ |
| 19 | 9 | ದಸೆವಂತ | ದೆಸೆವಂತ |
| 21 | 18 | ಗಳನಿತ್ತು | ಗಳುಮನಿತ್ತು |
| ,, | 23 | ಪುಂಡದ್ದು 1 | ಪುಂಡೆದ್ದು 3 |
| ,, | 26 | 1 ವಾರಾವರ್ಜಲಿತು | 3 ವರಾವರ್ಜಲಿತು |
| 22 | 18 | ಕಾಲಕೇಯು | ಕಾಳಕೇಯು |
| 23 | 1 | ಪ್ರಥಮು | ಪ್ರಥಮಾ |
| 24 | 8 | ವುರುಳ್ದು | ಮುರಳ್ದು |
| ,, | 17 | ದೊಡೆಂಮು | ದೊಡೆವ್ನು |
| 36 | 11 | ದಿರ್ಚಿದಾ | ದಿದಿರ್ಚಿದಾ |
| 39 | 3 | ಗಳನಿತ್ತು | ಗಳುಮನಿತ್ತು |
| 43 | 3 | ೧೪೮೬ | ೧೪೬೮ |

K. N. VIJAYA

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 45 | 7 | ಮಾದುತಿಲ್ಲಂ | ಮಾಡುದಿಲ್ಲಂ |
| 54 | 16 | ಸಿಟ್ಟಿಸಿದಂ | ನಿಟ್ಟಿಸಿದಂ |
| 59 | 22 | ಶಿಲಾವುಯುವ | ಶಿಲಾವುಯುಂಗಳ |
| ,, | 26 | ಜಂಗವುವಾಟ | 2 ಜಂಗವು ವಾಟ |
| 60 | 2 | ಳಂದತಿ | ಳೊಂದತಿ |
| 62 | 10 | ನತಂರ | ನಂತರ |
| 64 | 12 | ಪರ್ಯತಂ | ಪರ್ಯಂತಂ |
| 82 | 20 | ಶೃಂಗೆರಿ | ಶೃಂಗೇರಿ |
| 85 | 2 | ತೊರೆಯುಲ್ಲಂ | ತೊರೆಯೆಲ್ಲಂ |
| 95 | 6 | ವಿರವೊಡೆಯು | ವೀರವೊಡೆಯು |
| 98 | 7 | ಸೈನ್ಯಂವೆ | ಸೈನ್ಯಂ |
| 100 | 25 | ಶ್ಯಾನುಭೋಗ | 2 ಶ್ಯಾನುಭೋಗ |
| 108 | 19 | ಮೂರ್ವರೊಳ್ | ಮೂವರೊಳ್ |
| 141 | 8 | ಹಾಶಾ | ಶಾಹಾ |
| 145 | 1 | ಗೀಜಗನು | ಗೀಜಗನ |
| 148 | 1 | ಕಿರಿ | ಕಿರು |
| 158 | 1 | ಂತಲ್ಲದ | ಅಂತಲ್ಲದ |
| 164 | 3 | ವೇಡ್ಯೈಸ | ವೇಢ್ಯೈಸ |
| 166 | 3 | ಮುಂದಿ | ಮುದಿ |
| ,, | 10 | ಮಹಾಯುದ | ಮಹಾಯುದ್ಧ |
| ,, | 17 | ಮೌಜರ್ದಿನ್ನನ | ಮೌಜದಿನ್ನನ |
| 172 | 16 | ಮಾಡಿದರ | ಮಾಡಿದಂ |
| 180 | 1 | ಕರದೊಯ್ದು | ಕರೆದೊಯ್ದು |
| 186 | 20 | ಭಾಧಿಸು | ಬಾಧಿಸು |
| 188 | 24 | ಮುಜ್ಜಲ | ದುಜ್ಜ್ವಲ |
| 189 | 6 | ಸಂವತ | ಸಂವತ್ಸ |
| 202 | 1 | ಸಂಪಾಧಿಸಿ | ಸಂಪಾದಿಸಿ |

# ವಿಷಯಸೂಚಿಕೆ.

ಪುಟ.

---

ಶ್ರೀಃ

# ಕೆಳದಿನೃಪವಿಜಯಂ.

## ಪ್ರಥಮಾಶ್ವಾಸಂ.

ಈಕೃತಿಗಾದಿಯಾವುದೆನಲುಜ್ಜ್ವಲತುಂಗತರಂಗಸಂಚರ
ದ್ಭೀಕರಮೀನಕರ್ಕಟಕಕೂರ್ಮ ಕನತ್ಸಲೀಲೇಭನಕ್ರದ ।
ರ್ವೀಕರಶಿಂಶುಮಾರಮುಖವಾಶ್ಚರಸಂಚಯಚಾಲನೋಚ್ಚಲ
ಚ್ಛೀಕರಫೇನಕಂಬುಕುಲರತ್ನಗಳಿಂದೆಸೆದತ್ತು ಸಾಗರಂ ॥ ೧

ಹರನ ನಿಷಂಗವಚ್ಯುತನ ಪಾಸು ಜಲೇಶನ ರಾಜಮಂದಿರಂ
ನಿರುಪಮಮಪ್ಪ ಲಕ್ಷ್ಮಿಯ ತವರ್ಮನೆ ಚಂದ್ರನ ಜನ್ಮಭೂಮಿ ಭೂ ।
ಧರವರಪುತ್ರನುದ್ಘಕವಚಂ ಬಡಬಾನಲಪಾನಪಾತ್ರಮು
ತ್ತ್ಯುರುತರಮಪ್ಪ ಸನ್ಮಣಿಗಳಾಗರಮೊಪ್ಪಿದುದೈದೆ ಸಾಗರಂ ॥ ೨

ವಳಿ ತೋಳ್ ಸುಳಿ ಚಕ್ರಂ ನೊರೆ
ಯೆಳನಗೆ ಬೊಬ್ಬುಳಿಗಳುದರದೊಳಗಣಜಾಂಡಾ ।
ವಳಿ ನೀರ್ತನುರುಚಿ ಬಡಬಾ
ನಲನಂಬರಮಾಗಲಬುಧಿ ಹರಿಯು ವೊಲೆಸೆಗುಂ ॥ ೩

ಮತ್ತಮದಲ್ಲದಾಮಹಾರ್ಣವಂ ಸಾರ್ವಭೌಮವಿಭವದಂತಪರಿಮಿತವಾಹಿನೀಸಂಗತಮುಂ, ನಂದಗೋಕುಲದಂತೆ ಕಂಸಾರಾತಿರಮಣೀಯಮುಂ, ವೈನತೇಯನಂತೆ ವಿಲಸದ್ವಿಷ್ಣುಪದಾವಲಂಬಿಯುಂ, ವಸಂತ

---

* ನಮ್ಮಲ್ಲಿರುವ ಎರಡು ಪ್ರತಿಗಳಲ್ಲಿಯೂ ಗ್ರಂಥವು ಹೀಗೆಯೇ ಆರಂಭವಾಗಿದೆ. ಮಂಗಳಶ್ಲೋಕಾದಿಗಳು ಹೋಗಿದ್ದರೂ ಹೋಗಿರಬಹುದು.

ಸಮಯದಂತುಜ್ಜ್ವಲತ್ಕಳಿಕಾಪ್ರತಾನಪ್ರಶೋಭಿತಮುಂ, ಜ್ಯೋತಿಶ್ಚಕ್ರದಂತೆ ಮನೋಹರಮೀನಮಿಥುನಕರ್ಕಟಕರಾಶಿಸಮಾವೃತಮುಂ, ಮಾರ್ತಾಂಡನಂತುಜ್ಜ್ವಲಾಬ್ಜಕದಂಬಸಮುಚ್ಛ್ರಯಕಾರಿಯುಂ, ಯೋಗಿಜನದಂತೆ ಮುಕ್ತಾಮಯಮುಂ, ಕಂದರ್ಪನಂತನವರತಮನುಪಮಾಗಣ್ಯಲಾವಣ್ಯಸ್ವಭಾವಮುಂ, ಶಶಾಂಕೋದಯದಂತೆ ಕುವಲಯೋತ್ಸವಕಾರಿಯುಮೆನಿಸಿ ವಿಭ್ರಾಜಿಸುತ್ತಿರ್ದುದಂತುಮಲ್ಲದೆಯುಂ ॥ ೪

ತಿಳಿಯಲ್ಕತಿಚಂಚಲೆ ಮಗ
ಳಿಳೆಯುಂ ಪೂಗಣ್ಣನಾತ್ಮಜಂ ಕ್ಷಯಿ ಮೊಮ್ಮಂ ।
ಬಡಲಿಲಿ ಯೆನುತುಂ ಚಿಂತಿಸಿ
ಸಲೆ ಸುಯ್ವವೊಲಾದುದಬ್ಧಿಯದ್ಭುತರಾವಂ ॥ ೫

ಅಮರರ್ಗಮೃತಾಶನರೆಂ
ದುಮೆಯಾಣ್ಮಗೆ ನೀಲಕಂಠನೆಂದಚ್ಯುತಗಂ ।
ಕ್ರಮದಿಂ ಕಮಲಾಪತಿ ಯೆಂ
ದಮರ್ದಿರೆ ಪೆಸರಿತ್ತ ಜಲಧಿಯೇಂ ರಂಜಿಸಿತೋ ॥ ೬

ಇಂತೆಸೆವಂಬುಧಿಮಧ್ಯದೊ
ಳಂತವೆ ಕಂಗೊಳಿಸುತಿರ್ಪ ಜಂಬೂದ್ವೀಪಾ ।
ಬ್ಜಾಂತರದ ಚಾರುಕರ್ಣಿಕೆ
ಯಂತಿರೆ ಕನಕಾಚಲಂ ವಿರಾಜಿಸುತಿರ್ಕುಂ ॥ ೭

ಜಲಜಜವಿಷ್ಣುವಿವಾದವ
ನಿಲಿಸೆ ಕಲ್ಪಾಂತದೆಡೆಯೊಳಾಗದತಿತೇಜೋ ।
ಜ್ಜ್ವಲದಿವ್ಯಮಹಾಲಿಂಗದ
ನಿಲವೆನೆ ಚಲ್ವಾಯ್ತು ಕಣ್ಗೆ ಕಾಂಚನಶೈಲಂ ॥ ೮

ಮಿಸುಪಾ ಮೇರುವ ತೆಂಕಣ
ದೆಸೆಯೊಳ್ಪೂರ್ವಾಪರಾಂಬುನಿಧಿಗಳನವೆಗಾ ।

ಹಿಸಿ ನಭಮಂ ತುಡುಕುತೆ ಕ
ಣ್ಗೆಸೆದುದು ಹಿಮವನ್ನಗೇಂದ್ರಮುರುಗುಣಸಾಂದ್ರಂ ॥ ೯

ಮೇನಾಧಾರಂ ವಿನತಾ
ಸೂನುವಿನೊಲ್ಸತ್ಪಥಾಶ್ರಯಂ ಸುಜನನೊಲಾ ।
ಯ್ತೊನಗಮಸ್ತ್ರೀಕೃತಜಿತ
ದಾನವನೊಲನಂತಕಟಕಭೂಷಿತಪಾದಂ ॥ ೧೦

ಇಂತು ಹಿಮಾಚಲಂ ವಿರಾಜಿಸುತ್ತುಮಿರಲ್ ॥ ೧೧

ಆ ಗಿರಿಯ ದಕ್ಷಿಣಾಶಾ
ಭಾಗದೊಳುರೆ ಕರ್ಮಭೂಮಿಸಂಜ್ಞೆಯಿನಧಿಕ ।
ಶ್ರೀಗೆಡೆಯೆನಿಸಿ ಮನೋಹರ
ಮಾಗಿರ್ಪುದು ಭರತಖಂಡಮನಘಕರಂಡಂ ॥ ೧೨

ಇಂತೆಸೆವ ಭರತಖಂಡದ ತೆಂಕಣಾಶಾಭಾಗದೊಳ್ನಾನಾವಿಧವರ್ಣಾಶ್ರಮಸುಖಸಂಪತ್ಸಮಾಜಕಾಸ್ಪದಮೆನಿಸಿ ಮೆರೆವ ಕನ್ಯಾಖಂಡಪ್ರದೇಶದೊಳ್ ॥ ೧೩

ಅಗಣಿತತೀರ್ಥನದೀನದ
ನಗಪುಣ್ಯಾರಣ್ಯವಿಷಯಸುಕ್ಷೇತ್ರಸಮೂ ।
ಹಗಳಗೆಡೆಯೆನಿಸಿ ಮಿಗೆ ಝಗ
ಝಗಿಪುದು ಸಹ್ಯಾಚಲಂ ಮಹಾಸುಖಮೂಲಂ ॥ ೧೪

ಆ ಸಹ್ಯಾದ್ರಿಯೊಳೊಪ್ಪುವ
ದೇಶಂಗಳೊಳಧಿಕಮೆನಿಸಿ ನಿರುಪಮಲಕ್ಷ್ಮೀ ।
ಕೋಶಂ ವಿಲಸತ್ಪುಣ್ಯನಿ
ವೇಶಂ ಕರ್ಣಾಟದೇಶಮುರೆ ರಂಜಿಸುಗುಂ ॥ ೧೫

ಕೆರೆಯಿಂ ಕಾಳ್ಪುರದಿಂ ಕನತ್ಕುವಲಯಾಂಭೋಜಂಗಳಿಂ ಶೋಭಿಪೊ
ಳ್ಸರದಿಂ ಪುಷ್ಪಲತಾಪ್ರತಾನಲಸದಾರಾಮಪ್ರದೇಶಂಗಳಿಂ ।

ತೊರೆಯಿಂ ರಾಜಿಸ ಗಂಧಶಾಲಿವನದಿಂ ಕ್ರೀಡಾದ್ರಿಯಿಂ ಕಣ್ಗೆ ಭಾ
ಸುರಮಾಗಿರ್ದುದು ದೇಶಮುನ್ನತಸುಖಾವಾಸಂ ದಲೇಂ ವರ್ಣಿಪೆಂ ॥೧೬

ಮತ್ತಮದಲ್ಲದಾದೇಶಂ ಸ್ವರ್ಲೋಕದಂತೆ ಸುರುಚಿರಸುರಭಿಸುಮನೋವೃಕ್ಷಪರಿಶೋಭಿತಮುಂ, ಸುತ್ರಾಮನೋಲಗಶಾಲೆಯಂತೆ ಸುಧರ್ಮಾನ್ವಿತಮುಂ, ವಧೂಪಯೋಧರದಂತಗ್ರಹಾರಮಾಲಾಲಂಕೃತಮುಂ ಗಗನಮಂಡಲದಂತೆ ಭಾಸ್ವದ್ದ್ವಿಜರಾಜಾಭಿರಾಮಮುಂ, ಅಳಕಾನಗರದಂತಗಣ್ಯಪುಣ್ಯಜನಾಧಿಷ್ಠಿತಮುಂ, ಸಮಾಸಚಕ್ರದಂತೆ ಬಹುವ್ರೀಹಿಸಮಾವೃತಮುಂ, ಪದ್ಮಪೀಠನಂತನಂತನಿಗಮಾಶ್ರಯಮುಂ, ನಾರಾಯಣನಂತೆ ಸುದರ್ಶನೋಪಸೇವ್ಯಮುಂ, ಮಹಾದೇವನಂತಚಲಿತದುರ್ಗಾಸ್ಪದಮುಮೆನಿಸಿ ವಿರಾಜಿಸುತಿರ್ದುದಂತುಮಲ್ಲದೆಯುಂ ॥ ೧೭

ಪುಸಿ ಕಳವು ಪಾದರಂ ಜೇ
ವಸಮುಟ್ಟುಳಿ ದಾಳಿ ತೌಳಿಯುಪಹೃತಿ ಮೋಸಂ ।
ಪಿಸುಣನ್ಯಾಯಮೆಸಿಪ್ಪೀ
ಪೆಸರ್ಗಳ್ ಪೆಸರ್ಗೊಂಬೊಡಿಲ್ಲಮಂತಾನಾಡೊಳ್ ॥ ೧೮

ಮತ್ತಮಂತುಮಲ್ಲದೆ ॥ ೧೯

ಪೊಡೆ ಯೆಂಬರ್ಶಾಲಿಯನಾ
ರಡಿ ಯೆಂಬರ್ಷಟ್ಪದಾಳಿಯುಂ ಕರಿಣಿಯುಮಂ ।
ಪಿಡಿ ಯೆಂಬರಲ್ಲದೀಪರಿ
ನುಡಿಯೊಲಿಪೊಡಿಲ್ಲ ಜನರೊಳಂತಾ ನಾಡೊಳ್ ॥ ೨೦

ಕಡೆ ಯೆಂಬರ್ದಧಿಮಥನದೊ
ಳೊಡೆಯೆಂಬರ್ಭಕ್ಷ್ಯಭೇದದೊಳ್ ಕಬರಿಗಳೊಳ್ ।
ಮುಡಿ ಯೆಂಬರಲ್ಲದೀ ಬಿರು
ನುಡಿ ಕನಸಿನೊಳಾದೊಡಂ ವಿಚಾರಿಪೊಡಿಲ್ಲಂ ॥ ೨೧

ಅಳಿಯಿಲ್ಲದಬ್ಜಮಬ್ಜಾ
ಮಳಿಯಿಲ್ಲದ ಸರಸಿ ಸರಸಿಯಿಲ್ಲದ ಸನ್ನಂ ।

ಜುಳನಂದನಮುರುನಂದನ
ಕುಳಮಿಲ್ಲದ ಪೊಳಲ್ಗಳಿಲ್ಲವೆಂತಾನಾಡೊಳ್ ॥ ೧೧

ಮತ್ತಮದಲ್ಲದೆ ॥ ೧೨

ಎಳಎಲರಿಂದೊಡೆದೊಸರ್ವ
ಜ್ಜ್ವಲಧವಳೇಕ್ಷುಗಳ ಸಾಳಿ[1] ಕಾಲ್ಗಳನೆತ್ತಂ ।
ಬೆಳದಾ ಶಾಲಿವನಂ ಕಂ
ಗೊಳಿಪುದು ಭೂವನಿತೆಯುಟ್ಟ ಪೊಂಬಟ್ಟೆಯವೋಲ್ ॥ ೧೪

ನೆರೆ ತಿಳದು ನಿಂದ ನೀರೊಳ್
ತರದಿಂ ಮಾರ್ಪೊಳವ ಶಾಲಿಮಂಜರಿನಿಕರಂ ।
ವರಭೂಸಾರತೆಯಿಂ ತಾ
ನುರೆ ಬೇರೊಳ್ ಬೇರೆ ಫಲಿಸಿತೆಂಬವೊಲೆಸೆಗುಂ ॥ ೧೫

ಮತ್ತಮದಲ್ಲದೆ ॥ ೧೬

ಜಲಜಜನಮರ್ದಂ ಬೆಳ್ಳಿಯ
ಕೊಳವಿಗಳೊಳ್ ತುಂಬಿ ಗಂಟನೊಂದಿಸಿ ಗರುಡಂ ।
ತಿಳಿಯದೊಲವನಿಳೆಯೊಳ್ನಲೆ
ಗೊಳಿಸಿದನೆನೆ ಮೆರೆದುದಮಳಪುಂಡ್ರೇಕ್ಷುವನಂ ॥ ೧೭

ಹರಿಯೊರ್ಮೆಯುಮರ್ದನಮರ
ರ್ಗೆರೆದೊಡೆ ನವಸುಧೆಯನೆರೆದಪವು ನಿಮಗನಿಶಂ ।
ನರರಿತ್ತ ಬನ್ನಿಮೆನುತುಂ
ಕರೆವಂತಿರೆ ಮೊರೆವುವಿಕ್ಷುಯಂತ್ರಪ್ರಚಯಂ ॥ ೧೮

ಮತ್ತಮದಲ್ಲದೆ ॥ ೧೯

ಮಿಂಚುವ ಪೊಸನೆಲ್ದನೆಗಳ
ಗೊಂಚಲ್ಗಳನಡಸಿ ಬಾಯ್ಗಳೊಳ್ ನಲಿಯುತ್ತುಂ ।

---

1 ಸಾಲು (ಕ)

ಚಂಚುಗಳಿನಲೆವ ಗಿಳಿಗಳ
ಸಂಚಯಮಂ ಸೋವುತಿರ್ಪರುರೆ ಪಾಮರಿಯರ್ ॥ ೨೦

ಸಲೆ ಸೋವ್ವಪಾಮರಿಯರು
ಜ್ವಲಿಪಧರವನೀಕ್ಷಿಸುತ್ತೆ ಪಣ್ತುರುಬಿಂಬೀ ।
ಫಲವೆಂದು ಕರ್ದುಕಬಗೆದವ
ರ್ಗಳ ಸಿರಿಮೊಗಕೆರಪುವಲ್ಲಿ ಗಿಳಿಗಳ ಬಳಗಂ ॥ ೨೧

ನೋಡಿ * ನಗುವಬಲೆಯರ ಪ
ಲ್ಗಾಡಿಯನಭಿವೀಕ್ಷಿಸುತ್ತೆ ಪರಿಪಕ್ವಲಸ ।
ದ್ದಾಡಿಮಿಯ ಬೀಜವೆನುತೆಡೆ
ಯಾಡುತೆ ಕಾಲ್ದೆಗೆಯುತಿರ್ಪುವಾಕೀರಂಗಳ್ ॥ ೨೨

ಮತ್ತಮದಲ್ಲದಾದೇಶದೊಳ್ ॥ ೨೩

ಪೊಸ ಪೂಗಳ್ ರಸದಿಕ್ಷು
ಪ್ರಸರದ ಪೊಲಗಳ್ ಸುನಾರಿಕೇಳಫಲಾಂಭೋ ।
ವಿಸರದ ಪರಿಕಾಲಗಳನುಡು
ಪಸಮೂಹದೆ ಪೊಯ್ವುದಲ್ಲಿ ಪಾಂಥಸಮಾಜಂ ॥ ೨೪

ಬಾಳೆಯ ಬಟ್ಟೆಗಂಬಗಳಿಸಿಕ್ಷುಗಳೋಳ್ದಲೆಯಿಂದಮಂಬುರು
ಹ್ನಾಳದ ಜಂತೆಯಿಂ ಪೊಸತಳಿರ್ವಸೆಯಿಂ ಹಿಮವಾರಿಪೂರ್ಣಕುಂ ।
ಭಾಳಿಯಿನಚ್ಚಮಲ್ಲಿಗೆಯ ಕುಚ್ಚದೆ ಬಾಳದ ಪಂದಲಿಂ ಪ್ರಪಾ
ಶಾಲೆಗಳಧ್ವದೋಳ್ ಸ್ಮರವಿವಾಹಗೃಹಂಗಳೊಲಾವಿರಾಜಿಕುಂ ॥ ೨೫

ಮತ್ತಮಲ್ಲಿ ೨೬

ನೀರೆರೆವಳ ತೋಳ್ಮೊದಲಿಂ
ಗೇರಿರೆ ಕುಡಿವರಿದು ದಿಟ್ಟೆ ಸರಿಸದ ಪೊಯ್ವೀ ।
ಧಾರೆ ಪೊರಸೂಸೆ ಪಾಂಥ
ನೀರೆಯರಂ ಬಾಂಗೆ ಬಾಯ ಬಿಟ್ಟುರೆನಗಿಪರ್ ॥ ೨೭

* ಸೋವಬಲೆಯರ್ (ಖ, ಕ)

ಕುಂದದೆ ನೀರೆರೆವಳ ಸು
ಯ್ಮಂದಸ್ಮಿತರೋಚಿ ಮುಸುಕಿ ಪರಿಮಳಿಸುತೆ ಬೆ |
ಳ್ಪೊಂದಿರೆ ಕುಡಿನೀರ್ ತನುಗಿದು
ಚಂದನರಸಮೆಂದು ಪೂಸಬಗೆವರ್ ಪಾಂಥರ್ ॥ ೩೮

ಇಂತನವರತಮಶೇಷಸುಖಸಂಪತ್ಸಮಾಜದಿಂದಾದೇಶಂ
ವಿರಾಜಿಸುತ್ತುಮಿರಲ್ ॥ ೩೯

ಅದರೊಳ್ ಮ್ಯೈಮೆಯಿನೆಸೆವಾ
ತ್ರಿದಶತರಂಗಿಣಿಗಮಧಿಕಮೆನಿಸುವ ವರದಾ |
ನದಿಮೂಲಮೊಪ್ಪುಗುಂ ತ
ನ್ನದಿಯುತ್ತರತಟದೊಳರ್ಧಯೋಜನದೆಡೆಯೊಳ್ ॥ ೪೦

ಆ ಕರ್ಣಾಟಕದೇಶದ
ಭೂಕಾಂತೆಯ ವಕ್ತ್ರಪದ್ಮಮೆನೆ ರಾಜಿಸುಗುಂ |
ಶ್ರೀಕರಮೆನಿಸಿಯಜಸ್ರಂ
ನಾಕವನಿಳಿಕೈದ ಕೆಳದಿ ಯೆಂದೆನಿಪ ಪುರಂ ॥ ೪೧

ಶ್ರೀಮತ್ಕೆಳದಿಯ ಪೊಳಲೊಳ್
ಹೈಮವತೀರಮಣನೆಸೆವಲಿಂಗಾಕೃತಿಯಿಂ |
ರಾಮೇಶ್ವರಾಖ್ಯೆಯಂ ತಳೆ
ದಾಮಹಿಯೊಳ್ ಪುತ್ತದಲ್ಲಿ ನೆಲೆಸಿರುತಿರ್ದಂ ॥ ೪೨

ಆ ಪುರದ ಮುಂತಣಿಳೆಯ ಸ
ಮೀಪದೊಳುತ್ತಾಗಿ ಚೆಲ್ವ ಪಳ್ಳಿಯ ಬಯಲೆಂ |
ಬಾ ಪಳ್ಳಿ ಕೃಷಿಕಜನಸ
ದ್ವ್ಯಾಪಾರನಿಳಿಂಪವಲ್ಲಿ ಯಾರಾಜಿಸುಗುಂ ॥ ೪೩

ಮಿನುಪಾ ಪಳ್ಳಿಯಬಯಲೆಂ
ದೆನಿಪೂರಿನ ಮೂಲಿ ಬಸವಪಂ ಕೃಷಿಕವರ್ಯ |

ಭ್ಯನುಪಗತಜೀವನಂ ತಾ
ನೆನೆಸಿ ವಿರಾಜಿಸುತ್ತುಮಿರ್ದನದರೊಳಜಸ್ರಂ ॥ ೪೪

ಮತ್ತಮದಲ್ಲದಾಬಸವಪಂ ಪರಶಿವಮೂರ್ತಿಸ್ವರೂಪಬಸವೇಶ್ವರಾಂಶೀಭೂತನಪ್ಪ ಕಾರಣಪುರುಷನುಂ ಲಿಂಗಾಂಗಸಂಬಂಧಿಷಟ್ಸ್ಥಲಜ್ಞಾನಾನುಸಂಧಾನಮಹಾನುಭವಪ್ರಾಜ್ಞನುಂ, ನಿರುಪಮನಿರಾಭಾರಿವೀರಶೈವಸದಾಚಾರಾಚರಣಸಂಪನ್ನನುಂ, ಶ್ರೀಗುರುಲಿಂಗಜಂಗಮಪದಾಂಬುಜಸೇವಾತತ್ಪರಾಮಲಚಿತ್ತನುಮೆನಿಸಿ ವಿರಾಜಿಸುತಿರ್ದನಂತುಮಲ್ಲದೆಯುಂ ॥ ೪೫

ಹರಪದಪಯೋಜಭೃಂಗಂ
ಸುರುಚಿರಶಿವಶರಣಸಂಗಮುಪಗತಭಂಗಂ ।
ದುರಿತಧ್ವಾಂತಚಯಾಹ
ಸ್ಕರನೆಂದಿಳೆ ಪೊಗಳೆ ಬಸವಪಂ ರಾಜಿಸಿದಂ ॥ ೪೬

ಅನುಪಮತದ್ಬಸವಪನಂ
ಗನೆ ವಿಲಸಿತಬಸವಮಾಂಬೆ ವಿಶ್ರುತಸೀಮಂ ।
ತಿನಿಯುರಧಿದೇವಿಯುತಿಪಾ
ವನತರಸಚ್ಚರಿತೆ ಯೆನಿಸಿ ರಾರಾಜಿಸಿದಳ್ ॥ ೪೭

ರತಿ ರೂಪಿನೊಳೊಪ್ಪುವರುಂ
ಧತಿ ಪತಿಭಕ್ತಿಯೊಳ್ ಜಾಣ್ಮೆಯೊಳ್ಖ್ಯಾತನಭಾ ।
ರತಿ ನಿರ್ಮಲಮತಿ ಶೋಭಾ
ವತಿ ಯೆಂದಿಳೆ ಪೊಗಳೆ ತದ್ಯುವತಿ ಕರಮೆಸೆದಳ್ ॥ ೪೮

ಆ ಪುಣ್ಯಸ್ತ್ರೀಯುದರ
ಶ್ರೀಪಾರಾವಾರದೊಳ್ಸುಧಾಕರನೆನೆ ಸ ।
ಮ್ರೂಪಂ ನಿರುಪಮಸುಗುಣಕ
ಲಾಪಂ ಚೌಡಪನೆನಿಪ್ಪ ಸುತನುದಯಿಸಿದಂ ॥ ೪೯

ಇಂದುವಿನೊಡನುಜ್ಜ್ವಲಿಸುವ
ಮಂದಾರಂ ಜನಿಸಿದಂತೆ ತಚ್ಚೌಡಪಭೂ |
ಚಂದಿರನೊಡನುರುಭದ್ರಪ
ನೆಂದೆಂಬ ಕುಮಾರನೊಗೆದು ರಾರಾಜಿಸಿದಂ ॥ ೫೦

ಆ ಪರತರಬಸವಪಕುಲ
ದೀಪರ್ಭೂಮಂಚೌಡಪಂಭದ್ರಪನೆಂ |
ಬಾಪುಣ್ಯಪುರುಷರುಜ್ಜ್ವಲ
ರೂಪಾನ್ವಿತರೆನೆಸಿ ಮೆರೆದರಿನಶಶಿಗಳವೊಲ್ ॥ ೫೧

ಅವರೀಶನಾಣ್ತೆಯಿಂ ಜನ
ನಿವಹವನುದ್ಧರಿಸೆ ಭುವಿಯೊಳೊಗೆದತಿಮಹಿಮಾ |
ರ್ಣವರತಿಕಾರಣಪುರುಷ
ರ್ಶಿವಮತತತ್ವಜ್ಞರೆಂದು ಬಲ್ಲವರುಸಿರ್ವರ್ ॥ ೫೨

ಇಂತೆಸೆವ ಕುಮಾರರೊಗೆದನಂತರಮಾಬಸವಪಂ ಭಾಗ್ಯಾಭಿವೃದ್ಧಿಯಂ ಪಡೆದು ಸಂತಸವಡುತ್ತೆ ಕುಮಾರರ್ಗೆ ಯೌವನೋದಯಮಾಗಲೊಡನೆ ಸತ್ಕುಲಸಂಭವೆಯರಪ್ಪ ಕನ್ಯಾರತ್ನಂಗಳಂ ವಿವಾಹಮಂ ರಚಿಸಿ ಕತಿಪಯದಿವಸಮಿರ್ದು ಶಿವಸಾಯುಜ್ಯವನೈದಲೊಡನೆ ತತ್ಪತ್ನಿಯಪ್ಪ ಬಸವಮಾಂಬಿಕೆಯಾಪುತ್ರರಿರ್ವರಂ ಪ್ರೋಷಿಸಲಿವರ್ಗಳ್ ದಿನದಿನದೊಳ್ ವರ್ಧಿಷ್ಣುಗಳಾಗಿ ಪಳ್ಳಿವಯಲ ಗ್ರಾಮದೊಳ್ ಸ್ವಪಿತ್ರಾರ್ಜಿತಕೃಷ್ಯಾರಂಭಾದಿವ್ಯಾಪಾರದ್ವಾರದಿಂ ಪರಮಾಭಿವೃದ್ಧಿಯಂ ಪಡೆದು ಪಟುತರಭುಜಬಲಶಾಲಿಗಳೆನಿಸಿ ವಿರಾಜಿಸುತಿರ್ದನಂತರದೊಳ್, ॥ ೫೩

ವರವೀರಶೈವಕುಲಶೇ
ಖರಬಸವಪಪುತ್ರಚೌಡಪಂ ಶ್ರೀರಾಮೇ |
ಶ್ವರಕೃಪೆಯಿಂ ತತ್ಕೆಳದಿಯ
ಪುರವರ ಸಿಂಹಾಸನಕ್ಕಧೀಶ್ವರನಾದಂ ॥ ೫೪

ಅದೆಂತೆಂದೊಡಿಂತು ವಿರಾಜಿಸುತ್ತಮಿರ್ಪ ಭದ್ರಪಾಗ್ರಜನಪ್ಪ ಚೌಡಪನ ಸ್ವಪ್ನದೊಳ್ ಶ್ರೀಮತ್ಪರಮೇಶ್ವರಂ ಮನಂಗೊಳಿಪ್ಪ ವೃದ್ಧ ಜಂಗಮಸ್ವರೂಪದಿಂ ಪ್ರಸನ್ನನಾಗಿ ಕೆಳದಿಪುರವರದೆಡೆಯೊಳ್ ಸೀಗೆವಳ್ಳಿ ಯೆಂಬ ತಾಣದೊಳ್ ತರುಗುಲ್ಮಲತಾಪ್ರತಾನಾವೃತಮಾದ ಸೀಗೆಮೆಳೆಯ ಮಧ್ಯದೊಳ್ ರಾಮೇಶ್ವರನೆಂಬ ಮಹಾದಿವ್ಯಲಿಂಗಂ ನೆಲೆಸಿರ್ಪುದಾಲಿಂಗಂ ಬಹುಕಾಲಮಾರಭ್ಯ ವಲ್ಮೀಕಾಚ್ಛಾದಿತಮಾಗಿರ್ಪುದಲ್ಲಿ ತಲ್ಲಿಂಗಮಿರ್ಪುದರ್ಕೆ ಕುರುಹೇನೆಂದೊಡೆ ನಿನ್ನ ಮನೆಯೊಳಸವ ಕಪಿಲೆವರ್ಣದ ಪಸು ಕರುವೆರಸಾತಾಣಮನೈದಿ ನಿಂದಾಪುತ್ತದ ಮೇಗಡೆಯೊಳ್ ಪ್ರತಿದಿನಂ ಪಾಲ್ಗರೆದು ಬರುತಿರ್ಪುದೆ ಕುರುಹಾಲಿಂಗಮಂ ಜನರ ಕಣ್ಮನಕ್ಕೆ ಗೋಚರಮಪ್ಪಂತು ನಿಮಿರ್ಚಿಸಿ ತದ್ರಾಮೇಶ್ವರಲಿಂಗಮಂ ಸದ್ಭಕ್ತಿಯಿಂದರ್ಚಿಸಲ್ ನಿನಗಖಂಡಪೃಥ್ವೀಪತಿತ್ವಂ ಕೈಸಾರ್ಪುದೆಂದುಸಿರ್ದಾ ಜಂಗಮಮೂರ್ತಿ ಯಂತರ್ಧಾನಮನೈದಲೆಚ್ಚರ್ತು ಪರಮಹರ್ಷಿತನಾಗಿ ನಿಜಮಾತೃವಪ್ಪ ಬಸವಾಂಬಿಕೆಯೊಳಿಂತು ಕಂಡ ಸ್ವಪ್ನವನುಸಿರಲದಂ ಕೇಳ್ದಿಂತು ಸ್ವಪ್ನದೊಳ್ ನಿರೂಪಿಸಿ ಪೋದ ಜಂಗಮಮೂರ್ತಿ ಸಾಕ್ಷಾತ್ಪರಮೇಶ್ವರನೆಂಬುದೆ ನಿಶ್ಚಯಮಾರಾಮೇಶ್ವರಲಿಂಗಕ್ಕೆ ಭಕ್ತಿಯೊಳ್ ನಡೆಕೊಂಡೊಡೆ ಮುಂದೆ ನಿನಗೆ ಮಹಾಭಿವೃದ್ಧಿಯುಂಟದರ್ಕೆ ಸಂದೆಗಮಿಲ್ಲೆಂದುಸಿರಲಂತಾ ಮಾತಂ ಕೇಳ್ದು ಮರುದೆವಸಂ ಬೇಹಚರರಂ ಕಾಯ್ಪಿಕ್ಕಿ ನಿಜಮಂದಿರದೊಳಿರ್ಪ ಕಪಿಲೆವರ್ಣದ ಪಸುವಾಪುತ್ತದೆಡೆಗೈದಿ ಸುರಭಿಯಂ ಕರೆದು ಬರ್ಪುದಂ ಗೋರಕ್ಷಕರ ಮುಖದಿಂದರಿದಲ್ಲಿಗೈದಿ ಯಾಪುತ್ತಮನಗುಳಿಸಿ ನೋಡಲದರೊಳ್ ಕಂಗೊಳಿಸುತಿರ್ಪ ಮಂಗಲಮೂರ್ತಿಯಪ್ಪ ಶ್ರೀರಾಮೇಶ್ವರಲಿಂಗಮಿರಲ್ಕಂಡು ವಿಸ್ಮಿತನಾಗಿ ಕರಸರೋಜಮಂ ಮುಗಿದು ಭಯಭರಿತಭಕ್ತಿಯಿಂ ಪೊಡಮಟ್ಟು ನುತಿಸಿ ಬಳಿಕಾತರುಗುಲ್ಮಲತಾಪ್ರತಾನಸೀಕಾಕುಂಜಂಗಳಂ ಸವದರ್ತಾಣಮಂ ಮನೋಹರಮಪ್ಪಂತು ಸೈತುಗೊಳಿಸಿ ತತ್ಕಾಲೋಚಿತಮಾದ ತೃಣಕುಟಿಯಂ ನಿರ್ಮಿಸಿ ನಿತ್ಯಮಾಲಿಂಗಕ್ಕಂ ಧೂಪದೀಪನೈವೇದ್ಯಂ ನಡೆವಂತು ಕಟ್ಟಲೆಯಂ ರಚಿಸಿ ಪ್ರತಿದಿನಂಗಳೊಳ್ ತಾಂ

ಪಳ್ಳಿವಯಲಿಂದೆಳ್ದೊಂದಾಲಿಂಗಮಂ ಭಜಿಸಿ ಪೋಪ ನಿಯಮಮಂ ಮಾಡಿಕೊಂಡಿಂತು ವರ್ತಿಸುತ್ತುಮಿರ್ದು ಕತಿಪಯದಿನಂಗಳ್ ಪೋಗಲೊಡನಾಚೌಡಪನೊಂದುದಿನದೊಳಂದಿನಂತೆ ನಿಜಾಲಯದಿಂ ಪೊರಮಟ್ಟು ತಾಂ ಕೃಷ್ಯಾರಂಭಮಂ ರಚಿಯಿಪ [1] ಶಾಲೀಕ್ಷೇತ್ರದೆಡೆಗೈದುತ್ತುಮಿರಲಾಪ್ರಸ್ಥಾನದೊಳ್ [2] ॥ ೫೫

ಸರಟಂ ಚೌಡಪನೈದುತಿರ್ಪ ಪಥಕಂ ತಾನೈದಿ ಕಾಣ್ಬಂದದಿಂ
ಸಿರಮಂ ಪಾಯ್ಕುಲಭೀಕ್ಷಿಸುತ್ತುಮದನೆಳ್ಬಟ್ಟಲ್ಕೆಲಕ್ಕೈದಿ ಮಾ ।
ಮರನಂ ಶೀಘ್ರದೊಳೇರ್ದು ಮಲ್ಲಿ ಸಿರಮಂ ಪಾಯ್ಕುತ್ತಿರಲ್ ನೋಡುತ
ಚ್ಬರಿವಟ್ಟುಜ್ಜ್ವಲಿಸುತ್ತುಮಿರ್ಪ ವರಶಾಲೀಕ್ಷೇತ್ರಮಂ ಪೊರ್ದಿದಂ ॥೫೬

ಬಳಿಕಾ ಚೌಡಪನೊಪ್ಪುವ
ಕಳಮಕ್ಷೇತ್ರವನಭೀಕ್ಷಿಸುತೆ ತತ್ಕೃತ್ಯಂ ।
ಗಳನಾರಯ್ದು ಬಳಲ್ದು
ಜ್ಜ್ವಲಿಸುವ ಮಾಮರನ ತಣ್ಣೆಳಲನುರೆ ಸಾರ್ದಂ ॥ ೫೭

ಆ ಗರುವಂ ವಿಗತಶ್ರಮ
ನಾಗಿ ತದುರ್ವೀಜಮೂಲದೊಳ್ಪುಳಿವೆಲರ್ಗಂ ।
ಮೈಗೊಟ್ಟು ಗಾಢನಿದ್ರಾ
ಯೋಗದೆ ಮರೆದೊರಗಿರಲ್ತದಂಬಿಕೆಯಿತ್ತಂ ॥ ೫೮

ವರಸುತನುಣಬರತಳುವಿದ
ಪರಿಯೇಂ ಕಾರಣಮೊ ನೋಳ್ಪೆನೆನುತಾಲಯದಿಂ ।
ಪೊರಮಟ್ಟು ಗರ್ದೆಯಂ ಸಾ
ರ್ವರಸುತೆ ಮಾಮರನ ಮೂಲಮಂ ನೆರೆಸಾರ್ದಳ್॥ ೫೯

ಆ ಮಾಮರದಡಿಯೊಳ್ನಿ
ದ್ರಾಮುದ್ರಿತನೇತ್ರನಾಗಿ ಮಲಗಿಪ ಸುತನಂ ।

---

1. ರಚಿಸಲು(ಕ), 2 ಪ್ರಸ್ತಾವದೊಳ್.(ಬ),

ಪ್ರೇಮದೊಳೀಕ್ಷಿಸುತಿರಲು
ದ್ದಾಮಾಹಿಯುದೊಂದು ಚೌಡಪನ ಶಿರದೆಡೆಯೊಳ್ ॥ ೬೦.
ಪೆಡೆಯಾಡುತ್ತಿರಲೀಕ್ಷಿಸಿ
ಕಡುಚೋದ್ಯಂಬಟ್ಟು ಮಗನನೆಬ್ಬಿಸೆ ಮುಳಿಸಿಂ ।
ಕಡಿದಪುದೆಂಬತಿಭಯದಿಂ
ಮಿಡುಕುತೆ ನಿಂದೆವೆಯುಸಿಕ್ಕ ದೀಕ್ಷಿಸುತಿರ್ದಳ್ ॥ ೬೧

ಇಂತು ನಿಂದು ನಿಟ್ಟಿಸುತಿರಲ್ ಚೌಡಪನ ಶಿರದ ಮೇಗಡೆಯೊಳ್ ನಲಿನಲಿದು ಪೆಡೆಯಾಡಿ ಕೆಲವುಂ ಪೊಳ್ತು ಪೋಗಲೊಡನಾಸರ್ಪಂ ಮೆಲ್ಲನಿಳಿದು ತಾನೇ ಪರಿದು ಪೋಗುತ್ತುಮಿರಲಾಬಸವಮಾಂಬಿಕೆಯೈತಂದು ಮರೆದೊರಗಿರ್ಪ ಸುತನನೆಚ್ಚರಿಸಿ ಕುಳ್ಳಿರಿಸಿ ತನ್ಮಸ್ತಕದ ಮೇಗಡೆಯೊಳ್ ಸರ್ಪಂ ನಲಿನಲಿದು ಪೆಡೆಯಾಡಿದ ವೃತ್ತಾಂತಮನುಸಿರ್ದಳ್ ಪುಣ್ಯಾವಶದಿಂ ಬರ್ದುಕಿದೆಯೆಂದತಿವ್ಯಾಮೋಹದಿಂ ಮಗನಂ ಮುದ್ದಿಸಿ ಗಾಢಾಲಿಂಗನಂಗೈದೊಡನೆ ಪರಿದು ಪೋಪ ಪಾವಂ ತೋರಲಾಗಳಾಸರ್ಪಂ ತನ್ನ ಪೆಡೆಯನೆತ್ತಿಕೊಂಡಿವರಂ ತಿರಿತಿರಿಗಿ ನೋಡುತ್ತುಂ ಮೆಲ್ಲಮೆಲ್ಲನೈದುತ್ತುಂ ಸನ್ನೆದೋರಿ ಕರೆವ ಭಾವಮುಂ ತೋರುತ್ತುಂ ಪರಿಯುತ್ತಿರಲವರದರ ಪಿಂಗಡೆಯೊಳ್ಬೆಂಬಳಿವಿಡಿದೈದಿ ನೋಡುತ್ತುಮಿರಲಾಸರ್ಪಂ ನಿಕ್ಷೇಪಮಿರ್ದ ಶಾಲೀಕ್ಷೇತ್ರದೆಡೆಗಿಳಿದಲ್ಲಿ ನಿಲ್ವಿವರ್ಗಳಂ ನೋಡಿ ತನ್ನ ಪೆಡೆಯನೆತ್ತಿ ಪೆಡೆಯಗ್ರದಿಂದಾತಾಣಮುಂ ಮುಟ್ಟಿ ಮುಟ್ಟಿ ತೋರಿಸಿಯದೃಶ್ಯಮಾಗಲಿವರಿದು ಕಾರಣಸರ್ಪಮಪ್ಪುದೇನಾದೊಡಮೀತಾಣಮಂ ಪರೀಕ್ಷಿಸಿ ನೋಡಲ್ವೇಳ್ಕೆಂದು ನಿಶ್ಚಯಿಸಿಯಾತಾಣಮಂ ಕುರುಪಿಟ್ಟು ಮನೆಗೈದಿ ನಿಜಾನುಜನೊಡನೀವೃತ್ತಾಂತಮನುಸಿರ್ದೊಡನಿರ್ವರ್ ಸಂತಸದಿಂ ಮಜ್ಜನಶಿವಾರ್ಚನಭೋಜನಾದಿಗಳಂ ರಚಿಸಿ ಬಳಿಕಂ ಪರಿಮಿತರಾದಾಪ್ತಜನರ್ವೆರಸು ಕಳಮಕ್ಷೇತ್ರಮಂ ಸಾರ್ದು ಕುರುಪಿಟ್ಟತಾಣದೆಡೆಗೈದಿ ಹಲಮಂ ಕಟ್ಟಿಸಿ ಪೂಡಿಸಲಾಗಳಾ ನೇಗಿಲಮೊನೆಗೆ ನಿಕ್ಷೇಪಕಟಾಹದ ಬಳಗಳ್ ಸಿಲುಂಕಿ ಘಣಘಣರೆಂಬ ದನಿಯಾಗಲಾಗಳಾ ಸ್ಥಳವನಗುಳಿಸಿ ನೋಡಲಲ್ಲಿ ಭೂರಿನಿಕ್ಷೇಪಕಟಾಹಂ ನಾಗರಮುರಿ ಯೆಂಬ

ಕತ್ತಿಸಹಿತವಿರಲಾ ನಿಕ್ಷೇಪವುಮಂ ವಶಂಮಾಡಿ ಮರೆಯಾಗಿ ಬೈತಿರಿಸಿ ಕೊಂಡಾತನಾದೊಳ್ ತತ್ಕಾಲೋಚಿತವಾದ ಗೃಹಮಂ ನಿರ್ಮಿಸಿ ಕುಟುಂಬಸಹಿತಂ ತಾವಲ್ಲಿನಿಲ್ವುದರಲ್ಲಿಯುಂ ಬಲಶಾಲಿಗಳೆನಿಸಿ ವರ್ತಿಸುತ್ತುಮಿರುತಿರ್ದು ಕತಿಪಯದಿನಂಗಳ್ ಪೋಗಲೊಡನೆ ‖ ೬೨

ಮೆರೆವಾ ಚೌಡಪಮನ್ನೆಯಂಗೆ ಶುಭಯುಕ್ಕೇಂದ್ರತ್ರಿಕೋಣಂಗಳಿಂ
ಪರಮೋಚ್ಚಸ್ಥಿತಸದ್ಗ್ರಹತ್ರಯಗಳಿಂ ಕ್ರೂರಾರಿದುಶ್ಚಿಕ್ಯದಿಂ ।
ಬೆರೆದುತ್ಕೃಷ್ಟಸುಲಗ್ನದೊಳ್ಪ್ರಬಲಚಂದ್ರಾವಸ್ಥೆಯೊಳ್ಪುಟ್ಟಿದಂ
ಸ್ಫುರದತ್ಯುನ್ನತರಾಜಯೋಗದೊಳ್ ಲೋಕಾನಂದನಂ ನಂದನಂ ‖ ೬೩

ಆ ಸುತನೊಗೆದ ಮುಹೂರ್ತದ
ಭಾಸುರತರರಾಜಯೋಗಮುಖಫಲಗಳುಮಂ ।
ಜೋಇಸಿಗರ ಮುಖದೆ ಕೇಳ್ದುಮ
ಹಾಸಂತೋಷಾಂಬುಧಿಯೊಳೋಲಾಡುತ್ತುಂ ‖ ೬೪

ಬಗೆಬಗೆಯ ದಾನಧರ್ಮಾ
ದಿಗಳಂ ವಿರಚಿಸಿ ಸದಾಶಿವಯ್ಯನೆನುತ್ತುಂ ।
ಸೊಗಯಿಸುವಭಿಧಾನವನಿ
ಟ್ಟಗಣಿತಹರ್ಷದೊಳ್ ಚೌಡಪಂ ಪೋಷಿಸಿದಂ ‖ ೬೫

ಇಂತು ಪೋಷಿಸುತ್ತುಮಿರಲಾ ಬಾಲಕಂ ಬಾಲೇಂದುವಿನಂತೆ ಪ್ರತಿದಿನಂಗಳೊಳ್ ಪರಮಾಭಿವೃದ್ಧಿಯಂ ಪಡೆದು ವಿರಾಜಿಸುತ್ತುಮಿರಲಾ ಸುತನಂ ನಿಟ್ಟಿಸಿ ನಲಿಯುತ್ತುಂ ಮತ್ತಮಾಕುಮಾರಂಗೆ ಯೌವನೋದಯಮಾಗಲೊಡನೆ ಸತ್ಕುಲಸಂಭವೆಯರಪ್ಪ ವೀರಮಾಂಬೆ ಭದ್ರಮಾಂಬೆ ಯೆಂಬಿರ್ವರ್ ಕನ್ಯಾರತ್ನಂಗಳನತಿವಿಭವದಿಂ ವಿವಾಹಮಂ ರಚಿಸಿ ಕೆಳದಿರಾಮೇಶ್ವರಗೃಹಮಂ ದಾರುಮಯವನಾಗಿಸಿ ಸದ್ಭಕ್ತಿಯಿಂದರ್ಚಿಸುತ್ತುಂ ತತ್ಕೃಪಾಕಟಾಕ್ಷಮೂಲದಿಂ ದಿನದಿನದೊಳ್ಭಾಗ್ಯಾಭಿವೃದ್ಧಿಯಂ ಪಡೆದು ನಾಲ್ದೆಸೆಯೊಳ್ ಪರಮಪ್ರಖ್ಯಾತಿವೆತ್ತು ವರ್ತಿಸುತ್ತುಮಿರ್ದನಂತುಮಲ್ಲದೆಯುಂ, ‖ ೬೬

ಬತ್ತಿ ಪೊಡೆದೆಡವಲಂಗಳ
ಬಿತ್ತರವಮಾದಿಳೆಗಳಂ ಪರಗ್ರಾಮಂಗಳಂ ।
ಗುತ್ತಿಗೆಯನೆಸಗಿ ಮಿಗೆ ದೆಸೆ
ವೆತ್ತಾತಂ ದಿನದಿನಗಳೊಳಭಿವರ್ಧಿಸಿದಂ ॥ ೬೭

ಚರರನನುಚರರನದಟರ
ನುರುತರಪರಿಜನರನಂಗರಕ್ಷಕಸಾಮಂ ।
ತರನೆರಹಿ ಭುಜಬಲಾಢ್ಯರೊ
ಳುರೆ ಬಲ್ಲಿದನೆನಿಸಿ ಚೌಡಪಂ ರೂಢಿಸಿದಂ ॥ ೬೮

ಗುರುಲಿಂಗಜಂಗಮಾರ್ಚನ
ನಿರತಂ ವರವೀರಶೈವಮಾರ್ಗಾನುಗಸ ।
ಚ್ಚರಿತನುರುದಾನಧರ್ಮಾ
ಚರಣೈಕಪ್ರಥಿತನೆನಿಸಿ ರಾರಾಜಿಸಿದಂ ॥ ೬೯

ಇಂತು ಚೌಡಪಂ ರಾರಾಜಿಸುತಿರ್ದನೀಕಥಾಸಂದರ್ಭಕೊಸು ಗಂ ವಿದ್ಯಾನಗರೀ ರತ್ನಸಿಂಹಾಸನಾಧೀಶ್ವರರಾದ ಹರಿಹರರಾಯ ಬುಕ್ಕರಾಯ ಮುಂತಾದ ರಾಯರ ವಂಶಪರಂಪರಾವಿವರಣಮಂ ಸಂಕ್ಷೇಪದಿಂ ಪೇಳ್ವನದೆಂತೆಂದೊಡೆ, ಶಿವಾಂಶೀಭೂತರೆನಿಸಿ ಕಾರಣಪುರುಷರಾಗಿ ಜನಿಸಿ ಬ್ರಹ್ಮಾಂಶೀಭೂತನಾದ ಮಂಡನಮಿಶ್ರನ ಕೂಡೆ ವಾದಮಂ ಮಾಡಿ ಜಯಿಸಿ ಅಮರುಕವೆಂಬ ಗ್ರಂಥ ‍ಂ ಮಾಡಿ ಶಾರದಾಂಬೆಯಂ ಶೃಂಗಪುರದ ಪೀಠಕ್ಕೆ ತಂದು ನಿಲಿಸಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯಷಡ್ದರ್ಶನಸ್ಥಾಪನಾಚಾರ್ಯರಾದ ಜಗದ್ಗುರುಗಳೆಂದು ಪರಮ ಪ್ರಖ್ಯಾತಿಯಂ ಪಡೆದ ಶಂಕರಾಚಾರ್ಯರ್, ಪಾದಪದ್ಮಾಚಾರ್ಯರ್, ತೋಟಕಾಚಾರ್ಯರ್, ಹಸ್ತಾಮಲಕಾಚಾರ್ಯರ್, ಸುರೇಶ್ವರಾಚಾರ್ಯರ್ ಇಂತು ನಾಲ್ವರ್ ಶಿಷ್ಯರಂ ಮಾಡಿಕೊಂಡು ಪೂರ್ವಪಶ್ಚಿಮ ದಕ್ಷಿಣೋತ್ತರ ಸಮುದ್ರಾಂತವಾಗಿ ಸ್ವಸಂಕೇತನಾಮದಲ್ಲಿ ಮಠಂಗಳಂ ಕಟ್ಟಸಿ ತತ್ತನ್ಮಠಂಗಳಲ್ಲಿ ಸ್ವಶಿಷ್ಯರಂ ನೆಲೆಗೊಳಿಸಿ ತಾಂ ವಿದ್ಯಾಶಂಕರನೆಂಬೊಬ್ಬ

ಶಿಷ್ಯನಂ ಮಾಡಿಕೊಂಡಿರುತಿರ್ದು ಮುಕ್ತರಾಗಲಾಗಿಯಾಮೇಲೆ ಯುತ್ತರದಿಕ್ಕಿನ ಕೃಷ್ಣಾ ದೇವೀನದೀತೀರದಲ್ಲಿ ಗೃಹಸ್ಥಾಶ್ರಮದಲ್ಲಿರುತಿರ್ದ ಮಾಧವಭಟ್ಟನೆಂಬಾತಂ ದಕ್ಷಿಣದೇಶಕ್ಕೆ ಬಂದು ಕುಂತಳದೇಶದೊಳಗಣ ಪಂಪಾಕ್ಷೇತ್ರದಲ್ಲಿ ನಿಂದು ಭಾಗ್ಯಾಪೇಕ್ಷೆಯಾಗಿ ಶ್ರೀಚಕ್ರಯಂತ್ರಪುರಶ್ಚರಣಮಂ ಮಾಡುತ್ತುಮಿರಲಾಗಿ ಅಮ್ಮನವರು ಪ್ರಸನ್ನರಾಗಿ ನಿನಗಿಹಜನ್ಮದಲ್ಲಿ ಭಾಗ್ಯಪ್ರಾಪ್ತಿಯಿಲ್ಲಮುತ್ತರ ಜನ್ಮದಲ್ಲಿ ಕೊಟ್ಟೇನೆನಲಾಗಿ ಯಾಮಾತಂ ಮನದೆಕೊಂಡು ಆ ಮಾಧವಭಟ್ಟಂ ಶಂಕರಾಚಾರ್ಯರ ಶಿಷ್ಯರಾದ ವಿದ್ಯಾಶಂಕರರಿಂದೆ ಸನ್ಯಾಸಾಶ್ರಮವನಂಗೀಕರಿಸಿ ವಿದ್ಯಾರಣ್ಯರೆಂದು ಪ್ರಸಿದ್ಧನಾಮಾಂಕಿತರಾಗಿರುತುಮಿರಲಾಗಿ, "ಈ ದೇಶಮಂ ಜೈನರ್ ಕಿರಾತರ್ ಮುಂತಾದವರ್ಕಳಾಕ್ರಮಿಸಿ ತಮ್ಮ ತಮ್ಮ ಇಚ್ಛಾನುಕೂಲಮಿರ್ದ ರೀತಿಯೊಳ್ ನಡೆಕೊಳ್ವರ್, ಈ ಮಂಡಲದೊಳೊಂದು ಪಟ್ಟಣಮಂ ನಿರ್ಮಾಣಂಗೈಸಿ ದುಷ್ಟನಿಗ್ರಹ ಶಿಷ್ಟಪರಿಪಾಲನಮಂ ಮಾಡಿ ನಡೆಕೊಳ್ವಂತು ರಾಯಪಟ್ಟಮಂ ಕಟ್ಟುವುದು" ಎಂದು ಅಮ್ಮನವರಿಂ ಸ್ವಪ್ನವಾಗಲಾಗಿ ಆ ಸ್ವಪ್ನಾರ್ಥಮಂ ಮನದೊಳಿಟ್ಟು ಕತಿಪಯದಿವಸಂ ವರ್ತಿಸುತ್ತುಮಿರಲಾಗಿ ಯುತ್ತರದೇಶದಿಂದೆ ಸಹೋದರರಾದ ಹರಿಹರ ಬುಕ್ಕರೆಂಬ ಬಡಕ್ಷತ್ರಿಯರುಂ ಈ ದಕ್ಷಿಣರಾಜ್ಯಕ್ಕೈತಂದು ಕುರುಬರಲ್ಲಿ ನಂಟತನಮಂ ಮಾಡಿ ಹೆಣ್ಣು ತಂದು ಮದುವೆಯಾಗಿ ಸುಖವಾಸಿಗಳಾಗಿರುತ್ತುಮಿರಲಾಗಿ ಅವರೊಳ್ ಹಿರಿಯನಾದ ಹರಿಹರಗೆ ನೀನುಂ ಬುಕ್ಕನುಂ ಸಹ ವಿದ್ಯಾರಣ್ಯರ ಬಳಿಗೆ ಹೋಗಿ ಆಶ್ರಯಿಸಲಾಗ ಮಹದೈಶ್ವರ್ಯಂ ಬಂದೀತೆಂದು ಸ್ವಪ್ನವಾಗಲಾಗಿ ಆಮೇಲೆ ಆ ಹರಿಹರಬುಕ್ಕರ್ ಹಂಪೆಗೆ ಬಂದು ವಿದ್ಯಾರಣ್ಯರಂ ಕಂಡು ಸಂಧಿಸಿ ಸ್ವಪ್ನಾಭಿಪ್ರಾಯಮನುಸಿರಲಾಗಿ ಆಗ ವಿದ್ಯಾರಣ್ಯರ್ ಹಂಪೆಯಸ್ಥಳದವರಂ ಕರೆಯಿಸಿ ವಿಚಾರಮಂ ಮಾಡಲಾಗಿ ಅವರ್ಪೇಳಿದುದು:—ಪೂರ್ವದೊಳ್ ಸೂರ್ಯವಂಶಜನಾದ ತ್ರಿಶಂಕುಮಹಾರಾಯಂ ಪಂಪಾಕ್ಷೇತ್ರಕ್ಕೆ ಬಂದು ಈ ವಿರೂಪಾಕ್ಷಲಿಂಗಂ ಪ್ರಾದುರ್ಭವಲಿಂಗವೋ ಪ್ರತಿಷ್ಠಾಲಿಂಗವೋ ಯೆಂದು ಕೇಳಿದಲ್ಲಿ ಈ ಲಿಂಗಂ ಜ್ಯೋತಿರ್ಮಯಮಾದ ಲಿಂಗಂ ಈ ಲಿಂಗದ ಮಹಿಮೆಯುಂ

ಪೇಳ್ವುದಕ್ಕೆ ಬ್ರಹ್ಮದೇವರಿಗಾದರೂ ಅಸಾಧ್ಯವೆಂಬೆಮ್ಮಪಾಡೇನೆನಲಾಗಿ ಆ ಮಾತಂ ಕೇಳ್ದು ಆ ತ್ರಿಶಂಕುಮಹಾರಾಯಂ ಪ್ರತಿಷ್ಠಾಲಿಂಗವ್ರೋಯೆಂದು ಕೇಳ್ದ ದೋಷನಿವೃತ್ತಿಗೋಸುಗಂ ಕೃಷ್ಣವೇಣೀನದೀತೀರಮಾರಭ್ಯ ಸೇತುಪರ್ಯಂತಂ ಮೂರುಪರೆಕೋಟಿರಾಜ್ಯವನೀವಿರೂಪಾಕ್ಷದೇವರ್ಗೆ ಧಾರೆಯನೆರೆದನೆಂದು ಸ್ಥಳದವರ್ಪೇಳಲ್ ಆ ಮಾತಂ ಕೇಳ್ದು ವಿದ್ಯಾರಣ್ಯರ್ ಹರಿಹರಬುಕ್ಕರಂ ಕರೆದು ಈರಾಜ್ಯಕ್ಕೆಲ್ಲಂ ವಿರೂಪಾಕ್ಷಸ್ವಾಮಿಯೆ ಕರ್ತೃಂ, ನೀಂ ಆ ದೇವರ ಭಕ್ತರಾಗಿ ವರ್ತಿಸುತ್ತುಂ ಶ್ರೀ ವಿರೂಪಾಕ್ಷನೆಂದೊಪ್ಪವಂ ಹಾಕಿ ನಡೆಕೊಂಡು ಸದ್ಧರ್ಮದಿಂ ರಾಜ್ಯವನಾಳಿಕೊಂಡಿರ್ಪುದೆಂದು ಕಟ್ಟಳೆಯಂ ರಚಿಸಿ ಆ ಹರಿಹರಗೆ ಹರಿಹರರಾಯನೆಂದು ಪೆಸರಿಟ್ಟು ವಿದ್ಯಾನಗರವೆಂಬ ಪಟ್ಟಣವಂ ನಿರ್ಮಾಣಂಮಾಡಿಸುವ ಕಾಲವಲ್ಲಿಯಾಪಟ್ಟಣದ ಕೆಸರ್ಗಲ್ಲಮುಹೂರ್ತಕಾಲದಲ್ಲಿ ವಿಧಿವಶದಿಂದೊರ್ವ ದಾಸನೂದಿದ ಶಂಖಧ್ವನಿಯಿಂ ವಿದ್ಯಾರಣ್ಯರ್ ನಿಯಾಮಕಂಗೈದ ಲಗ್ನಂ ವ್ಯತ್ಯಾಸವಾಗಲಾಗಿ ಈ ಪಟ್ಟಣಂ ಕೆಲವು ವರ್ಷದ ಮೇಲೆ ತುರುಷ್ಕಾಧೀನವಾದೀತೆಂದು ವಿದ್ಯಾರಣ್ಯಾತ್ಮಕ ಕಾಲಜ್ಞಾನವೆಂದು ಕೆಲವು ಕಾಲಜ್ಞಾನಗ್ರಂಥವಂ ಬರೆಸಿ, ಆವಿದ್ಯಾರಣ್ಯರ್ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ೧೨೫೮ನೆಯ ಸಂವತ್ಸರದಲ್ಲಿ ಆ ವಿದ್ಯಾನಗರೀರತ್ನಸಿಂಹಾಸನದಲ್ಲಿ ಹರಿಹರರಾಯಂಗೆ ಪಟ್ಟವಂ ಕಟ್ಟಿ ನಿಲಿಸಿದರ್; ಹೀಗಿರಲಾಗಿ ಕೆಲವು ದಿವಸದ ಮೇಲೆ ರೇವಣಸಿದ್ಧನೆಂಬೊಬ್ಬ ಜಂಗಮಸ್ವರೂಪಗಣಾಧೀಶ್ವರಂ ಬಂದು ದಿವ್ಯಲಿಂಗವಂ ವಿದ್ಯಾರಣ್ಯರ ವಶಕ್ಕೆ ತಂದುಕೊಟ್ಟು ಈ ಲಿಂಗಂ ಚಂದ್ರಮೌಳೀಶ್ವರಂ ಈ ಲಿಂಗಮಂ ನಿತ್ಯಂ ಪೂಜೆಗೈವುದೆಂದುಸಿರ್ದಂತರ್ಧಾನನಾಗಿ ಪೋಗಲೊಡನಾ ವಿದ್ಯಾರಣ್ಯರ್ ಶೃಂಗಪುರಕ್ಕೆ ತಂದು ಶೃಂಗೇರೀಮೂಲಸಂಸ್ಥಾನದ ಮಠದಲ್ಲಿ ಆ ಚಂದ್ರಮೌಳೀಶ್ವರನ ಪೂಜೆಯಂ ಮಾಡಿಕೊಂಡಿರ್ದು ಶಿಷ್ಯಪರಂಪರೆಯಲ್ಲಿಯುಂ ನಡೆಕೊಂಡುಬಾಹಂತುಕಟ್ಟಲೆಯುಂ ಮಾಡಿಸಿದರ್. ಶೃಂಗಪುರದ ಸಂಸ್ಥಾನದೊಳವರಂತು ವರ್ತಿಸುತ್ತುಮಿರಲಿತ್ತಂ ವಿದ್ಯಾನ

ಗರಿಯುಂ ರಾಯಸಂಸ್ಥಾನವೆಂದು ಜಗತ್ಪ್ರಖ್ಯಾತವಾಯ್ತು. ಆ ರತ್ನ ಸಿಂಹಾಸನವನಾಳ್ದ ರಾಯರ ವಂಶಪರಂಪರಾವಿವರಣಂ:—

ಹ ಬು ಹೋ ವಿ ಬು ದೇ ರಾ ವಿ ದೇ ವಿ ಮಾ ರಾ ವಿ ಸಂಸ್ಥಿತಾಃ ।
ತ್ರಯೋದಶ ಮಹೀಪಾಲಾ ರತ್ನಸಿಂಹಾಸನಾಧಿಪಾಃ ॥
ದ್ವಾತ್ರಿಂಶದುತ್ತರಾನೇತೇ ದ್ವಿಶತಾಬ್ದಾನ್ ಕ್ಷಿತೌ ಸ್ಥಿತಾಃ * ॥

ತದನಂತರಂ

ಪ್ರೌಢೋ ದ್ವಾದಶ ವರ್ಷಾಣಿ ದಶ ವೀರನೃಸಿಂಹರಾಟ್ ।
ತತಸ್ಸಾಳ್ವನೃಸಿಂಹಾಖ್ಯೋ ದ್ವಾದಶ ತ್ರಿಸ್ತತೋಽಚ್ಯುತಃ ।
ಚತ್ವಾರಿಂಶತ್ತತಃ ಕೃಷ್ಣಸ್ತತೋ ದ್ವೇ ಚ ಸದಾಶಿವಃ ।
ಚತುರ್ವಿಂಶತಿ ವರ್ಷಾಣಿ ರಾಮರಾಜೋ ಮಹೀಪತಿಃ ।
ಏತೇ ಸಪ್ತ ಮಹೀಪಾಲಾಃ ರತ್ನಸಿಂಹಾಸನೇಶ್ವರಾಃ ॥

---

* ಮೇಲೆ ಬರೆದ ಶ್ಲೋಕಸಂಜ್ಞಾರ್ಥಪ್ರಕಾರ ವಿದ್ಯಾನಗರೀರತ್ನಸಿಂಹಾಸನವನಾಳ್ವರಾಯರ ವಿವರಣ; ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧ ನೆಯ ಸಂವತ್ಸರದ ದಿವಸದಾರಭ್ಯ
ಹರಿಹರರಾಯ ವರುಷ ಬುಕ್ಕರಾಯ ವ। ಹರಿಹರರಾಯ ವ।
ವಿರೂಪಾಕ್ಷರಾಯ ವರುಷ ಬುಕ್ಕರಾಯ ವ। ದೇವರಾಯವ।
ರಾಮರಾಯ ವರುಷ ವಿರೂಪಾಕ್ಷರಾಯ ವ। ದೇವರಾಯ ವ।
ವಿಠಲರಾಯ ವರುಷ ಮಲ್ಲಿಕಾರ್ಜುನರಾಯ ವ। ರಾಮರಾಯ ವ।
ವಿರೂಪಾಕ್ಷರಾಯ ವ। ಅಂತು ಹರಿಹರರಾಯರಾರಭ್ಯ ಕಲುವು ೧೩ಕ್ಕೆ ಆಳಿದವರು ತದನಂತರವಾಳ್ದ ಕುರುಬರು ಕಲು ೩ಕ್ಕೆ ವರುಷ ತದನಂತರಂ ತುಳುವರಾಯ ವರುಷ ತದನಂತರ ಚೋಳಿಯರುವರು ಅಂತು ಆಳಿದ ರಾಯರ ಬಗೆ ೩ಕ್ಕೆ ವರುಷ (ಕ)

ಈಗ ಪ್ರಸಿದ್ಧವಾಗಿರುವ ವಿಜಯನಗರದ ಚರಿತ್ರೆಗಳಲ್ಲಿ ವಿಜಯನಗರದ ರಾಜರ ಪರಂಪರೆಯೂ ಅವರು ಆಳಿದ ಕಾಲವೂ ಇಲ್ಲಿ ಹೇಳಿದಂತಿಲ್ಲ. ಕೆಲವು ವಿಷಯಗಳಲ್ಲಿ ವ್ಯತ್ಯಾಸವಿದೆ. ಈ ಸಂಗತಿಯನ್ನು ಉಪೋದ್ಘಾತದಲ್ಲಿ ಸ್ವಲ್ಪ ಮಟ್ಟಿಗೆ ವಿಚಾರಮಾಡಿದ್ದೇವೆ.

೧ ತತ್ಪುತ್ರ ಶ್ರೀರಂಗರಾಯಂ (ಕ).

ಈ ರಾಮರಾಯರ್ ರಾಜ್ಯವಾಳುತ್ತಿದ್ದ ಕಾಲದಲ್ಲಿ ಶಾಲಿವಾಹನ ಶಕ ವರ್ಷಂ ೧೪೮೭ನೆಯ ರಕ್ತಾಕ್ಷಿ ಸಂವತ್ಸರದ ಮಾಘಬಹುಳದಲ್ಲಿ ಈ ರಾಮರಾಯರಂ ವಿಜಾಪುರಂ ಭಾಗಾನಗರಂ ಅಮದಾನಗರಂ ಈ ಮೂರು (ರಾಜ್ಯಗಳ) ಪಾದುಶಾಹರೊಂದಾಗಿ ಮೋಸದ ಮೇಲೆ ಘಾತವಂ ಮಾಡಲಾಗಿ, ವಿದ್ಯಾನಗರಿ ವಿಸ್ಖಲಿತವಾಗಿ ಹೋಯಿತು. ಆಮೇಲೆ ಸಂಕ್ಷೇಪದಲ್ಲಿ ಆಳಿದವರ ವಿವರಂ :—ಈ ರಾಮರಾಯರ ತರುವಾಯಂ, ಅಲ್ಪಭೂಮಿಸ್ವಲ್ಪಗಜಾಶ್ವಪದಾತಿವೆರಸು ವೆಂಕಟಪತಿರಾಯಂ ವರ್ಷಂ ೩ ; ಶ್ರೀರಂಗರಾಯಂ [1]ವರ್ಷಂ ೫ ; ಆಮೇಲೆ ಅಲ್ಲಿ ನಿಸ್ತರಿಸಲಾರದೆ ಆ ರಾಮರಾಯನ ಮಕ್ಕಳ್ ವೆಂಕಟಪತಿರಾಯಂ ಶ್ರೀರಂಗರಾಯಂ ಸಹ ಪೆನುಗೊಂಡೆಯಲ್ಲಿ ನಿಂದು ಆಳಿದುದು :—ಇದೆ ಶ್ರೀರಂಗರಾಯಂ ವರ್ಷಂ ೫, ವೆಂಕಟಪತಿರಾಯಂ ವರ್ಷಂ ೭ ; ರಾಮದೇವರಾಯಂ ವರ್ಷಂ ೬ ; ಮುದ್ದುವೆಂಕಟಪತಿರಾಯಂ ವರ್ಷಂ ೫ ; ಶ್ರೀರಂಗರಾಯಂ ವರ್ಷಂ ೨೭ ; ಈ ಪೀಳಿಗೆ ಇಲ್ಲಿಗೆ ಸಮಾಪ್ತಂ.

ಆನೆಗೊಂದಿಯಲ್ಲಿ ನಿಂದು ಆಳಿದವರ್ ;—ಕೃಷ್ಣರಾಯನ ಅಳಿಯ ರಾಮರಾಯನ ದಾಯಾದಿಗಳ್ ; ಮರಿತಿಮ್ಮರಾಯನ ಮಕ್ಕಳ್ ; ರಾಯಲ್ಲಯ್ಯರಾಯಂ ; ಈತನ ಮಕ್ಕಳ್ ಪೆದ್ದವೆಂಕಟಪತಿರಾಯಂ, ಚಿಕ್ಕವೆಂಕಟಪತಿರಾಯಂ ; ಇವರ ಮಕ್ಕಳ್ ಪೆದ್ದವೆಂಕಟಪತಿರಾಯಂ, ಚಿಕ್ಕವೆಂಕಟಪತಿರಾಯಂ ; ಇವರ (?) ಮಗಂ ರಾಮಪ್ಪರಾಯಂ ; ಇದು ವಿದ್ಯಾನಗರೀರತ್ನಸಿಂಹಾಸನಾಧೀಶ್ವರರಾದ ಹರಿಹರಬುಕ್ಕಾದಿರಾಯರ ವಂಶಪರಂಪರಾವಿವರಣಂ.

ಇನ್ನು ಪ್ರಕೃತಕಥಾಸಂದರ್ಭಕ್ಕೆ ಸಂಗತಿಯೆಂತೆಂದೊಡೆ ಮುನ್ನೊರೆದ ಪಳ್ಳಿಮಯಲ ಬಸವಪ್ಪನ ಪುತ್ರನಾದ ಚೌಡಪಂ ಮುನ್ನುಸಿರ್ದಂತು ಭುಜಬಲಪರಾಕ್ರಮದಿಂ ವರ್ತಿಸುತ್ತುಮಿರಲಾಕಾಲದೊಳ್॥ ೨೦

ಇಂತೆಸೆವ ಚೌಡಪನ ವೃ
ತ್ತಾಂತಂ ನಾಲ್ದೆಸೆಗೆ ಪರ್ಬೆ ವಿದ್ಯಾನಗರೀ ।

[1] ತತ್ಪುತ್ರ ಶ್ರೀರಂಗರಾಯಂ (ಕ).

ಕಾಂತಾಚ್ಯುತರಾಯುಂ ಗುಣ
ವಂತನಸೂಯಕರ ಮುಖದಿ ಕೇಳ್ದೀಕಥೆಯಂ ॥ ೨೧

ಪೊಡವಿಗಧೀಶರ್ಪಿಸುಣರ
ನುಡಿಯಂ ಕೇಳ್ದರ್ಥದಾಸೆಯಿಂದುತ್ತಮರಂ ।
ಕಿಡಿಪುದಮಾರ್ಗಂ ಸಂತಸ
ಪಡುವುದೆ ಸನ್ಮಾರ್ಗವೆಂದು ಬಗೆದಿಂತೆಂದಂ ॥ ೨೨

ಎಮಗೆ ತುರುಷ್ಕರುಂ ಶಬರರುಂ ಬಲವದ್ದ್ವಿಷರೆಂದೆನಿಪ್ಪರೀ ಸಮಯದೊಳಿಂತು ವರ್ತಿಪ ಪರಾಕ್ರಮಶಾಲಿಗಳಪ್ಪ ಶರ್ವಗಂ ಮಮತೆಯಭಕ್ತರಪ್ಪ ದಸೆವಂತರೆನಿಪ್ಪರುಭಾಗಧೇಯರಪ್ಪಮಲಿನವೃತ್ತರಪ್ಪಿವರನಾದರದಿಂ ಬಸಗೈದನಂತರಂ ॥ ೨೩

ಇವರ್ಗಳ ಮುಖದಿಂ ಮಾರ್ಮಲೆ
ತವರ್ಗಳನಂಕದೊಳ್ ನಿಗ್ರಹಂಗೈಸಿ ಮಹೋ ।
ತ್ಸವದಿಂದೆಲ್ಲರ್ ಪೊಗಳ್ವಂ
ತವನೀಮಂಡಲವನಾಳ್ವುದಿಂತಿದು ಸುಮತಂ ॥ ೨೪

ಇಂತೆಂದು ನಿಶ್ಚಯಂಗೈದನಂತರಂ ಸ್ವಸ್ತಿ ಶ್ರೀಸಮಸ್ತ ಭುವನಾಶ್ರಯ ಪೃಥ್ವೀವಲ್ಲಭ ಶ್ರೀಮನ್ಮಹಾರಾಜಾಧಿರಾಜರಾಜಪರಮೇಶ್ವರಭಕ್ತಪರಮಭಟ್ಟಾರಕ ಸತ್ಯಾಶ್ರಯ ಪದವಾಕ್ಯಪ್ರಮಾಣಪಾರಾವಾರಪಾರೀಣ ಶ್ರೀಮನ್ಮಹಾಮಂಡಲೇಶ್ವರ ಪ್ರತ್ಯರ್ಥಿರಾಜವಿಭಾಡ ಶ್ರೀವಿರೂಪಾಕ್ಷಪಾದಪದ್ಮಾರಾಧಕ ಶ್ರೀವೀರಪ್ರತಾಪ ದಕ್ಷಿಣಸಮುದ್ರಾದಿಸರ್ವದಾನದ್ಯಂತಭೂಮಂಡಲೈಕಚ್ಛತ್ರಾಧಿಪ ಸಕಲವರ್ಣಾಶ್ರಮಾಚಾರಧರ್ಮಪ್ರತಿಪಾಲಕ ಶ್ರೀವಿದ್ಯಾನಗರರಾಜಧಾನೀರತ್ನಸಿಂಹಾಸನಾಧೀಶ್ವರನಪ್ಪ ಕೃಷ್ಣರಾಯಂ ನಿಜಾಪ್ತಸಚಿವನಿಯೋಗಿಗಳೊಡನೀವೃತ್ತಾಂತಮಂ ಬಿತ್ತರಿಸಿ ಮಂತ್ರಾಲೋಚನೆಯಂ ರಚಿಸಿ ಸ್ವಮನೋಭಿಪ್ರಾಯಮನುಸಿರ್ದು ರಾಯಸಮಂ ಬರೆಸಿಯುಡುಗೊರೆವೆರಸು ತದುಚಿತನಿಯೋಗಿಜನರಂ

ಪಳ್ಳವಯುಲೆ ಕಳುಪಿ ತುರಗಾಂದೋಳಿಕಾರೋಹಣಂಗೈಸಿ ಬಸವ
ಪಾತ್ಮಜನಂ ಕರೆಸಿಯುಲುಪಿ ಪಡಿಬಿಡಾರಂಗಳಂ ಕೊಡಿಸಿಯುತ್ಸವಂಬ
ಡಿಸಿ, ಅನಂತರವೊಂದು ಸಮಯದೊಳ್ ಪರಿಮಿತಜನರ್ವೆರಸೋಲಗ
ವಿತ್ತು ಕುಳ್ಳಿರ್ದು ಚೌಡಪಭದ್ರಪರಂ ಸಮೀಪಕ್ಕೆ ಬರಿಸಿಯುವರಿತ್ತುಪ
ಹಾರಾರ್ಥಂಗಳಂ ಕೈಕೊಂಡುಚಿತಾಸನದೊಳ್ ಕುಳ್ಳಿರಲ್ವೇಳ್ದು ಯೋಗ
ಕ್ಷೇಮಂಗಳಂ ಬೆಸಗೊಂಡೊಡನೆ ನಸುನಗುತ್ತುಂ ನಿಜರಾಜ್ಯಭಾರವಿಚಾ
ರರಾಜಸಪ್ರಕಟೀಕರಣಾರ್ಥಮಾಪ್ರಸ್ತಾವದೊಳ್ ೨೫

ವರಚೌಡಪಭದ್ರೇಂದ್ರರ
ಸಿರಿಮೊಗಮಂ ನೋಡಿ ಬಡವರಾಗಿಹ ನಿಮಗೀ ।
ಪರಿಯುತಿಶಯಸೌಭಾಗ್ಯಂ
ದೊರಕಿದುದೆಂತೆಂದು ನೃಪವರಂ ಬೆಸಗೊಂಡಂ ॥ ೨೬

ಒದವಿದ ಬಹುವಿಧನಿಧಿ ಸಾ
ರ್ದುದು ಗಡ ನಿಮಗೆಂದು ಬಹುಮುಖಂಗಳೊಳೀಮಾ ।
ತುದಿಸಿಹುದಾವೃತ್ತಾಂತದ
ಹದನೇನುಸಿರೆಂದು ಕೃಷ್ಣರಾಯಂ ಕೇಳ್ದಂ ॥ ೨೭

ಭೂಪರ್ಗೆ ಸಲ್ವ ಬಹುನಿ
ಕ್ಷೇಪವನಧಿಕಾರಿಗಳ್ಗೆ ಮರುಪದೆ ಶೌರ್ಯ ।
ವ್ಯಾಪಾರದಿನದನೀಳ್ದತಿ
ಗೋಪನಮಪ್ಪಂತು ಬೈತುಕೊಂಡಿರಿ ಗಡ ದಲ್ ॥ ೨೮

ಇಂತಪ್ಪ ಕಜ್ಜಮಂ ಭೂ
ಕಾಂತರ ಭಯಮಿಲ್ಲದೆಸಗಿ ಸಾಧುಗಳುಳ್ಳಿ ।
ಚಿಂತೆಯೊಳ್ ಕೆಮ್ಮನಿರ್ಪ್ಪರ
ದಂ ತಂದಿತ್ತುಳುಹಿಕೊಂಬುದೊಳ್ಳಿತು ಜಸಮಂ ॥ ೨೯

ಇಂತೆಂದು ಬೆಸಗೊಂಡ ಕೃಷ್ಣರಾಯನ ವಾಕ್ಯಂಗಳಂ ಚೌಡಪ
ಭದ್ರಪರ್ ಕೇಳ್ದು ತಾಂ ಪೂರ್ವದಾರಭ್ಯ ಕೃಷಿವ್ಯಾಪಾರೋಪಜೀವಿಗ

ಳಾಗಿ ಬಡವರಾಗಿರ್ದುದನನಂತರದೊಳ್ ಕಂಡ ಸ್ವಪ್ನಾಭಿಪ್ರಾಯಮುಮಂ ಕಪಿಲಗೋಚರಿತ್ರಮುಮಂ, ತದನಂತರದೊಳ್ ಶ್ರೀಮತ್ಕಳದಿಪುರೀರಾಮೇಶ್ವರಲಿಂಗಂ ಪ್ರಸನ್ನಮಾದುದಂ, ತತ್ಕೃಪಾಕಟಾಕ್ಷಮೂಲದಿಂದಿತ್ತಲ್ ತಾಂ ಬಲ್ಲಿದರಾದ ವೃತ್ತಾಂತಮೆಲ್ಲಮುಮಂ ಬಿತ್ತರಿಸಲ್ ಕೇಳ್ದು ಚೋದ್ಯಂಬಟ್ಟವರ ಭದ್ರಾಕಾರಪ್ರಸನ್ನಮುಖಮಂಡಲತೇಜೋವಾಕ್ಪಟುತ್ವಂಗಳುಮನೆರ್ದೆಗೊಂಡು ಸಂತಸಂದಳೆದಿವರ್ಶಿವಾಂಶೀಭೂತರಪ್ಪ ಕಾರಣಪುರುಷರಹುದೆಂದು ನಿಶ್ಚಯಂಗೈದು ತನ್ನೊಳಿಂತೆಂದಂ ‖ ೮೦

ಖಳರುಕ್ತಿಮೂಲದಿಂ ದೆಸೆ
ವೆಳರಹ ಧನಿಕರನಸೂಯೆಯಿಂ ನೋಯಿಸದು ।
ಜ್ಜ್ವಳಘನಕಾರ್ಯಂಗಳನವ
ಗಳ ಮುಖದಿಂ ಕೊಂಡು ಪೊರೆವುದರಸರ್ಗುಚಿತಂ ‖ ೮೧

ಇಂತೆಂದು ಬಗೆದಾ ಚೌಡಪಭದ್ರಪರಂ ಹತ್ತೆಕರೆದು ನೀಂ ಶಿವಾಂಶೀಭೂತರಪ್ಪ ಕಾರಣಪುರುಷರಹುದೆಮ್ಮ ಸೀಸಮುಖದೊಳವಿರ್ದ ಕರ್ಣರುಂ ಶಬರರುಂ ಮತ್ತಂ ಕೆಲಂಬರ್ ತುಂಡುಮನ್ನೆಯರ್ಕಳುಂ ಕಂಡು ನಡೆಯದೆ ಬಲವದ್ವಿರೋಧಿಗಳಾಗಿ [1] ಕ್ಷುದ್ರೋಪದ್ರವಂಗಳನೆಸಗುತಿರ್ಪರ್: ಆವುದರಲ್ಲಿಯುಂ ನೀವೆಮ್ಮ ಕಜ್ಜಂಗಳಿಗನುಕೂಲಿಗಳಾಗಿ ಸಮೀಪದೊಳಿರಲ್ವೇಳ್ಕುಂದೊಡವಡಿಸಿ ತುರಗಾಂದೋಳಿಕಾ ಛತ್ರಚಾಮರಾದಿ ವಿಭವಂಗಳುಮನುಚಿತಮಾದುಡುಗೊರೆ ತೊಡವ್ರತಾಂಬೂಲಂಗಳನಿತ್ತು ಮನ್ನಿಸಿಕೆಲವಶ್ವಪದಾತಿಗಳಧೀನದೊಳಿರ್ದುಸಂಗಡ [2]ಮೆಡೆಯಾಡಲೆಂದು ನಿಯಾಮಿಸಲಂತಾಗಲೆಂದೊಡಂಬಟ್ಟವರ್ಗಳ್ ರೂಢಿವೆತ್ತು ಕತಿಪಯದಿವಸಮಾರಾಯರ ಸಮೀಪದೊಳತಿಪ್ರೀತಿಪಾತ್ರರೆನಿಸಿ ವರ್ತಿಸುತ್ತುಮಿರಲಾ ಕಾಲದೊಳ್ಮಾಡದಿಕ್ಕಿನೊಳ್ ಶಬರರುಂ ಮತ್ತಂಕೆಲಂಬರ್ ತುಂಡುಮನ್ನೆಯರುಮೊಂದಾಗಿ ಪುಂಡೆದ್ದು [1] ದಾಳಿವರಿದಾರುಮಂ ಬಗೆಯದೆ

1 ದುರಾಳೋಚನೆಯುಂರಚಿಸಿಕ್ಷುದ್ರೋ....(ಕ)

2 ನಿಚ್ಚಹವಾಲಿಯೊಳ್ಸಂಗಡಮೆಡೆಯಾಡಲೆಂದು (ಕ)

1 ಮಾರ್ವಲೆತು ಪುಂಡೆದ್ದು (ಕ)

ರಾಜ್ಯಮಂ ಬಾಧಿಸುತ್ತುಮಿರಲೀವೃತ್ತಾಂತಮಂ ಕೃಷ್ಣರಾಯಂ ಕೇಳ್ದು ಚೌಡಪಭದ್ರಪರೊಡನೆ [1]ಸೈನ್ಯಮಂ ಕೂಡಿಸಿಕೊಟ್ಟುವರ್ಗಳಂ ನಿಗ್ರಹಿಸಿ ಬರ್ಪುದೆಂದು ನಿಯಾಮಿಸಿ ತಾಂಬೂಲವಿತ್ತು [2]ತೆರಳ್ದಲ್ಲೈದಿದುಭಯಸೈನ್ಯಕ್ಕಂ ಕೈಗಲಸಿ ತುಮುಲಯುದ್ಧಂ ಪಣ್ಣಲಾಗಳಾರಾಯಸೈನ್ಯದಾಕೆವಾಳನೊರ್ವಂದುನುಗ್ಗಾಗಿ ಮೊಗಮಿಕ್ಕಲಮ್ಮದೆ ಮುರಿದು ಪಿಂದೆಗೆಯುತ್ತುಮಿರಲ್ ಚೌಡಪನಭಿವೀಕ್ಷಿಸಿ ಧೈರ್ಯಂಗುಂದದೆ ಶ್ರೀಮದ್ರಾಮೇಶ್ವರನ ಪಾದಾರವಿಂದಮಂ ನೆನೆಯುತ್ತತಿಶೀಘ್ರದೊಳ್ತುರಗಾರೂಢನಾಗಿ ಶತ್ರುಸೈನ್ಯಕ್ಕಿದಿರ್ಚಿ ನಿಂದು [3]ವೀರರಸದಿಂ ಪೊರೆಯೇರುತ್ತುಮಿರಲಾ ಪ್ರಸ್ತಾವದೊಳ್ ॥ ೮೧

ಕುಂತವನಾಂತರಿಸಂತತಿ
ಯಂ ತಗುಳುತ್ತಾಂತ ಸುಭಟರಂ ತಿವಿತಿವಿದೋ ।
ರಂತಂತಕನಂ ತೋಱಿಸು
ತಿಂತಾ ಚೌಡೇಂದ್ರನಂಕದೊಳ್ಸೈವರಿದಂ ॥ ೮೩

ಅಸಮಬಲಂ ಭದ್ರಪನೊಂ
ದೆಸೆಯೊಳ್ಕುರಸಿಯನಾಂತು ಮುಸುಕಿದರಾತಿ ।
ಪ್ರಸರದ ಸುವಿಸರಮಂ ತೂಱ
ಗಿಸುತುಂ ರಣರಸವನಿಳಗೆ ಪಸರಿಸುತೆಸೆದಂ ॥ ೮೪

ಸುರಪತಿಯುಂ ನರಳ್ದು ಮಿಗೆ ಗೋಂಟುಗೊಳಿಪ್ಪುರುಕಾಲಕೇಯಭೀ
ಕರಬಲಮಂ ನಿವಾತಕವಚರ್ಕಳನಂದು ಕಿರೀಟಿ ಗೆಲ್ದವೋಲ್ ।
ತರುಬಿದ ಭಿಲ್ಲರಂ ಸದೆದು ರಾಯರ ಕಜ್ಜವನೈದೆ ಮಾಂಟುಗ್ಯೆ
ದುರತರಮಪ್ಪ ಬಾಹುಬಲಮಂ ಮೆರೆದಂ ಧುರಧೀರಚೌಡಪಂ ॥ ೮೫

ಮತ್ತಮದಲ್ಲದಾಚೌಡಪಂ [4] ೮೬

---

1 ತದುಪಯುಕ್ತಮಾದ ಸೈನ್ಯಮಂ (ಕ)

2 ತೆರಳ್ದಲ್ಲೈದಲುಭಯ (ಕ. ಖ.)

3 ವೀರರಸಂ (ಕ)

4 ಮತ್ತಮಂತುಮಲ್ಲದಾಚೌಡಪಂ (ಕ)

ನೆರೆದಹಿತರ ನೆರವಿಗಳೊ
ಳ್ತುರಗವನೆಣ್ದೆಸೆಯೊಳ್ಸದೆ ದುವ್ವಾಳಿಸುತುಂ ।
ಶರಕುಂತಖಡ್ಗದಂಡದೆ
ತರಿದಿರಿದರಿದರೆದು ಶಬರರಂ ಬರಿಕೈದಂ ॥ ೮೭

*ಅರಿವೊಡಾ ರಾಯರಿಂ ಗೆಲ
ಲರಿದೆನಿಸಿರ್ಪರಿನಿಕಾಯಮಂ ಕೂರಸಿಯಿಂ ।
ದರಿದರಿದು ಚೌಡಪಂ ಜವ
ನರಿತದ ದೂತರ್ಕಳಂಗೆ ಕೈವರ್ತಿಸಿದಂ ॥ ೮೮

ಇಂತಪ್ಪ ಚೌಡಪನದಟನಾಂಪೊಡಶಕ್ಯವಾಗಿ ೮೯

ಅತುಲಭುಜಬಲಪರಾಕ್ರಮ
ಯುತರರ್ಥವನಿತ್ತು ಕಂಡರರಿನೃಪವಸಿತಾ ।
ತತಿವೈಧವ್ಯದ ದೀಕ್ಷೆಯ
ನಾಂತುರುತಚ್ಚೌಡಧೀರನಸಿಗಳ್ಕದರಾರ್ ॥ ೯೦

ಮತ್ತಮದಲ್ಲದೆ ೯೧

ಕಡುಹಿಂ ರಾಯರನೆಣಿಸದೆ
ನಡೆವದಟರ್ಕಳನೆ ಪಿಡಿದು ಸಿಗಳವನಡಿಯೊ ।
ಳ್ತೊಡರಿಸಿ ಕೆಲಂಬರಂ ಪೆಡ
ಗುಡಿಗೊಳಗಾಗಿಸಿ ಮರಳ್ದನಾ ಚೌಡೇಂದ್ರಂ ॥ ೯೨

ಇಂತಾ ಚೌಡಪನಹಿತಕ್ಕೃ
ತಾಂತಂ ಕರಮೆಸೆವ ಭದ್ರಪಾನುಜಸಹಿತಂ ।
ಸಂತಸದೆ ಮರಳ್ದು ಸೇನಾ
ಸಂತತಿವೆರಸೈದಿ ರಾಯರಂ ಮಿಗೆ ಕಂಡಂ ॥ ೯೩

---

* ಇಲ್ಲಿ ಕವಿಯು ಗಣಸಿಯಮವನ್ನು ಮೀರಿದ್ದಾನೆ. (ಈವಿಚಾರವಾಗಿ ಉಪೋದ್ಘಾತದಲ್ಲಿ ಬರೆದಿರುವುದನ್ನು ನೋಡಿ) ಮುಂದೆ ಹೀಗೆ ಗಣನಿಯಮವನ್ನು ಮೀರಿದ ಪದ್ಯಗಳನ್ನು ನಕ್ಷತ್ರಚಿಹ್ನೆಯಿಂದ ಗುರುತು ಮಾಡಿದ್ದೇವೆ.

ಇಂತು ಕೃಷ್ಣರಾಯನಂ ಕಂಡು ನಿಗಳಹಡೆಗುಡಿಗಳಂಗೊಳಗಾಗಿಸಿ ತಂದ ಪ್ರತ್ಯರ್ಥಿಮನ್ನೆಯರಂ ತತ್ಪದಾರವಿಂದದೊಳ್ಕೆಡಹಿಸಿ, ಸಂಧಾನಮುಖದಿಂದೊಡನೈದಿದ ಕೆಲಂಬರ್ ತಂಡುಮನ್ನೆಯರ್ಕಳಂ ಕಾಣಿಸಿ, ಮತ್ತಂ ಕೆಲಂಬರಗಿದಿತ್ತರ್ಥಾಭರಣವಸ್ತ್ರವಸ್ತುವಾಹನಚಯಂಗಳುಮಂ ಮುಂಗಡೆಯೊಳಿರಿಸಿ, ಸಂದರ್ಶನಂಗೆಯ್ಯಲ್ ತತ್ಕೃಷ್ಣರಾಯನಭಿವೀಕ್ಷಿಸುತ್ತತ್ಯಂತಪ್ರಮುದಿತಮಾನಸನಾಗಿ ಚೌಡಪಭದ್ರಪರನಾಲಿಂಗನಂಗೈದು[1] ಮನ್ನಿಸಿ ಹತ್ತೆಕುಳ್ಳಿರಿಸಿಕೊಂಡು ಸಂಗ್ರಾಮವೃತ್ತಾಂತಮಂ ಮರಳ್ದು ಮರುಳ್ದು ಕೇಳ್ದು ಪೊಂಪುಳಿಯ ಪಟುತರಪರಾಕ್ರಮಶಾಲಿಗಳಪ್ಪಿವರನಿನ್ನುಂ ಪೆರ್ಚಿಸಿ[2] ತುರುಷ್ಕರ್ಗಲಗಣಸಾಗಿ ನಿಲಿಸಲ್ವೇಳ್ಕೆಂದು ಮನದಂದು ತದುಚಿತಮಾದ ತೊಡವುಡುಗೊರೆತಾಂಬೂಲಂಗಳುಮನಿತ್ತಾದರಿಸಿ ಚಾಮೀಕರಲಾಂಛನಲಾಂಛಿತಮಾದನೆಗಳ್ವಾಯಿಗಳಂ ವಿರಾಜಿಸುತ್ತಿರ್ಪ ಪೊಸಪಲ್ಲಕ್ಕಿಯಿಕ್ಕಿ ನಿಜನಿವಾಸಕ್ಕೆ ಕಳುಪಿ ಬಳಿಕ್ಕಂದಿನದಿನದೊಳತಿಪ್ರೀತಿಯಿಂ ನಡೆದುಕೊಳ್ಳುತ್ತುಮಿರುತ್ತಿರಲತ್ತಮುತ್ತರದಿಕ್ಕಿನೊಳಿರ್ಪ ವಿದ್ಧಕರ್ಣಾರ ದಾಳಿವರಿಯಲ್ವೇಳ್ಕೆಂದು ದುರ್ಮಂತ್ರಾಲೋಚನೆಯಂ ರಚಿಸುತ್ತಿರ್ದಪರೆಂಬ ವರ್ತಮಾನಮಂ ಬೇಹುಚರರ ಮುಖದಿಂ ಕೇಳ್ದು ತುರುಷ್ಕರ್ಗಾಸ್ಪದಮಾಗದಂತು ಚೌಡಪಭದ್ರಪರಂ ಗಡಿಮುಖದೊಳ್ನಿಲಿಸಿದೊಡೆಂಮಕಜ್ಜಂ ಮುಂದೆ ಶೇಖರಮಪ್ಪುದೆಂದು ನಿಶ್ಚಯಿಸಿ ತತ್ಕಾಲೋಚಿತಮಾಗಿಪರಿಮಿತಾಪ್ತಮಂತ್ರಿನಿಯೋಗಿಜನರ್ವೆರಸೊಡ್ಡೋಲಗಂಗೊಟ್ಟು ಚೌಡಪಭದ್ರಪರಂ ಬರಿಸಿ ಹತ್ತೆಕರೆದು ಸಮೀಪದೊಳ್ಕುಳ್ಳಿರಿಸಿಕೊಂಡಾ ಕೃಷ್ಣರಾಯಂ ಮಂದಸ್ಮಿತವದನಾರವಿಂದನಾಗುತ್ತುಮಾ ಚೌಡಪಭದ್ರಪರೊಡನಿಂತೆಂದಂ ॥ ೯೪

ಅರಿಚಯಮೆಡೆಯಾಡದವೊ
ಲ್ಕರವೊಪ್ಪುವ ಚಂದ್ರಗುತ್ತಿ ಕೆಳದಿಯ ಮುಖದೊಳ್ ।

---

1 ಗೈದು ಸಂಗ್ರಾಮವೃತ್ತಾಂತಮಂ (ಬ)

2 ಪೆರ್ಚಿಸಿನಿಲಿಸಲ್ವೇಳ್ಕೆಂದು (ಬ)

ಹೊರಪೊಳ್ಯವಾಗಿ ವರ್ತಿಪ
ಸುರುಚಿರಪರಮಾಧಿಕಾರಮಂ ನಿಮಗೀವೆಂ ॥ ೯೫

ಹೆಮ್ಮೆಯೊಳೀಯಧಿಕಾರದ
ಬಿಮ್ಮಳಿಯದ ತೆರದೆ ರೂಡಿವೆತ್ತಿಳಗೆ ಕರಂ ।
ದಿಮ್ಮಿದರಾಗಿ ದಿಟಂ ನೀ
ವೆಮ್ಮವರೆಂದೆನಿಸಿ ವರ್ತಿಸುತ್ತಿರ್ಪವೊಲುಂ ॥ ೯೬

* ಕೆಳದಿ ಯಿಕ್ಕೇರಿ ಪೆರ್ಬಯ
ಲೆಲಗಳಲೆ... .. ... ....ಯೊಪ್ಪುವ ಮೋದೂ ।
* ರ್ಕಲಿಸೆ ಲಾತವಡಿ ಯೆಂಬೀ
ವಿಲಸನ್ಮಾಗಣೆಗಳೆಂಟುಮಂ ನಿಮಗೀವೆಂ ॥ ೯೭

ಮಿನುಪೆಂಟುಮಾಗಣೆಗಳುಮ
ನನುನಯದಿಂ ಸಿಮ್ಮ ವಂಶಪಾರಂಸರೆಯಿಂ ।
ದನುಭವಿಪುದೆಂದು ವರಶಾ
ಸನಮಂ ತತ್ಕೃಷ್ಣರಾಯನುರೆ ಬರೆಸಿತ್ತಂ ॥ ೯೮

ಈ ಯೆಂಟು ಮಾಗಣೆಗಳಿಗೆ
ರಾಯನಿರೀವೆನಿಸಿ ಸುಖದೊಳಾಚಂದ್ರಾರ್ಕಂ ।
ಸ್ಥಾಯಿಗಳಾಗಿರ್ದಮಗೆ ಸ
ಹಾಯಿಗಳೆಂದೆನಿಸಿ ಬಾಳ್ವುದತಿಮುದದಿಂದಂ ॥ ೯೯

ಎಂದುರುಮದೇಭಸ್ಫೋಟಿಕ
ವೃಂದಪದಾತಿಪ್ರತಾನಮಂ ನೃಪವೆಂಸೊ ।
*ಲ್ದಂದು ಕೈಗೊಳಿಸಿ ಪೊಸಪೊ
ನ್ನಂದಣಮಂ ವಿಲಸದಾತಪತ್ರವಸಿತ್ತಂ ॥ ೧೦೦

ಅರಿದಲೆ ಸುಶಂಖ ಚಕ್ರಂ
ಕರವೊಪ್ಪುವ ಕನಕಚೌರಿ ಸೀಗುರಿ ಶೋಭಾ ।

ಕರವಿಲಸದುಭಯಚಮರಂ
ಸರನೇಜವೆನಿಪ್ಪ ಬಿರುದುಗಳನೊಸೆದಿತ್ತಂ ॥ ೧೦೧

ಇಂತಪ್ಪ ರಾಜಲಾಂಛನೋಪಯುಕ್ತಮಾದ ಬಿರುದುಗಳುಮನಿತ್ತು ಮನ್ನಿಸಿ ತದಾರಭ್ಯ ಕೆಳದಿಮೂಲಸಂಸ್ಥಾನದ ಮನ್ನೆಯ ಚೌಡಪ್ಪನಾಯಕನೆಂದು ಕರೆವುದೆಂದು ನಿಯಾಮಿಸಿ ಪ್ರಖ್ಯಾತಮಪ್ಪಂತು ನಾಲ್ಗಡೆಯೊಳಿರ್ಪ ಮನ್ನೆಯರ್ಗಂ ರಾಯಸಮಂ ಬರೆಸಿ ಸಂಗಡಮುಚಿತಮಪ್ಪ ಗುರಿಮಾನಿಸರಂ ಪ್ರಯಾಣಮನೊಡರ್ಚಿಸಿ ನೀವುಂ ನಿಮ್ಮ ಮೂಲಸಂಸ್ಥಾನಮಂ ಸಾರ್ದಂಟುಮಾಗಣಿಯ ಪ್ರಜೆಪರಿವಾರಮಂ ಕಾಣಿಸಿಕೊಂಡು ರಾಜಮುದ್ರಾಧಿಕಾರದ ಬಿಣ್ಪುಗುಂದದಂತಾಣೆ ಘೋಷಣೆಯಂ ಕೆರ್ಘುಂಕೆನಾಣ್ಯರಾಯಸಮುಂತಾದುವಂ ನಡೆಸಿಕೊಂಡೆಮಗುಂಟಾದೆಮ್ಮಕಾರ್ಯಂಗಳೆಲ್ಲಂ ನಿಮ್ಮ ಕಾರ್ಯಂಗಳ್ ಸರಿಯೆಂದು ಬಗೆದೀಪ್ರಕಾರದೊಳ್ ನಿರ್ಭೇದಮಾಗಿ ವರ್ತಿಸುತ್ತುಂ ಸುಖಮಿರ್ಪುದೆಂದೊರೆದವರಿರ್ವರ್ಗಮುಚಿತಮಪ್ಪ ದಿವ್ಯತರನವರತ್ನ ಖಚಿತಸ್ವರ್ಣಾಭರಣಾಂಬರತಾಂಬೂಲಂಗಳನಿತ್ತಾದರಿಸಿ ತೆರಳೆ ಅತ್ಯಂತ [1] ಹರ್ಷಿತರಾಗಿ ತೆರಳ್ದೈತಂದು ಕೆಳದಿಪುರವರಮಂ ಸಾರ್ದೊಡನೆ ತತ್ಕಾಲೋಚಿತಮಾದರಮನೆಯಂ ನಿರ್ಮಾಣಂಗೈಸಿ ಕುಟುಂಬಸಹಿತಮಲ್ಲಿರ್ದಾಪುರದ ತೆಂಕಮುಖದೊಳ್ [2] ಹೊಡೆಯಂ ಬಲಿಯಿಸಿ ಕಾಪ್ಪು ಕಟ್ಟಲೆಗಳಂ ರಚಿಯಿಸಿ, ಶಕವರ್ಷಂ ೧೪೨೧ನೆಯ ಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧ ೩ಯಲ್ಲಿ ಈ ಚೌಡಪ್ಪನಾಯಕರ್ಗಾಕೆಳದಿಪುರದರಮನೆಯೊಳ್ ರಾಜಪಟ್ಟಮಾಗಲೊಡನೆ ಕೆಳದಿ ಇಕ್ಕೇರಿಮೊದಲಾದಷ್ಟಮಾಗಣಿಗಳ ಪ್ರಜೆಪರಿವಾರನೆರೆಸಾಮಂತರಿಂಕಾಣ್ಕೆಗೊಂಡು ಸಂದರ್ಶನಂಗಳನಿತ್ತವರ್ಗಳಂ ಬೀಳ್ಕೊಟ್ಟನಂತರಂ ನಾಲ್ಗಡೆಯುಮನ್ನೆಯರ್ಗಂ ರಾಯಸಮಂ ಬರೆಸಿ ತದುಚಿತಮಾದುಡುಗೊರೆಗಳಂ ಕಳುಪಿ ರಾಜ್ಯಭಾರವಿಚಾರತತ್ಪರನಾಗಿ ವರ್ತಿಸುತ್ತುಮಿರ್ದು ತತ್ಪುರರಾಮೇಶ್ವರದೇವರ [3]ಗರ್ಭಗೃಹಮಂ ಶಿಲಾಮಯಮನಾಗಿಸಿ

1 ಅತ್ಯಂತವಿಭವಹರ್ಷಿತರಾಗಿ (ಬ)   2 ಹೊಡೆಯುಮಂ ಬಲಿಯಿಸಿ (ಕ)
3 ದೇವರಗೃಹಮಂ (ಬ)

ತತ್ಪೂಜಾರ್ಥಂ ಪಳ್ಳಿವೆಯುಲ ಗ್ರಾಮಮುಮಂ ಮತ್ತಂ ಕೆಲವು ಮಿಾಂಟೂ
ದ ಗ್ರಾಮಂಗಳುಮಂ ಶಿವಾರ್ಪಣಂಗೈದು ಲೋಪಮಾಗದಂತು ತತ್ಪೂ
ಜಾದಿವಿಭವಂಗಳಂ ನಡೆಯಿಸುತ್ತುಂ ಗುರುಲಿಂಗಜಂಗಮಾರ್ಚನತತ್ಪರ
ನೆನಿಸಿ ಬಹುವಿಧದಾನಧರ್ಮಂಗಳಂ ರಚಿಸುತ್ತುಮೆಡೆಯೆಡೆಗೆ ರಾಯಸ
ಮುಖದಿಂದೊದವಿದ ರಾಯರ ಜಯಕಜ್ಜಂಗಳನಾಗಿಸುತ್ತುಂ ದೆಸೆದೆಸೆ
ಯೊಳತಿಪ್ರಖ್ಯಾತಿಯುಂ ಪಡೆದು ಕೆಳದಿ ಇಕ್ಕೇರಿ ಚಂದ್ರಗುತ್ತಿ ಮುಂತಾ
ದ ಮುಖಂಗಳೊಳ್ ವೈಹಾಳಿಗಳಂ ರಚಿಸುತ್ತತ್ಯಂತ ವಿಭವೋಪೇತನಾಗಿ
ನರ್ತಿಸುತ್ತಿಂತು ಕತಿಪಯದಿವಸಂಗಳ್ಪೋಗಲೊಂದವಸರದೊಳ್ ॥ ೧೦೨

ಸುತಸಹಿತಂ ಚೌಡಪಭೂ
ಪತಿ ತಾನಿಕ್ಕೇರಿಗೈದಿರಲ್ ಮೊಲಮೊಂದು ।
ನ್ನತಮಾದ ಶುನಕನಂ ತ
ತ್ಕ್ಷಿತಿಯೊಳ್ಬೆಂಬತ್ತಿ ಪರಿಯುತಿರಲೀಕ್ಷಿಸುತುಂ ॥ ೧೦೩

ಇದು ತಾಂ ಪುಂಭೂಮಿ ಯೆನಿ
ಪ್ಪುದನರಿದೊಡನಲ್ಲಿ ಕೋಂಟೆಯುಂ ಬಲಿದು ಬಳ ।
ಕ್ಕದರೊಳರಮನೆಯನಿಂದ್ರನ
ಸದನಕ್ಕಧಿಕಮೆನೆ ರಚನೆಗೈಸಿದನನುವಿಂ ॥ ೧೦೪

ಇಂತರಮನೆಯುಂ ರಚನೆಗೈಸಿ ತದುಪಯುಕ್ತಮಾದ ಬೊಕ್ಕಸ ಭಂಡಾರ ಲಾಯ [1] ಗಜಾಶ್ವಶಾಲೆ ಯುಗ್ರಾಣ ಪಣತ ಮುಂತಾದ ಮುಹಲ್ಗಳಂ ನಿರ್ಮಾಣಂಗೈಸಿ ಪುರ ಪೇಟೆ ತಳವಾರಗಟ್ಟೆ ಮುಂತಾದುವಂ ರಚನೆಗೈಸಿ ಪೊರಗುಕ್ಕಡಮನೊಡ್ಡಮುಂ ಬಲಿಯಿಸಿ ತತ್ತದುಚಿತಸ್ಥಾನಂಗಳೊಳ್ [2] ಶಸ್ತ್ರಾಸ್ತ್ರಪಾಣಿಗಳ ಕಾಯ್ಪುಕಟ್ಟಲೆಗಳಂ ಪರುಠವಿಸಿ ನಿಜಾನುಜಭದ್ರಪನಾಯಕ ಸುತಸದಾಶಿವನಾಯಕ ಸ್ವಕುಟುಂಬಸಹಿತಂ ಸುಮುಹೂರ್ತದೊಳ್ಕೆಳದಿಯರಮನೆಯಿಂ ತೆರಳ್ದತ್ಯಂತ

---

1 ಲಾಯುಜಾನವಶಾಲೆ ಉಗ್ರಾಣ (ಬ)

ಶಸ್ತ್ರಾಸ್ತ್ರ ಮೊದಲಾದ ಪಾಣಿಕಾಯ್ಪು ಕಟ್ಟಲೆಗಳಂ (ಕ)

ಸಂಭ್ರಮದಿಂ ಪ್ರಜೋತ್ಪತ್ತಿಸಂವತ್ಸರದ ಮಾಘ ಶುದ್ಧ ೫ ಯಲ್ಲಿ ಯಿಕ್ಕೇರಿಯರಮನೆಯಂ ಪೊಕ್ಕು ಭದ್ರಸಿಂಹಾಸನಾರೂಢನಾಗಿ ರಾಜಮುದ್ರಾಧಿಕಾರದ ಧರ್ಮಕರ್ತೃಕಣೆಯುಮೊಂದದಂತು ಪ್ರಜೆಪರಿವಾರಂಗಳನೋವುತ್ತಾವುದರಲ್ಲಿಯುಂ ತಾಂ ಜಾಗ್ರತ್ಪುರುಷನೆಂದೆನಿಸಿ ನಾಲ್ವೆಸೆಯುಮನ್ನೆಯರ್ಕಳೊಳ್ ಕೆಳದಿಯ ಚೌಡಪ್ಪನಾಯಕನೆಂದು ಪರಮಪ್ರಸಿದ್ಧಿಯಂ ಪಡೆದಿಂತು ವರ್ತಿಸುತ್ತುಂ ॥ ೧೦೫

ರಾಯ [1] ಬೆಸಸಿದ ಕಾರ್ಯನಿ
ಕಾಯಮನಾಗಿಸುತೆ ಚೌಡನೃಪನವನಿಪಧ್
* ರೇಯನೆಂದೆನಿಸಿ ರಾಜ್ಯ
ಶ್ರೀಯಂ ಸದ್ಧರ್ಮದಿಂದೆ ಪರಿಪಾಲಿಸಿದಂ ॥ ೧೦೬

ಇಂತಾ ಕೆಳದಿಯ ಚೌಡಪನಾಯಕಂ ತನಗೆ ರಾಜಪಟ್ಟವಾದ ಶಕವರ್ಷ ೧೪೨೧ನೆಯ ಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧ ೫ಯಾರಭ್ಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೨ಯ ನೆಲೆಗೆ ವರ್ಷಂ ೧೪ ತಿಂಗಳು ೬ ಪರ್ಯಂತಂ ಸದ್ಧರ್ಮದಿಂ ರಾಜ್ಯಪರಿಪಾಲನಂಗೈದಂ ॥ [2]

ಪ್ರಥಮಾಶ್ವಾಸಂ ಸಂಪೂರ್ಣಂ.

---

1 ರಾಯರೂಹಿಸಿದಕಾರ್ಯ (ಕ, ಬ.)

2 ಈ ಚೌಡಪನಾಯಕರಿಗೆ ಇಕ್ಕೇರಿಯರಮನೆಯ ಕೊಪ್ಪಲಲ್ಲಿ ಸಮಾಧಿಯಾಯ್ತು (ಕ)

# ದ್ವಿತೀಯಾಶ್ವಾಸಂ.

---

ಆ ಚೌಡಪ್ಪನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೩೬ ನೆಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ಯಲ್ಲಿ ಕೆಳದಿಯ ಚೌಡಪ್ಪ ನಾಯಕರ ಕುಮಾರರಾದ ಸದಾಶಿವರಾಯ ನಾಯಕರಿಗೆ ಇಕ್ಕೇರಿಯ ಅರಮನೆಯಲ್ಲಿ ರಾಜ್ಯಪಟ್ಟಂ.

ವರಚೌಡಪನೃಪತಿಯನಂ
ತರದೊಳ್ತತ್ತನುಜನಹ ಸದಾಶಿವಧರಣೀ ।
ಶ್ವರನರಿಕುಲಮದತಿಮಿರೋ
ತ್ಕರದಿನಕರನಾಳ್ದನೊಪ್ಪುವವನೀತಳಮಂ ॥ ೧

ಆ ನರನಾಥಪುಂಗವನರಾತಿಮದೇಭವಿದಾರಣೋಗ್ರಪಂ
ಚಾನನನಾನತಾಮರಮಹೀಜನಶೇಷಕಲಾಪ್ರವೀಣನೀ ।
ಶಾನಕೃಪಾಕಟಾಕ್ಷಪರಿಲಬ್ಧಮಹೋನ್ನತಭೂರಿವೈಭವಂ
ತಾನೆಸೆದಂ ಮಹಾಧಿಕಸದಾಶಿವನಾಯಕನುಗ್ರಸಾಯಕಂ ॥ ೨

ಇಂತು ವಿರಾಜಿಸುತ್ತುಮಿರಲ್ ಕತಿಪಯ ದಿನಂಗಳ್ ಪೋಗಲೊಡನೆ॥ ೩

ಶಂಕರಪಾದಪದ್ಮಮದಭೃಂಗಸದಾಶಿವರಾಯನಾಯಕಂ
ಗಂ ಕಡುಚೆಲ್ವ ಪುತ್ರನೊಗೆದಂ ಸದಶೇಷಸುಖಪ್ರದಾಯಕಂ ।
ಅಂಕದೊಳ್ಕದೆ ಮಾರ್ಮಲೆವರಾತಿಗಳುರ್ವ ನಿವಾರಿಪುಜ್ಜ್ವಲ
ತ್ಸಂಕಣನಾಯಕಂ ಶುಭವಿಧಾಯಕನಾತ್ತಜಯೋಗ್ರಸಾಯಕಂ ॥ ೪

ಮಗುಳಾ ಸದಾಶಿವೇಂದ್ರಂ
ಗೊಗೆದಂ ಸತ್ಪುತ್ರನೊರ್ವನನುಪಮರೂಪಂ ।

ಮಿಗೆ ಸತ್ಕೀರ್ತಿಕಲಾಪಂ
ಜಗತೀಸುಮೆಚಾಪಚಿಕ್ಕಸಂಕಣಭೂಪಂ ॥ ೫

ಇಂತೊಗೆದು ವಿರಾಜಿಸುತಿರ್ಪ ಸತ್ಪುತ್ರರಿರ್ವರ್ಗಂ ನವಯೌವನೋದಯಮಾಗಲೊಡನೋರೊರ್ವರ್ಗಿರ್ವರಿರ್ವರ್ ಕನ್ಯಾರತ್ನಂಗಳನತ್ಯಂತವಿಭವದಿಂ ವಿವಾಹಮಂ ರಚಿಸಿ ತತ್ಪುತ್ರರ್ಕಳ್ವೆರಸತಿಸಂಭ್ರಮಸುಖಸಂಕಥಾವಿನೋದದಿಂ ರಾಜ್ಯಂಗೈಯುತ್ತುಮಿರಲಾಪ್ರಸ್ತಾವದೊಳ್॥ ೬

ಮಿಸುಗುವರಾತಿಜಾಲವದಟಿಂ ಮಿಗೆ ಮಗ್ಗಿಸೆ ಕೃಷ್ಣರಾಯರೀ
ದೆಸೆಗೆ ಚಮೂಸಮೂಹವೆರಸೈದಿರೆ ಚೌಡಪಸೂನುವೈದಿಸಂ ।
ಧಿಸೆ ಮಿಗೆ ಮನ್ನಿಸುತ್ತೆಮಗೆ ಮೂರ್ಮಲೆತಿರ್ಪಹಿತಾವನೀಶ್ವರ
ಪ್ರಸರದ ಗರ್ವಮಂ ತವಿಸಿ ನೀಂ ಬಹುದೆಂದು ತೆರಳ್ತಲೊಲ್ಮೆಯಿಂ॥ ೭

ಇಂತೆಂದು ನಿಯಾಮಿಸಿ ಯುಚಿತಮಾದುಡುಗೊರೆಯುನಿತ್ತು ನಾಂಬರ್ಪನಿತರೊಳ್ನೀಂ ಮುಂತೈದಿ ಕಲ್ಯಾಣ ಕಲುಬುರಗಿ ಕೋಂಟೆಗಳಂ ಕೊಂಬುದೆಂದೊರೆದು ಕೂಡೆ ಕೆಲವಶ್ವಗಜಪದಾತಿಗಳಂ ಕೂಡಿಸಿ ಬೀಳ್ಕೊಡಲೊಡನೆ ಸೈನ್ಯಸಮೇತಂ ತೆರಳ್ದು ಪಾಳೆವರಿಯುಲೀವಾರ್ತೆಯಂ ಕೇಳ್ದು ತಾಮ್ರತುಂಡಾಗ್ರೇಸರನಪ್ಪ ಅಮದಾನಗರದ ಭೈರೀ ನಿಜಾಮಪಾತುಶಾಹನನುಮತಿಯಿಂ ಫೇರೋಜಿಖಾನ ತಾಲೀತಖಾನ ಸಂಜರ್ಖಾನ ಶಾತೇಖಾನ ಮುಸಿಲಖಾನ ದಸ್ತುರಖಾನ ವಜ್ರಖಾನ ರಾವುತಖಾನ ಬೊಕ್ಕಸಿಂಗರೆಂಬತ್ಯದ್ಭುತಪರಾಕ್ರಮಶಾಲಿಗಳಪ್ಪ ವಜೀರರ್ಕಳೊಂದಾಗಿಯಪರಿಮಿತ ಸೈನ್ಯಸಮೂಹಸಹಿತಂ ತೆರಳ್ದುತಂದು ಜಂಬುಖಂಡಿಯೆಂಬ ಸ್ಥಳದೊಳ್ ಬಾಜಮಾರ್ಗಮಂ ಕಟ್ಟಿ ರಣರಂಗಕ್ಕಿದಿರ್ಚಿ ನಿಲಲವರ್ಗಂ ಕೈಗಲಸಿಮಹಾಯುದ್ಧಂ ಪಣ್ಣಿ ರಾಯಸೈನ್ಯಂ ಸಿಂದು ಸಿತ್ತರಿಸಲಮ್ಮದೆ ಮುರಿದು ಪಿಂದೆಗೆಯುತ್ತುಮಿರಲಭೀಕ್ಷಿಸಿ ಸದಾಶಿವರಾಯನಾಯಕಂ ತಾನೆ ತೆರಳ್ದು ಮೇಲ್ವಾಯ್ದು ಕೈಗೆಯ್ಯುತ್ತುಮಿರಲ್ ಸಂಗಡಮೆಳ್ತಂದ ವಜೀರರ್ಕಳ್ವೆರಸು ಬೊಕ್ಕಸಿಂಗನಿದಿರ್ಚಿ ನಿಂದು ಕೈಗೆಯ್ಯಲಾಬೊಕ್ಕಸಿಂಗನ ಕ್ರೂರಾಸಿವಿಘಾತಿಯಿಂ ಸದಾಶಿವನಾಯಕಂ ತೊಟ್ಟಿರ್ದ ಜಿಲೆ

ಯಂ ಪರಿದು ಪೆಗಲ್ವಿಡಿದು ನಡುಬೆನ್ನಂಬರಂ ಮುರಿಸಾದ ಪಸೆದೋರ
ಲಾಗಳಾ ಗಾಯಮಂ ಸೈರಿಸಿ ಮಹಾಧೈರ್ಯಪರನಾಗುತ್ತಾತ್ಮಸೈನ್ಯಂವೆ
ರಸತ್ಯಂತಕೋಪಾಟೋಪದಿಂ [1] ಕಗ್ಗೊಲೆಯಂಬಿಳ್ದು ಕೈಗೆಯ್ಯುತ್ತು
ಮಿರಲಾ ಪ್ರಸ್ತಾವದೊಳ್ ॥ ೮

ಎಸೆವಾ ತಾಲಿತಖಾನನೊಂದುಕಡೆಯೊಳ್ ಘೇರೋಜಖಾನಂದಲೊಂ
ದೆಸೆಯೊಳ್ ಸ್ಫುರಖಾನನೊಂದುಮೊಗದೊಳ್ ಶಾತೇಯನೊಂದಿಕ್ಕಿನೊ
ಳ್ಕ್ರಸುಪಾಸಂಜನಖಾನನೊಪ್ಕ್ರಗದೆ ವಜ್ರಾಖ್ಯಂ [2] ಮುಸಿಲ್ಖಾನಬೊ
ಕ್ಕಸಿಗಂ ರಾವುತಖಾನರೆಂಕಿ ಖತಿಯಿಂ ಕೈಗೆಯ್ದರಂದಾಜಿಯೊಳ್ ॥ ೯

ಇಂತಷ್ಟವಜೀರರ್ಕಳಣ್ಗೆ ಸೆಗಳೊಳಾತ್ಮಸೈನ್ಯಂವೆರಸೊಮ್ಮೆ
ಮುತ್ತಿ ಮುಸುಂಕಿ ಕೈಗೆಯ್ಯುತ್ತುಮಿರಲಾಗಳಾ ಸದಾಶಿವನಾಯಕಂ
ಧೈರ್ಯಂಗುಂದದೆ ನಿತ್ತರಿಸಿ ಸಿಂದು ಮಹಾಯುಧಮಂ ರಚಿಸಿ ॥ ೧೦

ತಾಲಿತಖಾನನ ಸಮರದ
ಲೀಲೆಯನುರೆ ಸಿಲಿಸಿ ಕುಂತದಿಂ ದಸ್ತುರನಂ ।
ಕೀಲಿಸಿ ಘೇರೋಜನ ಕ
ಣ್ಣಾಲಿಗೆ ಸೀರ್ವರಿಸಿ ಕೆಡಪಿದಂ ಶಾತಯನಂ ॥ ೧೧

ಬೆಂಕಿದ ಸಂಜನಖಾನನ
ಬಿಂಕವನುರೆಮುರಿದು ವಜ್ರಖಾನನನಾದಂ ।
ತೇಕಿಸಿ ರಾವುತಖಾನನ
ನಂಕದೆ ಗೆಲ್ದೆಸೆವ ಮುಸಿಲಖಾನನ ಮುರಿದಂ ॥ ೧೨

ಮುರಿದ ವಜೀರರಸೀಕ್ಷಿಸು
ತುರುತರಕೋಪದೊಳದಿರ್ದು ಸೈನ್ಯಸಮೇತಂ ।
* ತರುಬಿ ಮಾರ್ಮಲೆತು ಕೈಗೆ
ಯ್ದುರುಬುವ ಕಲಿಬೊಕ್ಕಸಿಂಗನಂ ನೋಯಿಸಿದಂ ॥ ೧೩

---

1 ಕೋಪಾಟೋಪದಿಂ ಕೈಗಯ್ಯುತ್ತುಮಿರಲ್(ಬ) 2 ವಜ್ರಾಖರ್(ಕ)

ಮಿಕ್ಕುರುಬುವ ಭಟರಂ ಖ
ಡ್ಗಕ್ಕಾಹುತಿಯಿತ್ತು ಕುಂತದಿಂ ಕೆಲಕೆಲರಂ ।
ಸೆಕ್ಕಿ[1] ಶರಹತಿಯಿನನಿಬರ
ಡೊಕ್ಕೆಗಳಂ ಡೋರುಗಳದ ನಾನೃಪತಿಲಕಂ ॥ ೧೪

ಇಂತೀ ಪ್ರಕಾರದೊಳ್ಮಹಾಯುದ್ಧಮಂ ರಚಿಸಿ, ೧೫

ವರಜಂಬುಖಂಡಿಯೆಡೆಯೊ
ಳ್ತರುಬಿದ ತುರುಷ್ಕಪತಿಯ ಖಾನರನೆಲ್ಲಂ ।
ಕುರಿದರಿದು ಬೊಕ್ಕಸಿಂಗನ
ಸೆರೆವಿಡಿದೆಳ್ತಂದು ರಾಯರಿಂಗೊಪ್ಪಿಸಿದಂ ॥ ೧೬

ಇಂತೆಸೆವ ಪರಾಕ್ರಮಶಾಲಿಯಪ್ಪ ಬೊಕ್ಕಸಿಂಗನಂ ಕೈಸೆರೆವಿಡಿದೊಪ್ಪಿಸಿ ರಾಯರಂ ಪರಮಸಂತೋಷಂಬಡಿಸಿ ಬಹುಳಸನ್ಮಾನವನಾಂತುಮನ್ನೆಯರ್ಕಳೊಳ್ಪರಮಪ್ರಸಿದ್ಧಿಯಂ ಪಡೆದನಂತುಮಲ್ಲದೆಯುಂ ॥ ೧೭

ಆ ತರುವಾಯಿಯೊಳಂ ಪ್ರೊ
ಕ್ಕಾತಂ ರಾಯರ್ಗೆ ಮಲೆತ ಕಲ್ಯಾಣದ ವಿ ।
ಖ್ಯಾತಸುದುರ್ಗವರಾತಿ
ವ್ರಾತವನುರೆ ಪೊಯ್ದು ಲಗ್ಗೆಯೊಳ್ಸಾಧಿಸಿದಂ ॥ ೧೮

ಮೆರೆವಾ ದುರ್ಗವನಾನೃಪ
ನುರೆ ಕೊಂಡಿಮ್ಮಡಿಸದಾಶಿವೇಂದ್ರನೆನಿಪ್ಪೀ ।
ಬಿರುದಿನಭಿಧಾನಮಂ ಮಿ
ಕ್ಕರಸರ್ತಲೆದೂಗೆ ರಾಯರಿಂ ಪಡೆದೆಸೆದಂ ॥ ೧೯

ಮತ್ತಮಾ ಕಲ್ಯಾಣದುರ್ಗಮಂ ಕೊಂಡು ಬರ್ಪವಸರದೊಳ್ ಕಲುಬುರುಗಿಯವರ್ಮಾರ್ಮಲೆತಿರಲ್ ಕೃಷ್ಣರಾಯರಲ್ಲಿ ನಿಂತು ತಮ್ಮ ಕರಕಮಲದೊಳ್ಪಿಡಿದಿರ್ದ ಜವುವಾಡನ ಕೋಂಟೆಗಂ[2] ಪರಿದು ತಮ್ಮ

1 ಸಿಕ್ಕಿ (ಬ)  2 ಪಣಿದು (ಕ, ಬ)

ಸಮೀಪದೊಳಿರ್ಪ ಮನ್ನೆಯರ್ಕಳಂ ಕರೆದೀಕೋಂಟೆಯಂ ತೆಗೆದು ಕೊಂಬುದೆಂದು ನಿಯಾಮಿಸಲವರ್ಗಳಿಂದಮಗಶಕ್ಯಮಾದ ಕಜ್ಜಮೆಂದು ಮುಂಪೋಗಲಮ್ಮದಾಲೋಚಿಸುತ್ತುಮಿರಲಾಪ್ರಸ್ತಾವದೊಳ್ ॥ ೨೦

ಭೀಕರತರರಿಪುಸೇನಾ
ನೀಕವನಸಿಯುರೆಯುತಧಿಕಶೌರ್ಯದೊಳೞಿಬಿ ।
ಳ್ದಾ ಕಲುಬುರುಗಿಯ ದುರ್ಗವ
ನೇಕಮುಹೂರ್ತದೊಳ್ ತನ್ನೃಪಂ ಸಾಧಿಸಿದಂ ॥ ೨೧

ಕಲುಬುರುಗಿಯ ದುರ್ಗವನಿಂ
ತಳವಿಯೊಳಂ ಕೊಂಡು ರಾಯರಂ ಮೆಚ್ಚಿಸಿಯು ।
ಗ್ಗಳನೆನಿಸಿ ಕೋಂಟೆಕೋಲಾ
ಹಲನೆನಿಸೀಬಿರುದನಾಂತು ರಾರಾಜಿಸಿದಂ ॥ ೨೨

ಇಂತು ಕಲುಬುರುಗಿಯ ದುರ್ಗಮಂ ಧೂಳಿಗೋಂಟೆಯಂ ಕೊಂಡನಂತರಂ ॥ ೨೩

ಕಡುಗಲಿಕೃಷ್ಣರಾಯರುರೆ ಜಾಲೆಯ ಪಾಳೆಡೆಗೈದೆ ಬಂದು ಮ
ಲ್ಲಡಿಗಳನೈದೆ ಸಂಧಿಸದಹಂಕೃತಿಯಿಂ ಕರಮುಂದಿದಿರ್ಚಿ ನಿಂ ।
ದೆಡವಮುರಾರಿ ಯೆಂಬವಟರಂ ಮುರಿದೇರ್ದವರಿರ್ದ ಕೋಂಟೆಗೊಂ
ಡೆಡವಮುರಾರಿ ಯೆಂಬ ಬಿರುದಂ ಪಡೆದೊಪ್ಪಿದನಾನರಾಧಿಪಂ ॥ ೨೪

ಮತ್ತಮದಲ್ಲದಾ ಕೃಷ್ಣರಾಯಂ ಸದಾಶಿವನಾಯಕನಂ ಕರೆದು ತನಗೆ ಮಾರ್ಮಲೆತಿರ್ಪ ಬರೀದಪಾತುಶಾಹನ ಮದೋದ್ರೇಕಮಂ ಮಗ್ಗಿಸಿ ಬರ್ಪುದೆಂದು ನಿಯಮಿಸಿ ಕಳುಪಲ್ ದಾಳಿವರಿಯುತ್ತೈತರ್ಪ ವಾರ್ತೆಯಂ ಬರೀದಪಾತುಶಾಹಂ ಕೇಳ್ದತ್ಯಂತಕೋಪಾಟೋಪದಿಂದ ತ್ಯದ್ಭುತಪರಾಕ್ರಮಶಾಲಿಗಳಪ್ಪ ವಜೀರರ್ಕಳ್ವೆರಸಪರಿಮಿತಹಸ್ತ್ಯಶ್ವ ಪದಾತಿಸಮೂಹಸಮೇತನಾಗಿ ತೆರಳ್ದೈತಂದು ರಣಕ್ಕಿದಿರ್ಚಿ ನಿಲಲು ಭಯಸೈನ್ಯಕ್ಕಂ ಕೈಗಲಸಿ ಮಹಾದ್ಭುತಮಾದ ತುಮುಲಯುದ್ಧಂ ಪಣ್ಣಲಾಪ್ರಸ್ತಾವದೊಳ್ ॥ ೨೫

ದಂತದ ಸೂನಗೆ ಸೊಂಡಿಲೊ
ಳಾಂತಸಿ ಮೃಗಮರ್ದ ಜಿಲೆಯ[1] ಬಕತರ ಚೂಡಾ |
ಲಂ ತೊಳಪಾನೆಯನೇರ್ದಿದಿ
ರಾಂತಂ ಧುರಕಾಬರೀದಯವನಾಧೀಶಂ || ೨೬

ಮತ್ತಮಾವೇಳೆಯೊಳ್ || ೨೭

ಭರಿಕ್ಕೈಗಳೊಳಾಂತಸಿ ಬಕ
ತರ ದಂತಂಗಳೊಳಮರ್ದ ಸೂನಗೆಯೆಸೆಯಲ್ |
ಕರಪದಮೊಗೆದೆಡೆಯೂಡುವ
ಗಿರಿಕುಲಮೆನೆ ಕವಿದುವಾನೆವಿಂಡೆಣ್ದೆಸೆಯೊಳ್ || ೨೮

ಕುಂತಚಲನ್ಮಹಾಸಿವರಕಾರ್ಮುಕಸಾಯಕವೃಂದಮಂ ದಲಂ
ದಾಂತು ಕರಂಗಳೊಳ್ ಲಸದಯೋಮಯಚಾರುತನುತ್ರಮೊಪ್ಪೆ ಕ |
ಲ್ಪಾಂತಸಮುತ್ಥಮೇಘಚಯದಂತಿರೆ ರಾವುತರಾಜಿಯಶ್ವಜಾ
ಲಂ ತವೆ ಸುತ್ತಲುಂ ಕವಿದುವಾಲಯವಾರ್ಧಿಯ ವೀಚಿಯಂದದಿಂ || ೨೯

ಪೊಸಮಸೆವೆತ್ತ ಸರಳ್ ಝಳ
ಪಿಸುವಸಿ ಗಲ್ಲಿಸುವ ಕುಂತಮುಗಿದೊರೆಯಿಂ ಚೂ |
ರಿಸುವ ಕಠಾರಿಕುಲಂ ಕರ
ಮೆಸೆಯಲ್ಮುಸುಕಿದುದು ಪತ್ತಿಚಯಮೆಣ್ದೆಸೆಯೊಳ್ || ೩೦

ಆ ಸದಾಶಿವನರೇಂದ್ರನ
ಸಾಸವನೇನೆಂಬೆನಿಂತು ಮುಸುಕಿದ ರಿಪುಸೇ |
ನಾಸಮುದಯಮೆಂಬಟವೀ
ದೇಶವನುರೆ ಸವರತೊಡಗಿದಂ ಖತಿಯಿಂದಂ || ೩೧

ಕುರಿವಿಂಡಿನ ಮಧ್ಯದೆ ಪೊ
ಕ್ಕುರುಬುವ ಪೆರ್ಬುಲಿಯೊಲಾ ಸದಾಶಿವರಾಯಂ |

---

1 ಶಿಲೆಯ, ಕ. ಬ.

ಶರಕುಂತಖಡ್ಗಹತಿಯಿಂ
ತರುಬಿದ ತೌರುಷ್ಕಸೈನ್ಯಮಂ ಬರಿಕೈದಂ ॥ ೩೨

ಇಂತೊಳಪೊಕ್ಕು ಕೈಗೆಯ್ವ ಸದಾಶಿವರಾಯನವಟನಾಂಪೊಡಶಕ್ಯಮಾಗಿ ನಿತ್ತರಿಸಲಮ್ಮದೆ ॥ ೩೩

* ನೊಂದು ನುಗ್ಗಾಗಿ ಭಂಗಕೆ
ಬಂದುರೆ ಕೈದುಗಳನಿಕ್ಕಿ ಕೈಮುಗಿದು ಪೊಗ ।
* ರ್ಗ್ಗಂದಿ ಪಾಡಳಿದು ಮಡಮುರಿ
ದಂದಿರದೆಣ್ದೆಸೆಗೆ ಪರಿದುದರಿಬಲವದಟರ್ ॥ ೩೪

ಮುಂಪಡೆಪಾತ್ರಸೈನ್ಯವನಭೀಕ್ಷಿಸಿ ಪಲ್ಮೊರೆದಾಬರೀದನ
ತ್ಯುರತರಕೋಪದಿಂದುಳಿದಿಭಾಶ್ವಪದಾತಿಸಮೇತನಾಗಿ ಸಂ ।
ಗರದೊಳದಿರ್ಚಿ ಸಿಂದುರೆ ಸದಾಶಿವರಾಯನ ಸಂಮುಖಕ್ಕೆ ಭಾ
ಸುರಮದದಂತಿಯಂ ಭರದೆ ನೂಂಕುತೆ ತುಳ್ಕಿದನಂಬಿನಬ್ಧಿಯಂ ॥ ೩೫

ಮದದಂತಿಯೆಂಬ ಬೆಟ್ಟದ
ತುದಿಯೊಳಗಿರ್ದಾ ಬರೀದನೆನಿಸುವ ವಿಲಯಾಂ ।
ಬುದಮಂಬಿನ ಮಳೆಯಂ ಕರೆ
ದುದು ಧರೆಯೊಳ್ ಶೋಣಿತಾಂಬು ನೆರೆ ಪರಿವಿನೆಗಂ ॥ ೩೬

ಇಸುವೆಂಬಿನುರುಬೆಯಂ ಸೈ
ರಿಸುತಶ್ವವನ್ನೈದೆ ಮೀಂಟಿ ಕೂರಸಿಯಿಂ ಚೂ ।
ರಿಸುತೊಳಪೊಕ್ಕುರುಬುವ ಯವ
ನಸಮೂಹಾಧೀಶನುರುಬೆಗಂದಿದಿರಾಂತಂ ॥ ೩೭

ಇಂತಾ ಬರೀದಪಾತುಶಾಹಂಗಿದಿರ್ಚಿ ಸಿಂದಿರ್ವಕ್ಕಂಗಳೊಳುರುಬಿ ತರುಬಿ ಮುಸುಂಕಿ ಕೈಗೆಯ್ವದಟರ್ಕಳನಾತ್ಮಕರಾಸಿಕುಂತಯಮದಂಷ್ಟ್ರಾನಿಶಾತಸಾಯಕಮುಖವಿಘಾತಿಯಿಂ ಪಿಂದೆಗೆಸಿ ಬರೀದಪಾತುಶಾಹನಡರ್ದ ಮದೇಭದ ಸಮ್ಮುಖಕ್ಕಂ ತದೂರ್ಧ್ವಮುಖಕ್ಕಂ ತಾನೇರ್ದ

ಶ್ವವನಡಿಗಡಿಗೆ ಮೇಲ್ವಾಯ್ದು ತನ್ಮಹಾಗಜದಂಗೋಪಾಂಗಂಗಳೊಳ್ಪೊ
ಡರ್ಚಿದ ಮಿಳಿ ಪ್ರೊರಜೆ ಜೊತ್ತಗಂಗಳುಮಂ ನಿಲುನಿಲುಂಕಿ ಪೊಯ್ಪೊ
ಯ್ದು ಕತ್ತರಿಸಿ ರೆಂಚೆಯುಂ ಸಡಲಿಸಿ ಪಾಕರಮಂ ಪತನಂಗೈಸಿ ತತ್ಕುಂ
ಜರವನಾತ್ಮವಶಂಗೈವನಿತರೊಳ್, ಬರೀದಪಾತುಶಾಹಂ ಸಾಧನಚಮತ್ಕೃ
ತಿಯಿಂ ಸಮೀಪದೊಳಿರ್ಪ ಮಗುಳೊಂದಾನೆಯುಂ ಜಂಗೆವಾಯ್ದು ಹರಿ
ಹಂಚಾವ ಸೈನ್ಯವನೊಂದುಗೂಡಿಸಿ ಹುರಿಗಟ್ಟಿಸಿ ಮಗುಳ್ದು ಕೋಪಾ
ಟೋಪದಿಂ ಮೊರ್ಮೆಲೆತು ರಣರಂಗಕ್ಕಿದಿರ್ಚಿ ನಿಂದು ಕೈಗೆಯ್ಯುತ್ತು
ಮಿರಲಾ ಪ್ರಸ್ತಾವದೊಳ್ ॥ ೩೮

ಭಾಸುರೇಭವಾಜಿವಾಹಿನೀಸಮೇತನಾಗಿ ತಾಂ
ಸಾಸದಿಂದಿದಿರ್ಚಿದಾ ಬರೀದಪಾತುಶಾಹನಂ ।
ಗಾಸಿಮಾಡಿ ಗೆಲ್ದು ಯುದ್ಧರಂಗದೊಳ್ತುರುಷ್ಕಸೇ
ನಾಸಮುದ್ರಮಂ ಕಳಂಕಿದಂ ಸದಾಶಿವೋರ್ವಿಪಂ ॥ ೩೯

ಅದೆಂತೆಂದೊಡೆ ॥ ೪೦

ಕೆಲಬರನುಗ್ರಕುಂತಹತಿಯಿಂ ಕೆಲರಂ ನಿಜಖಡ್ಗಧಾರೆಯಿಂ
ಕೆಲಬರನೊಳ್ಕಠಾರಿಯುರುತೀವ್ರಮುಖಾಭಿವಿಘಾತಿಯಿಂ ಕರಂ ।
ಕೆಲಬರನಾಶಿಲೀಮುಖಸಮೂಹಮಹಾದ್ಭುತವೃಷ್ಟಿಪಾತದಿಂ
ಕೆಲಬರುಮಂ ನಿಜಾಶ್ವಖುರಘಾತಿಗಳಿಂ ಪುಡಿಗೈದನಾನೃಪಂ ॥ ೪೧

ಅರಿದಿರಿದು ಕೊರೆದು ತತ್ತರ
ದರಿದಿರದಸಿಯಿಂರೆದು ಪೊಯ್ದು ಸದೆಬಡಿದುರೆ ನಿ ।
ಟ್ಟೊರಸಿ ಸದಾಶಿವನೃಪನೀ
ಪರಿಯಿಂದೆ ಬರೀದಸೈನ್ಯಮಂ ಬರಿಕೈದಂ ॥ ೪೨

ಇಂತು ಕೈಗೆಯ್ವ ಸದಾಶಿವನಾಯಕನ ಘೋರಾಘೋರಿಗಿದಿರ್ಚಿ ನಿಲ
ಲಾಂಪೊಡಶಕ್ಯಮಾಗಿ ಪಟುತರಪರಾಕ್ರಮಶಾಲಿಗಳ್ಪಲಾಯನಂಬಡೆದು॥

ನುತಪುಂಡರೀಕಮಧ್ಯ
ಸ್ಥಿತರಾದಬೊರ್ಮ್ಮನಂತೆ ಹರಿಯಂತೆ ಸಮು ।

ನ್ನತಭುವನಾಶ್ರಯರಾದ
ಕ್ಷಿತಿಗಳನೆನೆ ನಾಗಕಟಕಭೂಷಿತರಾದರ್ ॥ ೪೪

ವನರುಹವೈರಿಯ ವರನಂ
ದನನೆಂಬಂತಿರೆ ಕುಜಾಗ್ರವರ್ತಿಗಳಾದರ್ ।
ಮಿನುಪುಪರಾಗಾಂತದ ಶಶಿ
ದಿನಪರವೊಲ್ಮುಕ್ತಮಂಡಲಾಗ್ರಗಳಾದರ್ ॥ ೪೫

ಖಂಡ ಕರುಳ್ಗಳು ತೊವಲ್ಕರ
ತುಂಡಿಗೆ ಮಿದುಳಡಗು ತೊರಳ್ ನೆಣ ವಸೆ ನೆತ್ತ್ರ ।
ಗೊಂಡ ಕಾಳಿಜೆಗಳಿಂ ಜವ
ನುಂಡೊಗಡಿಸಿದಿಳೆಯ ಪೋಲ್ತುದಾರಣದ ಕಳಂ ॥ ೪೬

ಪರಿಕಿಪೊಡಂದು ರಣಂ ಜವ
ಪುರಮೆನೆ ರಣಭೂಮಿ ನರಕಬಂಧಮಯಂ ಸಾ ।
ಗರಮೆನೆ ಕೀಲಾಲಮಯಂ
ವರಜಂಬೂದ್ವೀಪದಂತೆ ನವಖಂಡಮಯಂ ॥ ೪೭

ಪೊತ್ತಂತಕನಾಳ್ಗಳ್ಬೞ
ಸತ್ತುದು ವರಚಿತ್ರಗುಪ್ತರಿಂ ಗಣಿಸಲ್ಕಾ ।
ದತ್ತಸದಳಮೊರಣದೊ
ಳ್ಸತ್ತವದಿರನಿನಿಬರೆಂದು ಲೆಕ್ಕಿಪನಾವಂ ॥ ೪೮

ಇಂತು ಪಣ್ಣಿದ ಯುದ್ಧರಂಗದೊಳ್ ಬರೀದಪಾತುಶಾಹಸೈನ್ಯಮಂ ಮುರಿದು ತದೀಯ ಹಸ್ತ್ಯಶ್ವಸಮೂಹಂಗಳುಮನುದಗ್ರಪರಾಕ್ರಮಶಾಲಿಗಳಪ್ಪ ಕೆಲಬರ್ ವಜೀರರ್ಕಳುಮನವನ ಡಾಲು ಡಮೂಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ ಮತ್ತಂ ಮ್ಲೇಂಛಲಿಪಿಲಾಂಛನಲಾಂಛಿತಮಾದ ಕಾಂಚನಮುದ್ರಾಂಗುಲೀಯಕ ಕಚ್ಚಳಿ[1] ಸಹಿತಮಡದಾರ್ನೆವೆರಸಾ

[1] ಕಚ್ಚಕಳಿ, ( ಕ. ಖ. )

ಬರೀದಪಾತುಶಾಹನುಮಂ ಕೈಸೆರೆತಂದು ರಾಯರ್ಗೊಪ್ಪಿಸಲ್ ಕೃಷ್ಣರಾಯನಭಿವೀಕ್ಷಿಸಿ ಮಹಾಹರ್ಷಿತನಾಗಿ ರತ್ನಾಭ[1]ರಣತಾಂಬೂಲಗಳನಿತ್ತಾದರಿಸಿ ತತ್ಸದಾಶಿವನಾಯಕಂಗಮರಿದಳೆ ಮೇಘಡಂಬರ ದಿವಾಪ್ರದೀಪ ಮುಂತಾದ ಬಿರುದುಗಳನಿತ್ತು ಬರೀದಪಾತುಶಾಹನ ಮುದ್ರಾಂಗುಲೀಯಕವಂ ಸದಾಶಿವನಾಯಕನ ಕಿರುವೆರಲಿಂಗಿಕ್ಕಿ [2] ಸದಬೊರ್ಕ್ಕಸೀಸಂ ಬಿಟ್ಟು ತದಾರಭ್ಯಂ ಬರೀದಸಪ್ತಾಂಗಹರಣಸದಾಶಿವರಾಯನಾಯಕನೆಂಬ ಬಿಂಕದ ಬಿರುದಿನಭಿಧಾನವನಿತ್ತು ಪಿರಿದು ಮನ್ನಿಸಲ್ ಮನ್ನಣೆಯನಾಂತು ಸಂತಸಂದಳೆದು ತತ್ಸಮೀಪದೊಳತಿಪ್ರೀತಿಪಾತ್ರನೆನಿಸಿ ವರ್ತಿಸುತ್ತುಮಿರ್ದನಂತುಮಲ್ಲದೆಯುಂ ॥ ೪೯

ಆ ರಾಯರನೆಣಿಸದಹಂ
ಕಾರದೆ ವಿಜಯಾಪುರಾಧಿಸನ ಬಲದಿಂ ಕೈ ।
ದೋರಿದ ಶಾಹೆಯನೆಂಬ ವ
ಜೀರನನಂಕದೊಳ್ ಮುರಿದನಾನೃಪತಿಲಕಂ ॥ ೫೦

ಮತ್ತಮದಲ್ಲದೊಂದವಸರದೊಳ್ ॥ ೫೧

ಮಿಗೆ ಗರ್ವೋದ್ರೇಕದೆ ಸಂ
ಯುಗದೊಳ್ರಾಯರ್ಗಿದಿರ್ಚಿ ಕೈಗೆಯ್ದಮದಾ ।
ನಗರದ ನಿಜಾಮಶಾಹನ
ಮೊಗಮಿಕ್ಕದ ತೆರದೆ ಧುರದೆ ಮುರಿದೋಡಿಸಿದಂ ॥ ೫೨

ಇಂತವರ್ದ ರಣಾಂಕದೊಳಮದಾನಗರದ ನಿಜಾಮಶಾಹನ ಮದೋದ್ರೇಕಮಂ ಮುರಿದು ಪಲಾಯನಂಗೊಳಿಸಲ್ ಕೃಷ್ಣರಾಯಂ ಪ್ರಮುದಿತಮಾನಸನಾಗಿ ಸದಾಶಿವರಾಯನಾಯಕಂಗೇಕಾಂಗವೀರನೆಂಬ ಬಿಂಕದ ಬಿರುದಿನಭಿಧಾನವನಿತ್ತು ಮತ್ತಂ ಜೆಂಜಿಯ ಕೃಷ್ಣಪ್ಪನಾಯ

1 ಮನೋಹರದಿವ್ಯತರನವರತ್ನಾಭರಣಾಂಬರತಾಂಬೂಲಂ (ಕ)

2 ಸದಬೊರ್ಕ್ಕಸಿಂಗಂ ಬಿಟ್ಟು (ಕ)

ಕಂಗೆ ಬಲವಂತನೆಂಬ ಬಿರುದಿ[1]ನಭಿಧಾನವಿರಲ್ ಬಿಡಿಸಿ ತತ್ಸದಾಶಿವ ರಾಯನಾಯಕಂಗಂ ಬಲವಂತನೆಂಬ ಬಿರುದಿನಭಿಧಾನಮುಮನನರ್ಘ್ಯ ರತ್ನಾಭರಣದಿವ್ಯಾಂಬರಂಮೊದಲಾದುಡುಗೊರೆವೀಳ್ಯಂಗಳನಿತ್ತು ಮನ್ನಿಸಿ ಜಯೋತ್ಸವದೊಳ್ಸಕಲಸೈನ್ಯಂವೆರಸು ನಿಜಪುರಪ್ರವೇಶಂಗೈದು ರತ್ನಸಿಂಹಾಸನಾರೂಢನಾಗಿ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರಲ್ ತತ್ಸಮೀಪದೊಳ್ ಪರಮವಿಖ್ಯಾತಿವಡೆದು [2] ವರ್ತಿಸುತ್ತುಮಿರ್ದದೊಂದವಸರದೊಳ್ ॥ ೫೩

ಲೂಟಿವರಿದಾಂತ ರಿಪುಸೇ
ನಾಟವಿಯಂ ನಿಜಕರಾಸಿಯಿಂ ತರಿದು ಕರಂ ॥
ಮೀಂಟಾದ ಚಂದ್ರಗುತ್ತಿಯ
ಕೋಟೆಯನಾನೃಪತಿ ಲಗ್ಗೆಯೊಳ್ಸಾಧಿಸಿದಂ ॥ ೫೪

ಬಗೆಯದೆ ರಾಯರಟ್ಟಿದ ನಿರೂಪವನಪ್ಪುತಸೈನ್ಯಗೂಡಿ ಸಂ
ಯುಗದೊಳದಿರ್ಚಿ ನಿಂದೆಸೆವ ಗುತ್ತಿಯ ಸಾಳುವನಾಯಕೇಂದ್ರನಂ ।
ಜಗುಳಿಸಿ ಯುದ್ಧದೊಳ್ಪಿಡಿದು ರಾಯರಿಗೊಪ್ಪಿಸಿ ಮನ್ನೆಯರ್ಕಳೊ
ಳ್ಮಿಗಿಲೆನೆ ಸಾಸಮಂ ಮೆರದನೈದೆ ಸದಾಶಿವರಾಯನಾಯಕಂ ॥ ೫೫

ಮತ್ತಮದಲ್ಲದೊಂದವಸರದೊಳಾ ಸದಾಶಿವರಾಯನಾಯಕಂ ॥ ೫೬

ಧರೆಗಧಿಕನೆನಿಪ [2] ಬಂಕಾ
ಪುರದುರುಮಾದಣವೊಡೆಯರುಮಂ ಶಿಕ್ಷಿಸಿ ರಾ ।
ಯರಿನಷ್ಟಾದಶಕಂಪಣ
ವರೆದಾಗರದವನಿಯು ವರಮಂ ನೆರೆ ಪಡೆದಂ ॥ ೫೭

ಮತ್ತಮದಲ್ಲದಾ ಸದಾಶಿವರಾಯನಾಯಕಂ ರಾಯರನುಮತಿಯಿಂ ಬಂಕಾಪುರದ ಮಾದಣವೊಡೆಯರಮುಖದಿಂ ಮದಗದ ಕೆಲಸಮಂ ಸಂ

---

[1] ನಭಿಮಾನ (ಕ)

[2] ವರ್ತಿಸುತ್ತುಮಿರ್ದನಂತಮಲ್ಲದೊಂದವಸರದೊಳ್ (ಕ)

ಪೂರ್ಣಮನಾಗಿಸಿ ತನ್ಮಹಾತಟಾಕದೆಡೆಯೊಳ್ ಶೃಂಗಪುರದಿಂ ಸ್ವಾಮಿ
ಗಳಂತೆರಳ್ಚಿಸಿ ತಂದು ರಾಯರ್ಗಂ ತತ್ಸ್ವಾಮಿಗಳ್ಗಂ ಭೇಟಿಯಂಮಾಡಿಸಿ
ತದುಭಯಮುಖದಿಂದಧಿಕಸನ್ಮಾನಂಬೆತ್ತನಂತುಮಲ್ಲದೆಯುಂ ॥ ೫೮

* ಮತ್ತಮಾರಾಯರಿಂಗಂ
ತೆಕ್ಕಿಗನೆಂದೆನಿಸಿ ನಡೆಯುದುರೆ ಮಾರ್ಮಲೆತಾ ।
ಮತ್ತಿಯತಿಮ್ಮಾಪ್ಯೈಯ ದು
ರ್ವೃತ್ತನ ನಿಗ್ರಹಿಸಿ ರಾಯರಂ ಮೆಚ್ಚಿಸಿದಂ ॥ ೫೯

ಮತ್ತಮದಲ್ಲದೊಂದವಸರದೊಳಾ ಸದಾಶಿವರಾಯನಾಯಕಂ ಕೃಷ್ಣರಾಯರಿಂ ಬೆಸಂಬಡೆದು ಘಟ್ಟವನಿಳಿದು ಪರಶುರಾಮಕ್ಷೇತ್ರಮಂ ಸಾರ್ದಂ ॥ ೬೦

* ತುಳುವರಾಜರ್ಕಳೆಲ್ಲಂ
ಮಲೆತಿರೆ ನಿಗ್ರಹಿಸಿ ಮೆರೆವ ಕಾಸರಗೋಡೊಳ್ ।
ತೊಲಗದ ಕಂಬವನಾನೃಪ
ತಿಲಕಂ ತಾ ನಿಲಿಸಿ ಮೆರೆದನತಿಸಾಹಸಮಂ ॥ ೬೧

ಇಂತು ಮಲೆತಿರ್ದ ತುಳುವಮನ್ನೆಯರ ಮದಮಂ ಮುರಿದು ಸ್ವಾಧೀನಂಗೆಯ್ದು ಕರಮಂ ಕೊಂಡು ಹಣಮಣಿಹಮಂ ತೆತ್ತು ನಡೆವಂತು ಕಟ್ಟಳೆಯುಂ ರಚಿಸಿ ಮರಳ್ದು ತಂದು ರಾಯರಿಂದುಚಿತಮಾದುಡುಗೊರೆ ಮುಂತಾದ ಬಹುಮಾನಮಂ ಪಡೆದಾ ರಾಯರಿಂದಪ್ಪಣೆ[1] ವೆತ್ತು ಸ್ವೈನ್ಯಸಮೇತನಾಗತ್ಯಂತಸಂಭ್ರಮದಿಂ ತೆರಳ್ದು ತಂದಿಕ್ಕೇರಿಯ ಪುರವರಮಂ ಪೊಕ್ಕು ಭದ್ರಸಿಂಹಾಸನಾಸೀನನಾಗಿ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈದನಂತುಮಲ್ಲದೆಯುಂ ॥ ೬೨

ಉರುತರ ಕೆಳದಿಯ ರಾಮೇ
ಶ್ವರದೇವರ ನಂದಿಮಂಟಪವನಧಿಕಮನೋ ।

---

1 ಅಪ್ಪಣೆವೆತ್ತುತೆರಳ್ದುತಂದಿಕ್ಕೇರಿ, (ಬ.)

ಹರಮಾಗೆ ಶಿಲಾಮಯುಮಂ
ವಿರಚಿಸಿದಂ ಶಿಲ್ಪಶಾಸ್ತ್ರಕೌಶಲವಿಧಿಯಿಂ ‖ ೬೩

ರಾಮೇಶ್ವರಲಿಂಗದ ಸ
ದ್ಧಾಮದೊಳುಜ್ಜ್ವಲಿಪ ಪಾರ್ವತೀಮೂರ್ತಿಯನು ।
ದ್ದಾಮಾಗಮವಿಧಿಯಿಂ ತ
ದ್ಭೂಮಿಪತಿಲಕಂ ಪ್ರತಿಷ್ಠೆಯಂ ವಿರಚಿಸಿದಂ ‖ ೬೪

ಮಂಗಲಮಯರಾಮೇಶ್ವರ
ಲಿಂಗದ ನಿತ್ಯಾರ್ಚನಾರ್ಥಮತಿವಿಲಸದ್ಗ್ರಾ ।
ಮಂಗಳನಾನ್ಯಪತಿಕುಲೋ
ತ್ತುಂಗಂ ಸದ್ಭಕ್ತಿಯಿಂದೆ ಧಾರೆಯನೆರೆದಂ ‖ ೬೫

ರಾಜಿಪ ತದ್ರಾಮೇಶನ
ಪೂಜೆಯೊಳೊಂದಿನಿತು ಲೋಪಮಾಗದತೆರದಿಂ ।
ರಾಜನಿಭನಾ ಸದಾಶಿವ
ರಾಜಂ ನಡೆಯಿಸಿದನಾಗಮೋಕ್ತಕ್ರಮದಿಂ ‖ ೬೬

* ಮತ್ತಮಾ ಕೆಳದಿಯೊಳ್
ಲ್ಪೈತ್ತು ವಿರಾಜಿಸುತುಮಿಹ ಮಹತ್ತಿನ ಮಠಮಂ ।
*ಬಿತ್ತರಂಗೈಸಿ ಜಂಗಮ
ಕುತ್ತಮಶರದಾನಧರ್ಮಗಳನಾಗಿಸಿದಂ ‖ ೬೭

ಮತ್ತಮದಲ್ಲದಾ ಸದಾಶಿವರಾಯನಾಯಕನಾರಗದ ಕುಶಾವತೀನಗರದ ನದೀತೀರದೊಳ್ ಸದಾಶಿವಪುರಮೆಂಬಗ್ರಹಾರಮಂ ಕಟ್ಟಿಸಿ ಭೂಸುರರ್ಗಮತ್ಯುತ್ತಮನಿವೇಶನವೃತ್ತಿಕ್ಷೇತ್ರಂಗಳಂ ಕಲ್ಪಿಸಿ ಶಿವಾರ್ಪಿತವಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ಮತ್ತಂ ತದಗ್ರಹಾರದೊಳ್ ಸ್ವನಾಮಾಂಕಿತಮಾದ ಶಿವಲಿಂಗವನಾಗಮೋಕ್ತವಿಧಾನದಿಂ ಪ್ರತಿಷ್ಠೆಯಂ ವಿರಚಿಸಿ ದೇವಾಲಯಮಂ ನಿರ್ಮಾಣಂಗೈಸಿ ತಲ್ಲಿಂಗಪೂಜಾ

ರ್ಥಮತಿಮನೋಹರಮಾದ ಭೂಸ್ವಾಸ್ಥ್ಯಮುಂ ಧಾರೆಯನೆರೆದು ಶಾಶ್ವತಮಾದ ಸುಕೃತಧರ್ಮಕೀರ್ತಿಗಳುಮಂ ಸಂಪಾದಿಸಿದನಂತುಮಲ್ಲದೆಯುಂ ೬೮

ಭೀಮಂ ಸಂಗರದೊಳ್ಸು
ತ್ರಾಮಂ ಭೋಗದೊಳ್ ಶಾಂತಿಗುಣದೊಳ್ಸೋಮಂ ।
ರಾಮಂ ನನ್ನಿಯೊಳೆಂದೀ
ಭೂಮಿಜನಂ ಪೊಗಳೆ ಬಾಳ್ದನಾನರನಾಥಂ ॥ ೬೯

ಮತ್ತಮಲ್ಲದೆ, ೭೦

ಅಪರಿಮಿತಗುಣಗಣಾಲಯ
ನುಪಮಾತೀತಪ್ರತಾಪನೆಂದೆನಿಸಿ ಧರಾ ।
ಧಿಪರತ್ನನಾಸದಾಶಿವ
ನೃಪನತಿಸದ್ಧರ್ಮದಿಂದಮಿಳೆಯಂ ಪೊರೆದಂ ॥ ೭೧

ಈ ಸದಾಶಿವನಾಯಕರ್ ತಮಗೆ ರಾಜ್ಯಪಟ್ಟವಾದ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ಆರಭ್ಯ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೪ನೆಲೆಗೆ ವರ್ಷಂ ೩೧ ತಿಂಗಳ್ ೯ರ ಪರ್ಯಂತಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈದರ್ *

ದ್ವಿತೀಯಾಶ್ವಾಸಂ ಸಂಪೂರ್ಣಂ.



* ಈ ಸದಾಶಿವನಾಯಕರಿಗೆ ರಾಯರ ರಾಜಕಾರ್ಯದ ಮೇಲೆ ಜಗ್ಗುಪಾಳ್ಯವೆಂಬ ಸ್ಥಳದಲ್ಲು ದೇಹಾಯಾಸತೊಡಗಿ ಐಕ್ಯವಾದಲ್ಲಿ ಆ ಸ್ಥಳದಲ್ಲಿಯೇ ಸಮಾಧಿಯಾಯ್ತು. (ಕ).

# ತೃತೀಯಾಶ್ವಾಸಂ

ಆ ಸದಾಶಿವರಾಯ ನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೪೮೬ನೆಯ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ಯಲ್ಲಿ ಸದಾಶಿವನಾಯಕರ ಜ್ಯೇಷ್ಠಕುಮಾರರಾದ ದೊಡ್ಡಸಂಕಣ್ಣನಾಯಕರಿಗೆ ಇಕ್ಕೇರಿ ಯರಮನೆಯಲ್ಲಿ ರಾಜಪಟ್ಟಂ.

ಆ ಸದಾಶಿವನರೇಂದ್ರಾ
ಗ್ರೇಸರಾ [1] ನಂತರಮಾತನಾತ್ಮಜನೆನಿಪಾ ।
ಶ್ರೀ ಸಂಕಣನೃಪನರಿಗಜ
ಕೇಸರಿ ಸದ್ಧರ್ಮದಿಂದಮಿಳೆಯಂ ಪೊರೆದಂ ॥ ೧

ಜಂಬೂರ ವಿರುಪಣ್ಣವೊಡೆಯ
ರೆಂಬವನುಪಟಳವನೆಸಗೆ ಸಂಕಣನೃಪನಾ ।
ಜಂಬೂರಂ ಕೊಂಡುರೆ ಕ
ಣ್ಗೆಂಬಾದುದುಗುಣಿಯ ಕೋಂಟೆಯಂ ವಶಗೈದಂ ॥ ೨

ಇಂತು ಜಂಬೂರವಿರುಪಣ್ಣವೊಡೆಯರಂ ಮುರಿಯಲಾತಂ ವಿದ್ಯಾನಗರಿಗೈದಿ ರಾಯರ್ಗೆ ದೂರಲಾ ವರ್ತಮಾನವಂ ಕೇಳ್ದು ಕರೆಯಲಟ್ಟಲ್ಕಾಂಬರ್ನ್ನಗಂ ಸದ್ಧರ್ಮದಿಂ ರಾಜ್ಯವಿಚಾರಂ ಗೆಯ್ವುದೆಂದು ತನ್ನ

* ಗ್ರೇಸರನಂತರದೊಳಾತ, ಕ. ಖ. ಇದು ಕವಿಯ ಅಜಾಗರೂಕತೆಯಿಂದ ಆದ ತಪ್ಪೆಂದು ತೋರುತ್ತದೆ. ಮೇಲ್ಕಂಡಂತೆ ತಿದ್ದಿದರೂ ಗಣಸಿಯಮವನ್ನು ಮೀರಿದಂತಾಗುವುದು. ಗಣನಿಯಮಕ್ಕೆ ಲಕ್ಷ್ಯಕೊಡದೆ ಬರೆದಿರುವ ಅನೇಕ ಕಂದಗಳಿದ್ದರೂ ಎರಡನೆಯ ಪಾದದಲ್ಲಿ ಗಣಸಿಯಮವನ್ನು ಈತನು ಮೀರುವುದು ಕೇವಲ ಅಪರೂಪ; ಮೀರಿಯೇ ಇಲ್ಲವೆಂದು ಹೇಳಬಹುದು. ಆದರೂ ಇದ್ದುದರಲ್ಲಿ ಈ ಪಾಠವೇ ಉತ್ತಮವೆಂದು ಕಂಡುಬಂದುದರಿಂದ ಹೀಗೆ ತಿದ್ದಿದ್ದೇವೆ.

ನುಜ ಚಿಕ್ಕಸಂಕಣನಾಯಕಂಗೆ ನಿಯಾಮಿಸಿ ಕುಟುಂಬಸಹಿತಮಾ ದೊಡ್ಡಸಂಕಣನಾಯಕಂ ತೆರಳ್ದು ವಿದ್ಯಾನಗರಿಗೈದಿ ರಾಮರಾಯರಂ ಸಂಧಿಸಲ್ ಜಂಬೂರುಡುಗುಣಿಗಳನಾ ವಿರುಪಣ್ಣೊಡೆಯರಿಂಗಿತ್ತು ನೀಂ ಹುಜೂರೊಳಿರ್ಪುದೆಂದು ನಿಯಾಮಿಸಲಿಂತು ರಾಯರ ಸಮೀಪದೊಳ್ ತದ್ರಾಜಕಾರ್ಯಾನುಕೂಲಿಯಾಗಿ ಕತಿಪಯವತ್ಸರಂ ವರ್ತಿಸುತ್ತುಮಿರಲಾ ಪ್ರಸ್ತಾವದೊಳ್ ॥ ೩

ಮೆರೆವಾಸಂಕಣಭೂಮೀ
ಶ್ವರಗಿರ್ವರ್ ಪುತ್ರರೊಗೆದರವರೊಳ್ಪಿರಿಯಂ ।
ಧುರಧೀರರಾಮರಾಜಂ
ಕಿರಿಯಂ ವೆಂಕಟನೃಪಾಲನರಿಕುಲಕಾಲಂ ॥ ೪

ಇಂತೊಗೆದ ಸತ್ಪುತ್ರರಿರ್ವರ್ ದಿನದಿನಂಗಳೊಳಭಿವರ್ಧಿಸಿ ಮನೋಹರಾಕಾರಯುಕ್ತರಾಗಿ ಭೂಮಂಡಲಕ್ಕವತರಿಸಿದ ರವಿಚಂದ್ರರೆಂಬಿನಂ ವಿರಾಜಿಸುತ್ತುಂ ಬಾಲಲೀಲೆಯಂ ನಟಿಸುತ್ತುಮಿರಲಾ ಪುತ್ರರಿರ್ವರಂ ರಾಯರ್ಗೆ ಕಾಣಿಸಲವರ್ಗಳ ರೂಪರೇಖಾವಿಶೇಷಂಗಳಂ ನಿಟ್ಟಿಸಿ ಮುಂತೀಬಾಲಕರ್ ಮಹಾವರ್ಧಿಷ್ಣುಗಳಪ್ಪರೆಂದತ್ಯಂತ ಹರ್ಷಿತನಾಗಿ ಪಿಂತೆಮ್ಮ ಸಂಸ್ಥಾನದ ರಾಜಕಾರ್ಯಂಗಳೊಳತಿಸಾಹಸಂಗೈದು ಜಯಕಜ್ಜಂಗಳನಾಗಿಸಿದ ಸದಾಶಿವರಾಯನಾಯಕನ ಮೊಮ್ಮದಿರೆಂಬ ವಾತ್ಸಲ್ಯದಿಂದಾಕುಮಾರರ್ಗೆ ಪಾಲ್ಬಣ್ಣೆಯುಂಬಳಿಗೆಂದು ನಿಯಾಮಿಸಿ ॥ ೫

ಮಾಸೂರಂ ಮಲ್ಲೂರಂ
ಭಾಸುರಮೆನಿಸಿರ್ಪ ಪೊಳೆಯಪೊನ್ನೂರಂ ಭೂ ।
ವಾಸವ ಸಂಕಣಭೂಪಂ
ಗಾಸಮಯದೊಳಿತ್ತು ಪೆರ್ಮೆಯಿಂ ಮನ್ನಿಸಿದಂ ॥ ೬

* ಮತ್ತಮಾ ಬಾಲರಿಂಗ
ತ್ಯುತ್ತಮಹಯದಿವ್ಯಭೂಷಣಾಂಬರಗಳನೊ ।

ಲ್ದಿತ್ತ್ರಣುಗರನೀಕ್ಷಿಸಿಪ್ರೊರೆ
ಯುತ್ತಿಹುದೆಂದೊರೆದು ಕೂರ್ಮೆಯಿಂ ಬೀಳ್ಕೊಟ್ಟಂ ॥ ೭

ಇಂತು ರಾಜಯೋಗ್ಯಮಾದುಡುಗೊರೆಗಳನಿತ್ತು ಬೀಳ್ಕೊಡಲ್ ಸಂಕಣನಾಯಕಂ ಸಂತಸಂದಳೆದು ನಿಜಾವಾಸಮಂ ಸಾರ್ದು ಸುಖಮಿರುತ್ತುಮಿರಲೊಂದವಸರದೊಳ್ ರಾಮರಾಯರೋಲಗದೊಳ್ಕುಳ್ಳಿರ್ದೆಲ್ಲಾ ದುರ್ಗಂಗಳೆಮ್ಮಧೀನಮಾದುವವಿದ್ಧಕರ್ಣರಾಳುತ್ತಿರ್ಪ ಗೋವೆಯುಗಡವೊಂದೇನಾದೊಡಂಸಾಧ್ಯಮಾದುತಿಲ್ಲೆಂತಾದೊಡಮಾಗಡಮಂ ಸಾಧ್ಯಂಗೆಯ್ಯಲ್ವೇಳ್ಕೆಂದು ನಿಜನಿಯೋಗಿಜನರೊಳಾಳೋಚಿಸಿ ಪಿಂತೆಮ್ಮ ಸಂಸ್ಥಾನಕ್ಕೊದವಿದ ರಾಜಕಾರ್ಯಂಗಳೊಳತಿಸಾಹಸಂಗೆಯ್ದು ಜಯಕಜ್ಜಂಗಳನಾಗಿಸಿ ಪರಮಪ್ರಖ್ಯಾತಿಯಂಪಡೆದ ಸದಾಶಿವನಾಯಕನಾತ್ಮಜನಪ್ಪ ಸಂಕಣನಾಯಕನ್ಯತಂದಿರ್ಪನೀತನಮುಖದಿಂದಾದೊಡಮಾಕಾರ್ಯಮಂಸಾಧಿಸಲ್ವೇಳ್ಕೆಂದು ಮನಂದಂದು ನಿಜಾನುಜನಪ್ಪ ವಿಟ್ಠಲರಾಯನನಾರಣಮುಖದ ಕಾರ್ಯಕ್ಕೆಪ್ರಯಾಣಮನೊಡರ್ಚಿಸಿ ಸಂಕಣನಾಯಕನಂಕರೆಸಿ ಸ್ವಮನೋಭಿಪ್ರಾಯಮನುಸಿರ್ದು [1] ಬೇಗದಿಂ ನಡೆದೆಮ್ಮ ಕಜ್ಜಮಂ ಶೇಖರಂಗೆಯ್ವುದೆಂದೊರೆದು ಸೇನಾಸಮೂಹಮಂ ಕೈವರ್ತಿಸಿಬೀಳ್ಕೊಡಲೊಡನಾಪ್ರಸ್ತಾವದೊಳ್ ॥ ೮

ಶ್ರೀ ವಿಟ್ಠಲರಾಯರ ಕೂ
ಡಾವಿಭುವರನ್ವೈದಿ ಪಾಳಿವರಿದಂಬುಧಿಮ ।
ಧ್ಯಾವಷ್ಟಂಭನಮೆನಿಸಿದ
ಗೋವೆಯ ಗಡಮಂ ಸಮೀಕದೊಳ್ಸಾಧಿಸಿದಂ ॥

ಇಂತು ಗೋವೆಯ ಗಡಮಂ ಕೊಂಡು ಮರಳ್ದೊಡನಾ ಸಂಕಣನಾಯಕಂ ರಾಯರಂ ಕಾಣಲತ್ಯಂತಪ್ರಮುದಿತಮಾನಸರಾಗಿ ಮೂಳೇನಹಳ್ಳಿ ಹೋಬಳಿಯನುಚಿತಮಾಗಿತ್ತನರ್ಘ್ಯರತ್ನಾಭರಣಾಂಬರತಾಂಬೂಲಮಂ ಭುಜಕೀರ್ತಿ ಮುಂತಾದಬಿರುದುಗಳುಮಂ ತತ್ಪುತ್ರರ್ಗುಚಿತ

1 ಬೀಗಿಯಂ. (ಬ, ಕ)

ಮೂದುಡುಗೊರೆವೀಳ್ಯಂಗಳುಮನಿತ್ತಾದರಿಸಿ ಬೀಳ್ಕೊಡಲಪ್ಪಣೆಗೊಂಡ ತ್ಯಂತಹರ್ಷದಿಂ ಸ್ವಕುಟುಂಬಸಹಿತಂ ವಿದ್ಯಾನಗರಿಯಿಂ ತೆರಳ್ದು ತಂದಿಕ್ಕೇರಿಪುರವರಮಂ ಸಾರ್ದನಂತರಂ ಸ್ವಪುತ್ರರಪ್ಪ ರಾಮರಾಜನಾಯಕ ವೆಂಕಟಪ್ಪನಾಯಕರ್ಗಮತ್ಯಂತಮನೋಹರಾಕಾರಯುಕ್ತರಾದ ಕನ್ಯಾರತ್ನಂಗಳಂ ಪರಮಸಂಭ್ರಮದಿಂ ವಿವಾಹಮಂ ರಚಿಸಿ ಸುಖಸಂಕಥಾವಿನೋದದಿಂ ರಾಜ್ಯಮನಾಳುತ್ತಿರ್ದು ವಿದ್ವನ್ಮುಖದಿಂ ಸಮಸ್ತಶಾಸ್ತ್ರಂಗಳನಾರೈದು ತಿಳಿದು ಭುವನಕೋಶಾದಿ ವರಣಂಗಳಂ ಕೇಳ್ದು ದೇಶಾಟನಂಮಾಡಲ್ವೇಳ್ಕುಂದು ಮನಂದಂದು ನಿಜರಾಜ್ಯಭಾರಮಂ ತನ್ನನುಜನಪ ಚಿಕ್ಕಸಂಕಣನಾಯಕಂಗೆ ಕೈವರ್ತಿಸಿ ಸ್ವಪುತ್ರರನಾತನ ಸಮೀಪದೊಳಿರಿಸಿಸಂಗಡಂ ನಾಲ್ವರೊಳಗದವರ್ವೆರಸು ॥ ೧೦

* ಭಸಿತರುದ್ರಾಕ್ಷಮಾಲಾ
ಪ್ರಸರಂಗಳನಾಂತು ಕಾಪಿಕಾಷಾಯಾಂಬರ ।
ಮಸೆಯಲ್ ನಾಗರಮರಿಯಿಂ
ಬಸಿಯಂಕೊಂಡಧಿಕಹರುಷದಿಂ ಪೊರಮಟ್ಟಂ ೧೧

ಇಂತತೀತಜಂಗಮವೇಷಮಂ ತಾಳ್ದು ಪೊರಮಟ್ಟು ತೆಂಕಲಭಿಮುಖನಾಗಿ ನಡೆಯುತ್ತುಂ ಸ್ವದೇಶಮಂ ಕಳದು ಗ್ರಾಮೈಕರಾತ್ರಿನಿವಾಸಿಯಾಗಿರುತ್ತುಂ ತತ್ತದ್ದೇಶಂಗಳೊಳುಳ್ಳ ಪುಣ್ಯಕ್ಷೇತ್ರತೀರ್ಥಲಿಂಗದೇವತಾವಿಶೇಷಭೇದಾದಿಗಳುಮಂ ತತ್ತದ್ವಿಷಯಜನಂಗಳ ನಡೆ ನುಡಿ ಯುಡುಗೆ ತೊಡುಗೆ ಮುಂತಾದ ನಾನಾವಿಧ ವಿಚಿತ್ರತರ ರಚನಾಪ್ರೌಢಿಗಳನಾಲೋಕನಂಗೆಯ್ಯುತ್ತುಂ ತೆರಳ್ದು ॥ ೧೨

ಮೆರೆವ ಶಿವಗಂಗೆಯುಂ ತ
ನ್ನರಪತಿ ಸಿಟ್ಟಿಸುತೆ ಕಂಚಿಯುಂ ಪೊರ್ದಿ ಚಿದಂ ।
ಬರಮುಂ ಶ್ರೀವೃಷ್ಣ ವನುಳಿ
ದುರುತರಗೌರೀಮಯೂರಮಂ ನೆರೆ ಸಾರ್ದಂ ॥ ೧೩

ಅಮಲಿನ ಮಧ್ಯಾರ್ಜುನ ಸ
ತ್ಕಮಲಾಲಯ ಕುಂಭಕೋಣ ವರಪಂಚನದಂ ।

* ಕ್ರಮದೆ ಮನ್ನಾರಪುರುಷೋ
ತ್ತಮ ನವಪಾಷಾಣಮೆಂಬಿವಂ ಮಿಗೆಸಾರ್ದಂ ॥ ೧೪

ಬೇತಾಳಪಟ್ಟಣವನಾ
ಭೂತಲಪತಿ ಪೊರ್ದಿ ಸಾರ್ದು ರಾಮೇಶ್ವರಮಂ ।
ಸೇತು ಮಹೋದಧಿ ಸುಕೃತ
ದ್ಯೋತನ ರತ್ನಾಕರಂಗಳಂ ನಿಟ್ಟಿಸಿದಂ ॥ ೧೫

ಇಂತು ಸೇತುದರ್ಶನಂಗೈದನಂತರಮಾ ಸಂಕಣನಾಯಕಂ ರಾಮೇಶ್ವರದಿಂ ತೆರಳ್ದು ತ್ತರದಿಶಾಭಿಮುಖನಾಗೈದುತ್ತುಂ ॥ ೧೬

ಬಗೆಬಗೆಯ ದೇಶಕೋಶಾ
ದಿಗಳಂ ನಿಟ್ಟಿಸುತೆ ವಿಜಯಪುರಮಂ ಭಾಗಾ ।
ನಗರಮುಮಂ ಕಳೆದಮಡಾ
ನಗರವನುಳಿದೆಸೆವ ಡಿಳ್ಳಿಯಂ ನೆರೆ ಪೊಕ್ಕಂ ॥ ೧೭

ಪರಿಶೋಭಿಸುವಾ ಪೊಳಲ
ಸಿರಿಯಂ ನೆರೆನೋಡಿ ನೋಡಿ ಸಂತಸವಡುತುಂ ।
ಕರಮೆಸೆವಾ ಡಿಳ್ಳೀಶ್ವರ
ನುರಾಜದ್ವಾರನಿಕಟಮಂ ಮಿಗೆ ಸಾರ್ದಂ ॥ ೧೮

ಎಸೆವಾ ಪೆರ್ವಾಗಿಲ ಮುಂ
ದೆಸೆಯೊಳ್ನಿಬಿರುಮವೆರಸು [1] ಕಟ್ಟಿಪ ಕಡುಕೂ ।
ರಸಿಯಂ ತನ್ನೃಪವೆರಸೀ
ಕ್ಷಿಸಿ ಶಿರಮಂ ತೂಗಿ ತೂಗಿ ಸೈವೆರಗಾದಂ ॥ ೧೯

ಇಂತಾ ರಾಜದ್ವಾರದೊಳ್ಬಿರುಮುವೆರಸು ಕಟ್ಟಿರ್ದ ಕೂರಸಿಯಂ ಸಂಕಣನಾಯಕನಭಿವೀಕ್ಷಿಸಿ ಬೆರಗಾಗುತ್ತುಂ ದ್ವಾರಪಾಲಕರಂ ಕರೆದಿಂತು ರಾಜದ್ವಾರದೊಳ್ಬಿರುಮುವೆರಸು ಖಡ್ಗಮಂ ಕಟ್ಟಿರ್ಪ ಕಾರಣಮೇನೆಂದು ಬೆಸಗೊಳಲವರ್ಕಳಿಂತೆಂದರ್ ॥ ೨೦

*ಕ್ರಮದೆಮನ್ನಾರಪರಮೋ (ಕ, ಖ.) [1] ವೆರಸಿ. (ಕ. ಖ.)

ಅಂಕುಶಖಾನ ನೆಂಬತಿಪರಾಕ್ರಮಶಾಲಿ ವಜೀರವೆಯ್ದನಾ
ರುಂ ಕರವೊಂಟಿಗಳ್ತಿಯು ಸಮೀಕದೊಳೆನ್ನೊಳಿದಿರ್ಚಿ ನಿಲ್ವರಿ ।
ಲ್ಲಂಕದೊಳಾಂತು ನಿಲ್ವದಟನುಳ್ಳೊಡೆ ಬಾಳನಿದಂ ಕಳಲ್ಚಲೆಂ
ದಂಕಿತಗೈದು ಕಟ್ಟುಹನೆನಲ್ಕುಡಿವಂ ನಗುತಾ ನರಾಧಿಪಂ ॥ ೨೧

ಅಂತಪ್ಪಧಿಕಪರಾಕ್ರಮ
ವಂತನೆ ನುಡಿದಾ ವಜೀರನೆನಲಸುದೀಭೂ ।
ಕಾಂತನಿಳೆಯೊಳಗವನ ಬಿರು
ದಂ ತಡೆವದಟರ್ಕಳಿಲ್ಲವೆಂದವರುಸಿರ್ದರ್ ॥ ೨೨

ಭೂಕಾಂತಂ ದ್ವಾರದೆ ಬಿಗಿ
ದೀಕಳ್ತಿಯನೀಳ್ದು ತದ್ವಜೀರನ ದರ್ಪೋ ।
ದ್ರೇಕವನಂಕದೆ ಮೆಗ್ಗಿಪ
ಭೀಕರಭಟರಿಲ್ಲವೆಂದು ಚಿಂತಿಸುತಿರ್ದಂ ॥ ೨೩

ಇತೆಂದುಸಿರ್ದ ಪಡಿವಳರುಕ್ತಿಯನಾ ಸಂಕಣನಾಯಕಂ ಕೇಳ್ದವನತ್ಯಂತಪರಾಕ್ರಮಶಾಲಿಯಾದೊಡೆನ್ನೊಳ್ ಕಾಳಗಕ್ಕಿದಿರ್ಚಿ ನಿಲಲೆಂದುಸಿರ್ದೊಡಸಿಪ್ರೀಳಿಗದವರ್ಕಳಿಂದಾಕಳ್ತಿಯುಂ ಕಳಲ್ಚಿಸಿ ತೆಗೆಸಲನಿತರೊಳೀವೃತ್ತಾಂತಮಂ ಪಡಿಯರರ ಮುಖದಿಂ ಪಾತುಶಾಹಂ ಕೇಳ್ದು ಬೆರಗುವೆತ್ತು ಸಂಕಣನಾಯಕನಂ ಸಮೀಪಕ್ಕೆ ಬರಿಸಿ ನೀನಾನಿರ್ದ ದೇಶಮಾವುದೆತ್ತಣಿಂದೆಳ್ತಂದೆ ಯೆಂದು ಬೆಸಗೊಳಲತಿಥಿಗಳಾಗಿ ಗ್ರಾಮೈಕರಾತ್ರಿಸಂಚಾರಶೀಲರಾಗಿರ್ಪೆಮಗೆಲ್ಲದೇಶಂಗಳಮ್ಮ ದೇಶಂಗಳಾಗಿರ್ಪುವೆನಲಂತಾದೊಡೊಂಟಿಗಳ್ತಿಯು ಕಾಳಗದೊಳವಂಗಿದಿರ್ಚಿ ನಿಲಲಾಪೆಯಾ ಯೆಂದು ಬೆಸಗೊಳಲ್, ಬಹೂಕ್ತಿಗಳಿಂದೇನಾ ವಜೀರನಂ ಬರಿಸಲ್ ಯುದ್ಧರಂಗದೊಳ್ಕ್ಕಣಲಹುದೆನಲೀಮಾತಂ ಪಾತುಶಾಹಂ ಕೇಳ್ದಾ ಸಂಕಣನಾಯಕನ ಮುಖಮಂಡಲತೇಜೋವಾಕ್ಪಟುತ್ವಂಗಳಂ ಬಲ್ಪುಮನೆರ್ದೆಗೊಂಡಿವಂ ಸಾಧಾರಣಪುರುಷನಲ್ತೆನ್ನ ರಾಜದ್ವಾರದೊಳ್ಕಟ್ಟಿದ ಬಿರುದಿನ ಜಂಜಡವನೀತನ ಮುಖದಿಂದಾದೊಡಂ ಕಳದಪೆನೆಂದು ನಿಶ್ಚಯಂಗೈದು ಸ

ಮಸ್ತಮಂತ್ರಿ ಮನ್ನೆಯ ಮಂಡಲಿಕ ನಿಯೋಗಿ ಸಾಮಾಜಿಕ[1] ವಜೀರ ಮುಂತಾದವರುಮಂ ಮತ್ತಂ ನಾನಾಯುಧಯುದ್ಧಕೌಶಲವಿಶಾರದರಪ್ಪ ಪಟುಭಟರ್ಕಳುಮಂ ಬಿರುದಿನ ಮಾಸಾಳ್ಗಳುಮಂ ಮತ್ತಂ ತನ್ನ ಪೊೞಲೊಳಿರ್ಪ ಸಕಲಕಲಾಪ್ರವೀಣರುಮನಾಬಾಲವೃದ್ಧಮುಂತಾದ ನೋಟಕರ್ಕಳುಮಂ ಶೀಘ್ರದೊಳ್ಬೈತರ್ಪುದೆಂದು ನಿಯಾಮಿಸಿ ಬೞಿಕ್ಕೆ ವೃತ್ತಾಂತಮಂ ತಿಳಿಪಿ ಕಾಳಗಕ್ಕಂ ಕುಶಖಾನನಂ ಕರೆತರ್ಪುದೆಂದೊಳಿ ಗದವರ್ಗೆ ಸಿದರ್ ಸಂಕಣನಾಯಕಂಗಂ ಶಾಲಿತಂಡುಲಶರ್ಕರಾಢಕಚಣಕಗೋಧೂಮ ಗುಡ ಘೃತಕುಂಭ ರಂಭಾಫಲ ತಾಂಬೂಲಾದ್ಯಶೇಷಸೋಪಸ್ಕರಯುಕ್ತಮಾದುಡೆಯುಂ ಕೊಡಿಸಲವನೆಮಗೇಕೆಂದೆನುತೀನುಮಂ ಕೈಕೊಳದೈದಿ ಮಜ್ಜನತಿಲಾರ್ಚನಭೋಜನಾದಿಗಳಂ ನಿಮಿರ್ಚಿಬರ್ಪನಿತರೊಳ್, ಪಾತುಶಾಹಂ ತಾನೊಳಪೊಕ್ಕು ಭೋಜನಂಗೈದು ಹಜಾರಕ್ಕೈದಿ ಸಭೆಯುಂ ನೆರಹಿಸಿ ಸದರೊಳ್ ಕುಳ್ಳಿರ್ಪನಿತರೊಳಂ ಕುಶಖಾನನೀವೃತ್ತಾಂತಮಂ ಕೇಳ್ದು ಭೋಜನಾದಿಗಳಂ ರಚಿಸಿ ವಸ್ತ್ರಾಭರಣಾಲಂಕೃತನಾಗಿ ಯುದ್ಧಾಸಿಯಂ ಕೊಂಡು ಭೋಂಕನೆಳ್ತಂದು ಪಾತುಶಾಹನಂ ಕಂಡಾಂ ರಾಜದ್ವಾರದೊಳ್ಕಟ್ಟಿರ್ದ ಬಿರುದಿನ ಕೂರಸಿಯಂ ಬಿಚ್ಚಿ ತೆಗೆದವನಾವನೆಂದತ್ಯಂತ ಕೋಪದಿಂ ಗಜರಿ ಗರ್ಜಿಸಲಾಗಳಾ ಪಾತುಶಾಹಂ ಸಂಕಣನಾಯಕನಂ ಸಮೀಪಕ್ಕೆ ಬರಿಸಿ ತೋರಿ ನಿನ್ನ ಕೂರಸಿಯಂ ಕೊಡಿಸಿದಪೆನಿನ್ನಾದೊಡಂ ಗರ್ವೋದ್ರೇಕಮಂ ಮಾಣ್ದು ಮನೆಗೈದುವುದೆಂದೊಡವಡಿಸಲಾಮಾತಂ ಬಗೆಗೊಳದೆ ಯುದ್ಧಮುಖದೊಳೇನಾ[2] ದೊಡದಂ ಕಾಣ್ಬೆನೆನಲಾಗಳಾ ಪಾತುಶಾಹಂ ಸಭಾಸಮ್ಮತಿಯಿಂದಿರ್ವರ್ಗಂ ಯುದ್ಧವನೊಡರ್ಚುವುದೆಂದು ತಾಂಬೂಲವನಿತ್ತಪ್ಪಣೆಗೊಡಲೊಡನವರಿರ್ವರಳವಿಯೊಳಿದಿರಾಂತು ನಿಲಲಾಕಾಲದೊಳ್ಸಂಕಣನಾಯಕನ ಕರಕಮಲದೊಳ್ಖಡ್ಗಮಿಲ್ಲದಿರ್ಪುದಂ ಪಾತುಶಾಹಂ ಕಂಡೊಂದು ಮೀಂಟಾದ ಖಡ್ಗಮಂ ತರಿಸಿ ಕೊಡಲಾ ಪ್ರಸ್ತಾವದೊಳ್ ॥ ೭೪

[1] ವಜೀರ ಉಮರಾವು ಪದಾತಿ ಮಲ್ಲಜನಮುಂತಾದ (ಕ)

[2] ಳೇನಾದುದಂ (ಕ.ಬ.)

ಬಿಸೆದಾ ಡಿಲ್ಲೀಶ್ವರನಿ
ತ್ತಸಿಯುಂ ಕೊಂಡಾ ಸದಾಶಿವೇಂದ್ರಸುತಂ ಜಗೂ ।
ರಿಸೆ ಭಿನ್ನಿಸಲದು ಮುಗುಳೊಂ
ದಸಿಯುಂ ಕುಡೆ ಝಳಪಿಸಲ್ಕದಿಕ್ಕಡಿದೋರಲ್ ॥ ೬೫

ಇಂತೀ ಪರಿಯಿಂ ಬಲ್ಪದ
ನಾಂತುರೆ ವಿರಾಂಟಾದ ಬಾಳ್ಗಳೀರಾರುತಿಯು ।
ಲ್ಪಂತರದನಭಿವೀಕ್ಷಿಸಿ ಶಿರ
ವುಂ ತಪೆ ತೂಗುತ್ತೆ ಬೆಕ್ಕಸಂಬೆರಗಾದಂ ॥ ೬೬

ಪಟ್ಟದ ಕೂರಸಿಯುಸಿದಂ
ಕೊಟ್ಟಪೆನೆಂದಾ ತುರುಷ್ಕಪತಿ ಕಯ್ಯಿಕ್ಕ ।
ಲ್ಕಿಟ್ಟಿಸಿ ನಸುನಗುತೀಯುಸಿ
ಬೆಟ್ಟಿತ್ತಳವಡದೆನುತ್ತದಂ ಪೋಣಿಸಿದಂ ॥ ೬೭

ಇಂತು ಪಾತುಶಾಪಂ ಪಟ್ಟದ ಕೂರಸಿಯುಸೀಯುಲೀ ಖಡ್ಗಮಂ ಭಿನ್ನಂಗೆಯ್ವುದುಚಿತಮಲ್ತೆಂದು ಮೂಣ್ದು ನಿಜಕಟಿಪ್ರದೇಶದೊಳ್ ಬದ್ಧಂಗೆಯ್ದು ಪಟ್ಟಯೊಳ್ಪುತ್ತಿರ್ದ ನಾಗರಮುರಿಯೆಂಬ ಕೂರಸಿಯುಂ ಕೊಂಡು ಪಿಡಿಗೊಳಲ್ಗೊಳಿಸಿ ಘಲ್ಲಿಸುತ್ತಂಕುಶಖಾನಂಗಿದಿರ್ಚಿ ನಿಲಲಾ ಪ್ರಸ್ತಾವದೊಳ್ ॥ ೬೮

ಸಂಕಣನೃಪಸನಭೀಕ್ಷಿಸು
ತಂಕುಶಖಾನಂ ಕೆರಳ್ದು ಹೊಣಿಸಿ ಬರಲಿಂ ।
ದಂ ಕುಡಿಮೀಸೆಯು ತಿದ್ದು
ತ್ತಂಕಕ್ಕಿದಿರಾಂತು ಖಡ್ಗಮಂ ಝಳಪಿಸಿದಂ ॥ ೬೯

ಇದಿರಾಂತಂಕುಶಖಾನನ
ಪದನಂ ನಿಟ್ಟಿಸಿ ಕರಾಸಿಯುಂ ಝಳಪಿಸುತುಂ ।
ತುದಿಮೀಸೆಯು ನೇವರಿಸು
ತ್ತಿದಿರ್ಚಿದಂ ಸಂಕಣೇಂದ್ರನವನಿಪಚಂದ್ರಂ ॥ ೭೦

ಓರೊರ್ವರನೀಕ್ಷಿಸಿ ಖತಿ
ಭೋರದೆ ಗಂಟಿಕ್ಕೆ ಪುಬ್ಬುಗಳ್ ಕಂಗಳ್ ಕೆಂ ।
ಪೇರೆ ಕುಡಿವಿಾಸೆ ನರ್ತಿಸೆ
ಚಾರಿಸುತುದ್ಯತ್ಕರಾಸಿಯುಂ ವಿಹರಿಸಿದರ್ ॥ ೩೧

ಮಸೆಗಂಡೆಕ್ಕಲಗಳೊ ಮಿಗೆ
ಪಸಿದಹಿಂಗಳೊ ಕಾಯ್ದ ಸಿಂಗವರಿಗಳೊ ಕರೆದೆ ।
ಬ್ಬಿಸಿದಾಪೆರ್ಬುಲಿಗಳೊ ಎನೆ
ಮಸಗಿ ಪ್ರೊಣರ್ಕೆಯೊಳ್ ಕಾದಿದರ್ಕಡುಹಿಂದಂ ॥ ೩೨

ಘುಡುಘುಡಿಸಿ ಸಿಡಿಲ ಳ ಬರ
ಸಿಡಿಲಿದಿರಾಂತುರೆ ಪಳಂಚುವಂತಿರೆ ಕೋಪಂ ।
ಕಿಡಿಯಿಡೆ ಘಲ್ಲಿಸುತಸಿಗಳ
ನಡಿಮಿಡುಕದೆ ನಿಲ್ತು ಕಾದಿದರ್ಭಟರಿರ್ವರ್ ॥ ೩೩

ಖಣಿಖಟಿಲೆಂದಸಿಯುಸಿಯುಣಾ
ದಣದೊರಸೊರಸಿಂದವೊಗೆಯೆ ಕೇಸುರಿ ಭುಗಿಲೆಂ ।
ದಣಿಯುರವೂಪ್ಪುವ ನಾನಾ
ಭಣಿತೆ ಬೆಡಂಗಾಗೆ ಕಾದಿದರ್ ಖತಿಯಿಂದಂ ॥ ೩೪

ಪೊಗರುಗುವಸಿರ್ಝಳಪದಿನುರಿ
ಝುಗಝುಗಿಸುತ್ತುಣ್ಮೆ ವಿಸ್ಫುಲಿಂಗಪ್ರಚಯಂ ।
ಬಗೆಬಗೆಯ ಹೊಗತೆಮಿಗತೆಯು
ಬಗೆಬಗೆ ಚೆಲ್ವಾಗಲೊದಗಿದಕೌಶಲದಿಂ ॥ ೩೫

ಹೊಂಚಿ ಹುರಿಕಟಿಸಿ ಹೊಕ್ಕು ಪ
ಳಂಚುವ ತದ್ಭಟರಬಗೆಯುನದನೇನೆಂಬೆಂ ।
ಚಂಚಲಿಪ ಕಾರ್ಮುಗಿಲ ಕುಡಿ
ಮಿಂಚೆನೆ ತೊಳತೊಳಗಿ ಬೆಳಗಿದುವು ಕೂರಸಿಗಳ್ ॥ ೩೬

ಝುೞಪಂ ಚೂರಣವೊಂಕೆ ಯೊಡ್ಡಣೆ ತಿರುಂಪೇರ್ವಾರೆವೊಯ್ಲಡ್ಡವೊ
ಯ್ಲೞತಂ ಕಂಡಣೆ ಮೀಂಟು ಚಾಲನಮುದಗ್ರೋದ್ಧಾರಣಂ ಚಾರುವೊ
ಯ್ಲೞತಂ ಸಿಕ್ಕು ಸವರ್ಕೆ ಯೆಂಬ ಬಹುಬಿನ್ನಾಣಂಗಳಿಂ ಕೂರ್ತು ಕೈ
ಚೞಕಂ ಕೈಮಿಗೆ ಯುದ್ಧರಂಗದೊಳವರ್ ಕೈಗೆಯ್ದರೇಂ ವಣ್ಣಿಪೆಂ॥ ೩೭

ದಂಡೆ ಮುರುಹೊದವು ಪೈಸರ
ಮಂಡಲಸಮಚಾಲಿ ಲಾಗು ಲಂಘನಮದೊರ್ ।
ೞ್ಕ್ರಂಡಿಯಭಿಮುಖವೆನಿಪ ಸಮ
ದಂಡಿಯೊಡಂಬಡೆ ಪೞಂಚಿದರ್ ಖತಿಯಿಂದಂ ॥ ೩೮

ಪಾಡರಿದೊಪ್ಪದಿಂ ಪೊಗುವ ಪಿಂಗುವ ಪಿಂದೆಗೆವಾಂಪ ನಿಲ್ವ ಕೈ
ಮಾಡುವ ಪೊಯ್ಲ್ಗಳಿಂ ಕೞಿವ ಕಾಯ್ವ ತೆರಳ್ವ ಸಡಿಲ್ವ ಪೆಜ್ಜೆಗೊಂ ।
ಡೀಡಿರಿದೊತ್ತುತೊತ್ತರಿಪ ಪೊಂಗುವ ಸಾರ್ವ ಮರಳ್ವ ಬಾಳ್ಗ ಬಾ
ೞ್ಗಡುವ ತೀಲ್ವ ಬಿನ್ನಣಗಳೊಪ್ಪೆ ಪೞಂಚಿದರಾಜಿರಂಗದೊಳ್ ॥ ೩೯

ತಟ್ಟುವ ತಡೆವಣೆವಸಿಯುಂ
ಮುಟ್ಟುವ ಸುಸೆಗೆಯ್ವ ತಾಳ್ವ ತವಕಿಪ ಬಲ್ಪಿಂ ।
ಮೆಟ್ಟುವ ಬಹುವಿಧಭಣಿತೆಯ
ಪಟ್ಟುಗ [1] ೞೋರಣಿಸೆ ಪೞಚಿದರ್ಬಿನ್ನಣದಿಂ ॥ ೪೦

ತಾಗುವ ತೆವರ್ವ ತೂಳ್ವ ಪಿ
ಭಾಗಿಪ ಕೆಲಸಾರ್ವ ಸಿಮಿರ್ವ ಕೂಡುವ ಸಡಿಲ್ವಿಂ ।
ಬಾಗುವ ಕೈಗೆಯ್ದಣಿಯಿಂ
ಬೀಗುವ ಬಗೆಯೊಪ್ಪೆ ಕಾದಿದರ್ಕೌಶಲದಿಂ ॥ ೪೧

ಸೂಡರಿದೀಪರಿಯೊಳ್ಕೈ
ಮಾಡುವ ಬಿನ್ನಣದ ಬಗೆಯನೀಕ್ಷಿಸಿ ನಲಿದಂ ।
ದಾಡಿಲ್ಲೀಶನ ಸಭೆ ಕೊಂ
ಡಾಡಲ್ಕೈಗೆಯ್ದರಾಜಿರಂಗದೊಳಿರ್ವರ್ ॥ ೪೨

1 ೞೋರಣಿಸೆಪೞಂಚಿದ (ಕ); ೞೋಂಸಪೞಂಚಿದ (ಬ)

ಇಂತೊಂದುಜಾವಂಬರಂ ಪೋರ್ದು ಬಗೆಹರಿಯದಿರ್ಪುದಂ ಕಂಡಂಕುಶಖಾನಂ ಸಂಕಣನಾಯಕನಂ ಕರೆದಾವಿರ್ವರುಮನ್ಯೋನ್ಯಾವಯವಂಗಳೊಳ್ಕತ್ತರ್ಸಿರ್ದತಾಣಂಗಳಂ ಮುಟ್ಟಿ ಕೈಗೆಯ್ದು ಮಸೆಗಾಣ್ಬಂತು ಯುದ್ಧಮಂ ರಚಿಸಲ್ವೇಳ್ಕಂದು ನುಡಿಯಲ್, ಸಂಕಣನಾಯಕನಂತಾಗಲೆನಲೊಡನಂಕುಶಖಾನನತ್ಯಂತಾಟೋಪದಿಂ ತಾಂ ಕೂರ್ತು ನುಡಿದವಯವಸ್ಥಾನಂಗಳೊಳ್ಮಸೆಗಾಣಿಸಿದಪೆನೆಂದು ಬಹುವಿಧಕೌಶಲಯುದ್ಧಚಮತ್ಕೃತಿಯಿಂ ಕೈಗೈಯಲ್, ಸಂಕಣನಾಯಕನಂಗದೊಳ್ಮಸೆದೋರದಂತಾಪೊಯ್ಲ್ಗಳಂ ಕಾಯ್ದುವನಕ್ಕೈಚಳಕವಂ ನಿಲಿಸಿ ಯುದ್ಧರಂಗದೊಳ್ತತ್ಪ್ರತಿಭಟನ ಕೈವಾಡಕ್ಕಂದವ್ಯಾಡಿಚಮತ್ಕೃತಿದೋರಿ ಬಳಿಕ್ಕವನಂಗಪ್ರದೇಶದೊಳ್ಕತ್ತರ್ಡೆಗಳಂ ಲಘುಸಂಧಾನದಿಂ ನಿಜಕರಾಸಿಯಗ್ರದಿಂ ಮುಟ್ಟಿ ಮುಟ್ಟಿ ತೋರಿ ನಾನಿನ್ನವರಂ ಕೈಗಾಯ್ದು ಯುದ್ಧಮಂ ರಚಿಸಿದೆನಿಂನೆಚ್ಚರಿನೊಳ್ಕಾದುವುದೆಂದವನಂ ಪಚಾರಿಸುತುಂ ಕೈಗೈಯುತುಮಿರಲಾ ಪ್ರಸ್ತಾವದೊಳ್ ॥ ೪೩

ಪೂತು ಮಝು ಖಡ್ಗಯುದ್ಧದ
ಧಾತುರೆ ಚಲ್ವಾದುದೆಂದು ಚೋಡಪನೃಪನಂ ।
ಜಾತಜನಂ ಪೊಗಳುತ್ತಿ
ಖಾತಿಯೊಳೊಳಪೊಕ್ಕು ಪೊಯ್ದನಂಕುಶಖಾನಂ ॥ ೪೪

ಲಾಗಿಸುತಾಪೊಯ್ಲಿಂಗೊಳ
ಗಾಗದೆ ಕೆಲಸಿಡಿದು ಕೂಡೆ ಸಂಕಣಭೂಪಂ ।
ಜಾಗು ಭಳಿಭಳಿರೆ ಮಗುಳನು
ವಾಗೆನುತೊಳಪೊಕ್ಕು ಪೊಯ್ದನಾ ಪ್ರತಿಭಟನಂ ॥ ೪೫

ಪ್ರೌಢನಹೆ ಖಡ್ಗಯುದ್ಧದ
ಮೋಡಿಯೊಳೆಂದೆನುತಲಸಿಯಿನಣೆದಾ ಪೊಯ್ಲಂ ।
ನೋಡಿನ್ನೆ ಸವೀ ಪೊಸ ಕೈ
ವಾಡವನೆನುತಾರ್ದು ಪೊಯ್ದನಾ ನೃಪವರನಂ ॥ ೪೬

ತಪ್ಪಲ್ಲಸಿಯುದ್ಧದೊಳಿಂ
ತಪ್ಪದಟನ ಕಂಡುದಿಲ್ಲವೆಂದಾ ಪೊಯ್ಲಿಂ ।
ತಪ್ಪಿಸಿ ಕೆಲಸಿಡಿದೀ ಪೊ
ಯ್ಲೊಪ್ಪವೆ ನೋಡೆಂದು ಪೊಯ್ದನಾ ಪ್ರತಿಭಟನಂ ॥ ೪

ಅಣಮಾ ಪೊಯ್ಲಿಂ ತಿರಡ್ಗದಿ
ನಣೆದಂಕುಶಖಾನನಾರ್ದು ತನ್ನೃಪಚೂಡಾ ।
ಮಣಿಯಂ ಪೊಗಳೇಪೊಯ್ಲಿನ
ಭಣಿತೆಯನೋಡೆಂದು ಪೊಯ್ದವಂ ಲಾಗಿಸಿದಂ ॥ ೪೮

ಬಡನಾ ಪೊಯ್ಲಿಂ ಖಡ್ಗದೆ
ತಡೆದು ಮಗುಳ್ದ್ವದಗುವನಿತರೊಳ್ಕರಸಿಯಿಂ ।
ನಡುವಂ ಖಂಡಿಸೆ ಕಣ್ಣೆವೆ
ಮಿಡುಕದೆ ಬಾಳ್ವೆಗಸು ಬರೆದ ಬೊಂಬೆಯೊಲೆಸೆದಂ ॥ ೪೯

ಮಿಗೆನಿಲ್ತಂಕುಶಖಾನನ
ಬಗೆಯಂ ನಿಟ್ಟಿಸಿ ತುರುಷ್ಕಪತಿ ಪೊಣರ್ದರೆ ಕಾ ।
ಳಗದೊಳ್ ಬಳಲ್ದನೆಂದೇ
ಬಗೆದೊಡನಾ ಸಂಕಣೇಂದ್ರನಂ ನಿಟ್ಟಿಸಿದಂ ॥ ೫೦

ಇಂತಾ ಪಾತುಶಾಹಂ ಸಂಕಣನಾಯಕನಂ ನಿಟ್ಟಿಸಿ ಯುದ್ಧಮಂ ಮಾಣ್ದು ವ್ಯಮರೆದೇಕೆ ನಿಂದಿರ್ದಪೆ ಯೆಂದು ಬೆಸಗೊಳಲಾನಿಂನಾರೊಳ್ಕಾದುವೆನೆಂದು ಪೇಳಲ್ ಪ್ರತಿಭಟಂ ನಿನ್ನ ನಿಟ್ಟದಿರೊಳ್ಣಿಮಣಿಯಂ ಸಾಧಿಸುತ್ತುಂ ನಿಂದಿರ್ಪಂ ನೀಂ ಕೈಗೆಯ್ಯದಿಂತು ಸುಮ್ಮನೇಕೆ ನಿಂದಿರ್ದಪೆ ಯುದ್ಧಮಂ ಬಗೆಪರಿಪುದೆಂದುಸಿರಲಾ ನ[illegible] ಸಂಕಣನಾಯಕಂ ಕೇಳ್ದು ನಸುನಗುತ್ತುಂ, ಪೆಣನ ಕೂಡೆತ್ತಣಕಾಳಗಮೆಂದುಸಿರಲಿದೆತ್ತಣಮಾತು! ಸಜೀವನಾಗಿ ಯುದ್ಧಕ್ಕೆ ನಿಂತಿರ್ದವನಂ ಪೆಣನೆಂದುಸಿರಲಹುದೇ? ಎನಲಂತಾದೊಡವಂ ಮೃತಿವೆತ್ತುದಹುದೋ ಅಲ್ಲವೊ ಯೆಂಬುದಂ ಚೆನ್ನಾಗಿ ನಿಟ್ಟಿಪುದೆಂದು ತಾಂ ಕೈಯೊಳ್ಪಿಡಿದಿರ್ದಸಿಯಗ್ರವನವ

ನೆರ್ದೆದಾಣಕ್ಕೆ ಮುಟ್ಟಿಸಲಾಗಳ್ಕಟಿಯಿಂದಂ ಮೋಗಣ ತುಂಡು ಖಂಡಿಸಿದ ದಿಂಡಿನಂತೆ ನೆಲಕ್ಕುರುಳಲಾಗಿ, ಬಳಿಕ್ಕದನಾಡಿಳ್ಳೀಶ್ವರನುಂ ತತ್ಸಭೆ ಸಹಿತಂ ಸರ್ವರುಂ ಕಂಡತ್ಯಂತಚೋದ್ಯಮಡಲೊಡನೆ ಡಿಳ್ಳೀಶ್ವರಂ ಸಂಕಣನಾಯಕನನೊಡಸಿರ್ದುಗಳಗದನವರಂ ಸಮೀಪಕ್ಕೆ ಬರಸಿಕೊಂಡೀತನಾರೆಂಬುದಂ ನಿಶ್ಚಯಮಾಗಿ ಪೇಳ್ವುದೆಂದೊಡವಡಿಸಲಾಗಳಪರೀತನ ವೃತ್ತಾಂತಮೆಲ್ಲಮಂ ಬಿತ್ತರಿಸಿ ಪೇಳಲ್, ಕೇಳ್ದು ಸದಾಶಿವರಾಯನಾಯಕನ ಕುಮಾರನೆಂಬುದಂ ತಿಳಿದು ಸಂತಸಂದಳೆದು ಸಂಕಣನಾಯಕನಂ ಕರೆದಾಲಿಂಗನಂಗೈದು ಸಮೀಪದೊಳ್ಕುಳ್ಳಿರಿಸಿಕೊಂಡಿಂತು ಕಪಟವೇಷಮಂ ತಾಳ್ದ್ಯತಂದೆನ್ನೊಳ್ನಿಜವನುಸಿರದಿಂತು ಮರೆಮಾಜಲಹುದೆಯೆಂದು ಸಭೆ ಕೇಳ್ವಂತು ಸದಾಶಿವರಾಯ ನಾಯಕನ ಭುಜಬಲಪ್ರತಾಪಮಂ ವಿವರಿಸಿ ತತ್ಪುತ್ರನಾದ ಬಳಿಕಂ ನಿನ್ನ ಪರಾಕ್ರಮಾತಿಶಯಮಂ ಪೇಳ್ವುದೇನೆಂದತ್ಯಂತ ಸಂತೋಷದಿಂ ಸಂಕಣನಾಯಕಂಗಂ [1] ಸದಬೊರ್ಕ್ಕಸೀಸಂ ಬಿಟ್ಟು ಹಸುರು ನಿಶಾನಿಯ ಬಿರುದುಮಂ ಮತ್ತಮನರ್ಘ್ಯರತ್ನಾಭರಣಾಂಬರತಾಂಬೂಲಂಗಳುಮನಿತ್ತು ಪಿರಿದು ಮನ್ನಿಸಲೀಶ್ವರಾನುಗ್ರಹದಿಂದೆನಗೀ ಬಗೆಯ ಬಿರುದು ಬಾವುಲಿ ರಾಜ್ಯ ರಾಷ್ಟ್ರ ದಿವ್ಯಭಾಗ್ಯಂಗಳೊಳಾವುದರಲ್ಲಿಯುಂ ಕೊರತೆಯಿಲ್ಲಮೆನ್ನ ಮನೋರಥಂ ಬೇರಿರ್ಪುದದಂ ಶಾಶ್ವತವಾಗಿ ನಡೆಸಿಕೊಡುವುದು ನಿಶ್ಚಯಮಪ್ಪೊಡುಸಿರ್ವೆ ನೆನಲ್ಕೇಳ್ದಿನ್ನಿಂದಪ್ಪ ಕಜ್ಜಮೇನುಂಟಾದೊಡದಂ ದೃಢವಾಗಿ ನಡೆಸಿಕೊಟ್ಟಪೆನೆನಲಂತಾದೊಡಾಂ ಮುಂತೆ ಕಾಶೀಕ್ಷೇತ್ರಕ್ಕೆಯ್ದಿಯಾತಾಣದೊಳ್ ಶಿವಜಂಗಮಧರ್ಮಾರ್ಥವಾಗಿ ಮಠಮಂ ಕಟ್ಟಿಸಿ ಯದಕ್ಕೆ ತಕ್ಕ ಭೂಸ್ವಾಸ್ಥ್ಯಮಂ ಬಿಡಿಸಿ ದಾನಧರ್ಮಂಗಳನಾಗಿಸಿ ವಿಶ್ವೇಶ್ವರನ ಪೂಜೆಯುಂ ರಚಿಸಿ ಮತ್ತಂ ನಿನ್ನ ರಾಷ್ಟ್ರದೊಳ್ಪ್ರಸಿದ್ಧಮಾದ ಸ್ಥಳಂಗಳೊಳ್ ಶಿವಜಂಗಮಧರ್ಮಕ್ಕೋಸುಗಂ ಮಠಮಾನ್ಯಂಗಳನಾಗಿಸಿ ಬಳಿಕೆನ್ನ ಸಂಸ್ಥಾನಕ್ಕೈದುವೆನೆಂದು ಸಂಕಲ್ಪಮಂ ರಚಿಸಿರ್ಪೆ ನೀಸಂಕಲ್ಪ ಸಿದ್ಧಿಯಂ ಪೂರ್ಣವನಾಗಿಸಲ್ವೇಳ್ಕುಂದುಸಿರಲಂತಾಗಲೆಂದು ಮನಂದಂ

---

[1] ಸದಬೊರ್ಕ್ಕಸಂಬಿಟ್ಟು(ಕ.)

ದಾಕ್ಷಣದೊಳ್ತತ್ತತ್ಸ್ಥಾನಪ್ರವಿಷ್ಟರಾದಧಿಕಾರಿಗಳ್ಗೆ ಪರಮಾನು [1] ನಿರೂಪ ಲೇಖನವಂ ಬರೆಸಿತ್ತು ತತ್ತದ್ದಾನಧರ್ಮಾರ್ಥವಾಗಿ [2] ಪನ್ನಿರ್ಛಾಸಿರ ಪೊಂಗಳನಿತ್ತು ತತ್ತತ್ಸ್ಥಾನಂಗಳ್ಗುಚಿತಮಾದ ಮೇಲೂಳಿಗದವರ್ಗಳುಮಂ ಕೂಡ್ಯೈದಿ ಕಜ್ಜವನೊಡರ್ಚಿಸಿ ಬರ್ಪುದೆಂದು ನಿಯಾಮಿಸಿ ಪರಮಸಂಪ್ರೀತಿಯಿಂ ಬೀಳ್ಕೊಡಲೊಡನಾಡಿಳ್ಳಿಯೊಳ್ "ಚಾವಲಿಕೆಮುಂಡ್ಯೈ" ಎಂಬ ಸ್ಥಳದೊಳ್ಮನೋಹರವಾದ ಮಠವಂ ಕಟ್ಟಿಸಿ ಶಿವಜಂಗಮಧರ್ಮಕ್ಕೆ ಶಿವಾರ್ಪಣಂಗೈದನಂತರದೊಳ್ ॥ ೫೧

ಒಡನೆಸೆವ ಡಿಲ್ಲಿಯಿಂ ಪೊರ
ಟಡಿಯಿಡುತಾಗರವನೈದಿ ರಚಿಯಿಸಿ ಮಠವಂ ।
* ಕಡೆಯು ಮಾಣಿಕ್ಯಪುರವಂ
ಬೆಡೆಯುಂ ಸಾರ್ದಮಲಗಂಗೆಯುಂ ನೆರೆ ಕಂಡಂ ॥ ೫೨

ಅಲ್ಲಿಂ ತೆರಳ್ದು ತನ್ನೃಪ
ಮಲ್ಲಂ ಮೆರೆವಾ ಪ್ರಯಾಗಮಂ ಸಾರ್ದು ಬಳಿ ।
ಕ್ಕಲ್ಲಿ ಸುಜಂಗಮಧರ್ಮ
ಕ್ಕುಲ್ಲಸದಿಂದೆಸೆವ ಮಠವನುರೆ ವಿರಚಿಸಿದಂ ॥ ೫೩

ಇಂತು ಗಂಗಾಯಮುನಾಸರಸ್ವತೀನದೀಸಂಯೋಗದಿಂ ತ್ರಿವೇಣಿಯೆಂಬ ಪೆಸರ್ವಡೆದು ಮಹಾವಟ [3] ಮೂಲೋತ್ಪತ್ತಿಸ್ಥಾನವಾದ ಮುಕ್ತಿಸ್ಥಾನವೆನಿಸಿ ಮೆರೆವ ಪ್ರಯಾಗಕ್ಷೇತ್ರದೊಳ್ ಜಂಗಮಮೂರ್ತಿಧರ್ಮಕ್ಕಂ ಮಂಗಳಮಯಮಪ್ಪ ಮಠಮಂ ನಿರ್ಮಾಣಂಗೈಸಿ ಶಿವಾರ್ಪಣಂಗೈದನಂತರಂ ॥ ೫೪

ಒಸೆದಾ ಪ್ರಯಾಗಮಂ ಸಿ
ಟ್ಟಸುತುಂ ಸಂತಸವಡುತ್ತುಮಲ್ಲಿಂ ತೆರಳ್ದಂ ।
ದಸಮಬಲಂ ಶ್ರೀ ಸಂಕಣ
ವಸುಧಾಧಿಪನೆಸೆವಕಾಶಿಯುಂ ನೆರೆ ಪೊಕ್ಕಂ ॥ ೫೫

---

1 ನಿರೂಪಲೇಖನಾಮಲೇಖನೋಪಲೇಖವಂ (ಕ.) 2 ಪಂನಿತ್ಸಾಸರ (ಕ. ಬ.) 3 ಮೂಲೋತ್ಪತ್ತಿಯಾದ ಮುಕ್ತಿಸ್ಥಾನ (ಕ. ಖ.)

ಚಾರುಪರಬ್ರಹ್ಮಸುತೀ
ಜೋರಾಶಿಯೆ ಪತ್ತನಸ್ವರೂಪವೆನಾಂತೀ ।
ಧಾರಿಣಿಯೊಳ್ಕಲೆಸಿತ್ತೆನೆ
ರಾರಾಜಿಸಿದತ್ತು ಕಣ್ಗೆ ಕಾಶೀಕ್ಷೇತ್ರಂ ॥ ೫೬

ಇಂತು ವಿರಾಜಿಸುತಿರ್ಪ ಕಾಶೀಕ್ಷೇತ್ರದ ಪತ್ತನದ್ಯೈಸಿರಿಯನಭಿವೀಕ್ಷಿಸುತ್ತುಂ ಮೆಲ್ಲಮೆಲ್ಲನಡಿಯಿಡುತ್ತೈದುತಿರಲಾವೇಳೆಯೊಳಾ ಪುರವರದ ವೀಧಿಯಿಕ್ಕೆಲದ ಭವನಂಗಳಸೌಧಂಗಳೊಳ್ಪೌರಿಜನರ್ತತ್ಕಾಶೀಕ್ಷೇತ್ರಮಾಹಾತ್ಮ್ಯಯನಭಿವರ್ಣಿಸುತ್ತಿರ್ದರದೆಂತೆನೆ ॥ ೫೭

* ಗರುಡತುಂಡಾಗ್ರದಿಂದಂ
ಧರೆಗುರುಳ್ದಸುಗಳದ ಪಾವಪಾಗಳ್ ಕಿವಿಯೊಳ್ ।
ಮೆರೆಯೆ ಫಣಿಕುಂಡಲಂಗಳ್
ಗರುಡಾಂಕಾರ್ಕಿತಸಪಾಬ್ಜಮಾದುವು ಚಿತ್ರಂ ॥ ೫೮

ಜವನುರವನೊದೆದವರಜನೊ
ಪ್ಪುವ ತಲೆಯುಂ ತರಿವರಿರಿವರಚ್ಯುತನೆದೆಯುಂ ।
ತವೆ ಕಾಶೀಕ್ಷೇತ್ರದಿ ಸಂ
ದವರುರುವೀರತ್ವದಿರವನಾರ್ಬಣ್ಣಿಸುವರ್ ॥ ೫೯

ಇಂತೀ ಪುರಾಣೇತಿಹಾಸಂಗಳನೋದುತ್ತನುವಾದಿಸುತ್ತನ್ವಯಾರ್ಥಂಗಳಂ ಬಿತ್ತರಿಪ ಸೂರಿಜನದುಕ್ತಿಗಳಂ ಕೇಳ್ದು ಪರಮೋತ್ಸವೆಂಬಡುತ್ತೆ ಮುಂತೈದುತ್ತುಂ ॥ ೬೦

ರಂಗತ್ಕಣಿಕಾಕಲಿತೋ
ತ್ತುಂಗತರಂಗಪ್ರಸಂಗೆಯುಂ ಸತತಸಮಾ ।
ಲಿಂಗಿತ ಶಿವಮೌಳಿಯನತಿ
ಮಂಗಲಮೆಯಿಯೆನಿಪ ಗಂಗೆಯುಂ ನೆರೆಕಂಡಂ ॥ ೬೧

ತೆರೆಯಿಂದಾವರ್ತದೆ ಚೆ
ಳ್ಪೊರೆಯಿಂ ಬೊಬ್ಬುಳಿಗಳೋಳಿಯಿಂ ಶೋಭಿಪ ತುಂ ।

ತುರುದುರುಗಲಿನೆಸೆದುದು ಬಾಂ
ದೊರೆ ವಿಚರಪ್ವಾಶ್ಚರಪ್ರಚಯದಿಂ ರಯದಿಂ ॥ ೬೨

ನಳನಳಿಸಿ ಬಳವ ನೀರ್ವೂ
ಗಳ ಸೌರಭಕೆಳಸಿ ಬಳಸಿ ಬಂಡುಗಳಂ ಕೊ ।
ಳ್ವಳಿಗಳ ಬಳಗಗಳಿಂ ಮಿಗೆ
ಪೊಳದುದು ಮಂಡಳಿಸಿ ಚಳಿಪ ನೀರ್ವಕ್ಕಿಗಳಿಂ ॥ ೬೩

ಮತ್ತಮದಲ್ಲದಾ ಮಂದಾಕಿನಿ ತಾನಧೋಗತಿಕಳಾಗಿಯುಮುತ್ತ್ವುಚ್ಚಸ್ಥಾನಮಾರ್ಗಸಹಾಯಿನಿಯುಂ,ಭಂಗವಿತಾನವಿಲುಲಿತೆಯಾಗಿಯುಮಭಂಗನಿತ್ಯಪದೈಕಸಹಕಾರಿಣಿಯುಂ, ಉತ್ಕೃಷ್ಟಪ್ರತಿಕೂಲೆಯಾಗಿಯುಮಾನತಜನಾನುಕೂಲೆಯುಮೆನಿಸಿ ವಿರಾಜಿಸುತುಮಿರ್ಪಳಂತುಮಲ್ಲದೆಯುಂ ॥ ೬೪

ಮಿಂದರೆ ಕಣ್ಣುರಿಯುಪ್ಪ ಕ
ಚಂ ದಲ್ಜಡೆಯುಪ್ಪ ಕಂಠಮುರುಕಾಳಿಮಮ ।
ಪ್ಪಂದದೊಡಲ್ಬೂದಿಯುಮ
ಪ್ಪೊಂದಿರವೆಹುದೇಂ ವಿಚಿತ್ರಮೋ ಜಾಹ್ನವಿಯೊಳ್ ॥ ೬೫

ಕಳೆದುರುದೋಷಮಂ ಸಲೆ ಪವಿತ್ರತನಾದಪೆನೆಂದುಮೀಯೆ ಪೇ
ರೆಲುದಲೆಮಾಲೆಯಂ ತಳೆದು ಪಂದೊವಲಂ ಪೊದೆದುಟ್ಟು ರುದ್ರಭೂ ।
ತಳದುರುಭಸ್ಮಮಂ ಧರಿಸಿ ವರ್ತಿಪ ಪಂದುಗಬರ್ಪುದೆಂದೊಡಾ
ಪೊಳೆಯ ಮಹಾಮಹತ್ವದಿರವಂ ಮಿಗೆ ಬಣ್ಣಿಪನಾವನುರ್ವಿಯೊಳ್ ॥ ೬೬

ಇಂತತ್ಯಂತಮಹಿಮಾಸ್ಪದೆಯುಪ್ಪ ಗಂಗೆಯಂ ನಿಟ್ಟಿಸಿ ನಲಿನಲಿದು ತತ್ಸಂಕಣೇಂದ್ರಂ ತದ್ವಾರಾಣಸಿಯೊಳ್ಮಜ್ಜನಂಗೈದನಂತರಂ ಮಣಿಕರ್ಣಿಕೆಯೊಳ್ಮಿಂದು ಬಹುವಿಧದಾನಧರ್ಮಂಗಳನಾಗಿಸಿ ವಿಶ್ವೇಶ್ವರನಡಿದಾವರೆಯಂ ಭಜಿಸಿ ಮತ್ತಂ ಕಾಶೀಕ್ಷೇತ್ರಮಹಿಮಾತಿಶಯಂಗಳಂ ಕೇಳ್ದು ಸಂತಸಂಬಡುತ್ತುಂ ತತ್ತಲ್ಲಿಂಗತೀರ್ಥಂಗಳನವಲೋಕಿಸುತ್ತುಂ ಪಂ

ಚಕ್ರೋಶಯಾತ್ರೆಯಂ ರಚಿಸಿ ಸಂತಸಂದಳೆಯುತಿಂತು ಕತಿಪಯ ದಿವಸಂ ವರ್ತಿಸುತ್ತುಮಿರ್ದು ಪಿಂತೆ ಬಹುಕಾಲದೊಳ್ ಶ್ರೀಶೈಲದೊಳ್ ನಂದೀಶ್ವರಾಂಶೀಭೂತನಾಗುದಿಸಿದ ವೀರಶೈವಶಿರೋಮಣಿಯಪ್ಪ ಶೀಲವಂತನಾಯಕನೆಂಬ ಕಾರಣಪುರುಷನೈತಂದು ಮೊರನನೆರಂಕೆಗಳಂ ಮಾಡಿಕೊಂಡು ಪಾರಿ ಪವಾಡಂಗಳಂ ಮೆರೆದು ಜಯಚಂದ್ರನರೇಂದ್ರನಂ ಮೆಚ್ಚಿಸಿ ದಶಾಶ್ವಮೇಧದ ಘಟ್ಟದ ಪಶ್ಚಿಮದಿಕ್ಕಿನೊಳಸೆವ ಹರಿಕೇಶವಾನಂದಕಾನನಮಂ ಪಡೆದಾಭೂಮಿಯೊಳ್ ಮಠಮಂ ಕಟ್ಟಿಸಿ ತನ್ಮಠದೊಳ್ಮಲ್ಲಿಕಾರ್ಜುನದೇವರೆಂಬ ಜಂಗಮಂಗೆ[1] ಪಟ್ಟಮಂ ಕಟ್ಟಿ ತನ್ನೊಡನೈದಿದ ಶಿಷ್ಯರ್ಕಳನಲ್ಲಿರಿಸಿ ತಾನಾಮಠಮಧ್ಯಸ್ತಂಭಾಗ್ರದೊಳ್ಯೋಗಾರೂಢನಾಗಿ ಕುಳ್ಳಿರ್ದಂತರ್ಧಾನವನೈದಲ್ ಬಳಿಕಿತ್ತಂ ಪಲವುವತ್ಸರಂಗಳ್ಪೋಗಲೊಡನೆ ಜಯಚಂದ್ರನರೇಂದ್ರನ ವಂಶಾಗತರೆಲ್ಲಂ ಧರ್ಮಸಂತಾನಮಂ ಪಡೆಯಲಾಗಿ ಬಳಿಕಿತ್ತಂ ಮ್ಲೇಂಛರ್ಕಳ್ಪೆರ್ಚಿ ತತ್ಸ್ಥಳವನಾಕ್ರಮಿಸಿರಲವರ್ಕಳಂ ವಾರೆದೆಗೆಸಿ ಸಂಕಣನಾಯಕಂ ತಾನಾಸ್ಥಾನಮಂ ಸಂಪಾದಿಸಿ ಚತುರ್ಗಡಿಗಳೊಳ್ಶಿಲಾಸ್ಥಾಪನಮಂ ರಚಿಸಿ ಜಂಗಮ[2]ಗಾಟ ಯೆಂದು ಪೆಸರಿಟ್ಟು ತನ್ಮಧ್ಯದೊಳತಿಮನೋಹರಮಾದ ಮಠಮಂ ನಿರ್ಮಾಣಂಗೈಸಿ ತದ್ಧರ್ಮಾರ್ಥಮಾಮಠದ ನಿಋತಿದಿಶಾಪ್ರಾಂತದೊಳ್ ಜಂಗಮಪುರಮೆಂಬ ಗ್ರಾಮಮಂ ಬಿಡಿಸಿ ಸ್ಥಿರಶಾಸನಮಂ ಬರೆಸಿ ಜಂಗಮಮೂರ್ತಿಗಳ್ಗೆ ಶಿವಾರ್ಪಣಂಗೈದು ಮತ್ತಮದಲ್ಲದೆ ಪಂಚಮಠಮಂ ಕಟ್ಟಿಸಿ ಶಿವಜಂಗಮಕ್ಕೆ ಶಿವಾರ್ಪಣಂಗೈದು ಪ್ರೌಢರುಗಳಪ್ಪ ಶಿಲ್ಪಿಗಳಂ ಬರಿಸಿ ತತ್ಕಾಶೀಕ್ಷೇತ್ರದೊಳೊಪ್ಪುವ ಕಪಿಲಾಧಾರಾತೀರ್ಥ ಮಾನಸಸರೋವರ ಗಂಧರ್ವಸಾಗರಮೆಂಬ ತೀರ್ಥಂಗಳಂ ಶಿಲಾಮಯವನಾಗಿಸಿ ಜೀರ್ಣೋದ್ಧಾರಮಂ ರಚಿಸಿ ಮತ್ತಮ್ಮೈಯಪ್ಪನೆಂಬ ಸೇನಬೋವನ ಮುಖದಿಂ ಕರ್ದಮೇಶ್ವರ ನರ್ಮದೇಶ್ವರ ಭೀಮಚಂಡಿಕೆ ವೃಷಭಧ್ವಜೇಶ್ವರದೇವಸ್ಥಾನಂಗಳಂ ಜೀರ್ಣೋದ್ಧಾರಮಂ ರಚಿಸಿ ಸ್ವಪುತ್ರವೆಂಕಟಪ್ಪನಾಯಕರ ಹೆಸರಲ್ಲಿ

---

1 ಜಂಗಮಮೂರ್ತಿಗೆ (ಕ)   ಜಂಗಮವಾಟ(ಬ)

ಶಿಲಾಶಾಸನಮಂ ಬರೆಸಿ ಶಾಶ್ವತಮಾದ ಧರ್ಮಕೀರ್ತಿಸುಕೃತಂಗಳನಾ
ರ್ಜಿಸಿ ಬಳಿಕ್ಕಾ ವಾರಾಣಸೀಕ್ಷೇತ್ರದೊಳಂದತಿಮನೋಹರಮಾದ ಸ್ಥೂಲ
ಲಿಂಗಮಂ ಸಂಪಾದಿಸಿಕೊಂಡನಂತರದೊಳ್,[1] ॥ ೬೭

ವರಕಾಶೀಕ್ಷೇತ್ರದಿನಾ
ಧರಣೀಶಂ ತೆರಳ್ದು ಕೂಡೆ ಗಯೆಯುಂ ಸಾರ್ದ ।
ಧರೆಯೊಳ್ವಿಜಂಗಮೆಕ
ತ್ರ್ಯುರುತರಮಠಮಾನ್ಯಧರ್ಮಮಂ ವಿರಚಿಸಿದಂ ॥ ೬೮

ಅವಿರಳವಿಕ್ರಮಜಿತರಿಪು
ನಿವಹಂ ಗಯೆಯಿಂ ತೆರಳ್ದುದಗ್ದಿಕ್ಕಿನೊಳೂ ।
ಪ್ಪುವ ನೀಲಕಂಠನೇಪಾ
ಳವನೊಲವಿಂ ಸಾರ್ದನಾನೃಪಾಲಕತಿಲಕಂ ॥ ೬೯

ಆ ತಾಣದೊಳುರೆ ಮಠಮಂ
ವೀತಭಯಂ ಸಂಕಣೋರ್ವಿಪಂ ವಿರಚಿಸಿ ಮ ।
* ತ್ತಾತನಲ್ಲಿಂ ತೆರಳ್ದುರು
ಕೇತಾರವನಘವಿದೂರಮಂ ಮಿಗೆ ಸಾರ್ದಂ ॥ ೭೦

ಕರಮೆಸೆವಾ ಕೇತಾರೇ
ಶ್ವರನಡಿದಾವರೆಯನ್ನೈದೆ ಪೂಜಿಸಿ ತದ್ಭೂ ।
ವರನಾಸ್ಥಳದೊಳ್ಜಂಗಮ
ವರಧರ್ಮಾರ್ಥಂ ಸುಮಠವನಿರದಾಗಿಸಿದಂ ॥ ೭೧

ಧುರಧೀರಸಂಕಣೋರ್ವೀ
ಶ್ವರನಾಕೇತಾರದಿಂ ತೆರಳ್ದಡನತಿಬಂ ।
* ಧುರಹರಿದ್ವಾರಮಂ ಶುಭ
ಕರಸುರಗಂಗಾವಿಹಾರಮಂ ಮಿಗೆ ಸಾರ್ದಂ ॥ ೭೨

---

1 ಸಂಪಾದಿಸಿವಶಮಾಡಿಕೊಂಡನಂತರ(ಕ)

* ಆ ಹರಿದ್ವಾರದಿಂ ತೆರ
ಳ್ದಾಹವೆಸಿಸ್ಸೀಮಸಂಕಣೋರ್ವಿಪನಹಿತ।
ವ್ಯೂಹವಮದಾಪಹನತ್ಯು
ತ್ಸಾಹದೆ ಕಾಶ್ಮೀರದೇಶವಂ ನೆರೆ ಸಾರ್ದಂ ॥ ೭೩

ಮತ್ತಮಾಸಂಕಣನಾಯಕಂ ಕಾಶ್ಮೀರಪುರವಾಸಿನಿಯಾದ ಶಾರದಾದೇವಿಯಂ ಸಂದರ್ಶನಂಗೈದಾಕಾಶ್ಮೀರದೇಶದಿಂ ತೆರಳ್ದು ಕುರುಕ್ಷೇತ್ರಮಂ ಸಾರ್ದಲ್ಲಿಂ ತೆರಳ್ದು ಪೈಠಣದೇಶಮಂ ಪೊಂದಿ ತತ್ಪೈಠಣದೇಶದೊಳ್ ದ್ವಾತ್ರಿಂಶತ್ಕರಕಮಲ ಶೋಭಿತಮಪ್ಪಘೋರಮೂರ್ತಿ[1]ಯಂ ಕಂಡು ಕಾಗದದೊಳ್ತದಾಕಾರಮಂ ಚಿತ್ರಿಸಿ ನಿಮ್ನೋನ್ನತಿಯಂ ಬರೆದು ತೆಗೆದುಕೊಂಡೊಡನೆ ಪಂಪಾಕ್ಷೇತ್ರಮಂ ಸಾರ್ದಲ್ಲಿಂ ತೆರಳ್ದು ಮೂಸೂರ ಸೀಮೆಯೊಳಸೆವಾಲವಳ್ಳಿಯೆಂಬ ಗ್ರಾಮಮಂ ಪೊರ್ದಿ ಮಲಂಗಿರಲಾಗ್ರಾಮತಟಾಕದೊಳಿರ್ಪ ವೀರಭದ್ರಮೂರ್ತಿಯಾಸಂಕಣನಾಯಕನ ಸ್ವಪ್ನದೊಳ್ ಜಂಗಮಮೂರ್ತಿಯಾಕಾರದಿಂದೈತಂದೆನ್ನಂ ನಿನ್ನ ರಾಷ್ಟ್ರಕ್ಕೆ ತೆಗೆದುಕೊಂಡು ಪೋಗಿ ಪ್ರತಿಷ್ಠೆಯಂ ರಚಿಸಿಪೂಜಿಸಲ್ನಿನಗೆ ಸಮಸ್ತ ಮನೋಭೀಷ್ಟಂಗಳನೀವೆನೆಂದುಸಿರ್ದಂತರ್ಧಾನವನೈದಲೆಳ್ಚತ್ತು ಬಳಿಕಾತಟಾಕಜಲಮಧ್ಯದೊಳಿರ್ಪ ವೀರಭದ್ರಮೂರ್ತಿಯಂ ಸ್ವಾಧೀನಂಗೈದು, ೭೪

ಬಳಿಕಾ ಸಂಕಣಭೂಪಂ
ಘಳಿಲನೆ ಮೂಸೂರ ದೇಶದಿಂ ಪೊರಮೊಡನು।
ಜ್ಜ್ವಲಿಪ ನಿಜರಾಷ್ಟ್ರಮಂ ಸಾ
ರ್ದೊಲವಿಂದೆಳ್ತಂದು ಕೆಳದಿಪುರಮಂ ಪೊಕ್ಕಂ ॥ ೭೫

ಇಂತಾ ಸಂಕಣನಾಯಕಂ ಕೆಳದಿಪುರವರಮಂ ಪೊಕ್ಕನಂತರಮಾ ಕೆಳದಿಯ ರಾಮೇಶ್ವರಲಿಂಗದ ದಕ್ಷಿಣಪಾರ್ಶ್ವದೊಳ್ ॥ ೭೬

---

1 ಮೂರ್ತಿಯಂ ಕಂಡಾಮೂರ್ತಿಯಂ ಕಾಗದದೊಳ್ತದಾಕಾರ (ಕ)
ಮೂರ್ತಿಯಂ ಕಾಗದದೊಳ್ತದಾಕಾರ (ಖ)

ಬಲ್ಲಿದದಾನವಸುರರೆರ್ದೆ
ದಲ್ಲಣನಹ ವೀರಭದ್ರಮೂರ್ತಿಯನೆಸೆವಂ ।
ತಲ್ಲಿ ನೆಲೆಗೊಳಿಸಿ ತತ್ಪದ
ಪಲ್ಲವಮಂ ಭಜಿಸಿ ಪಡೆದನತ್ಯುಚ್ಛ್ರಯಮಂ ॥ ೭೭

ಇಂತಾಗಮೋಕ್ತವಿಧಾನದಿಂ ವೀರಭದ್ರಮೂರ್ತಿಯಂ ಪ್ರತಿಷ್ಠೆಯಂ ರಚಿಸಿ ಶಿಲಾಮಯಮಾದ ಗರ್ಭಗೃಹವಂ ಕಟ್ಟಿಸಿ ತದ್ದೇವತಾಪೂಜಾರ್ಥಮತಿಮನೋಹರಮಪ್ಪ ಭೂರಿಭೂಸ್ವಾಸ್ಥ್ಯಮಂ ಬಿಡಿಸಿ ಬಳಿಕ್ಕಂ ಪೈರಣದೇಶದೊಳ್ ಕಾಗದದೊಳ್ ಚಿತ್ರಿಸಿ ಸಿಮೂಸಿಮಿಯಂ ಬರೆದು ತಂದಘೋರಮೂರ್ತಿಯಾಕಾರದಿಂ ಶಿಲಾಮಯಮಾದಘೋರಮೂರ್ತಿಯಂ ರಚನೆಗೈಸಿಯನಂತರದೊಳಾಗಮೋಕ್ತವಿಧಾನದಿಂ ॥ ೭೮

ಚಾರುಭುಜಬಲವಿದಾರಿತ
ಭೂರಿರಿಪುವ್ರಾತಸಂಕಣೋರ್ವೀಪನೆಸೆವಿ ।
ಕ್ಕೇರಿಪುರವರದೊಳೊಪ್ಪುವ
ಘೋರೇಶ್ವರನಂ ಪ್ರತಿಷ್ಠೆಯಂ ವಿರಚಿಸಿದಂ ॥ ೭೯

ಇಂತಘೋರೇಶ್ವರನಂ ಪ್ರತಿಷ್ಠೆಯಂ ರಚಿಸಿ ತತ್ಪೂಜಾರ್ಥಮಪರಿಮಿತಭೂಸ್ವಾಸ್ಥ್ಯಮಂ ಧಾರೆಯನೆರೆದು ಮಹಾದ್ಭುತಮಾದ ಶಿಲಾಮಯದೇವಸ್ಥಾನಮಂ ನಿರ್ಮಾಣಂಗೈಸಿ ತಟಾಕಾರಾಮಪುಷ್ಪವಾಟಿಗಳಂ ರಚನೆಗೈಸಿ ॥ ೮೦

ರಾಜಿಸುವಘೋರಮೂರ್ತಿಯ
ಪೂಜೆಯನತ್ಯಂತವಿಭವದಿಂ ವಿರಚಿಸುತುಂ ।
* ರಾಜಧರ್ಮದೊಳ್ ಸಂಕಣ
ರಾಜಂ ಸಂತಸದೆ ರಾಜ್ಯಮಂ ರಕ್ಷಿಸಿದಂ ॥ ೮೧

ಮತ್ತಮದಲ್ಲದಾ ಸಂಕಣನಾಯಕಂ, ॥ ೮೨

* ರಾಮರಾಯರ್ಗೆ ಮಲೆತತಿ
ತಾಮಸರ ತುರುಷ್ಕರದಟನುಡುಗಿಸಿ ಘನಸಂ।

ಗ್ರಾಮದೆ ಭೈರಾದೇವಿಯ
ಸೀಮೆಯನುರೆ ಧೂಳಿಪಟ್ಟಮಂ ವಿರಚಿಸಿದಂ ॥ ೮೩

ಮತ್ತಮದಲ್ಲದೆ ॥ ೮೪

ಮರಳ್ದು ಸಂಕಣಭೂಮೀ
ಶ್ವರನುರುವಿರುಪಣ್ಣವೊಡೆಯರುಮಂ ಸಂಗರದೊಳ್ ।
ಮುರಿದೊಪ್ಪುವ ಜಂಬೂರಂ
ಕರಮೆಸೆವುಡುಗುಣಿಯ ಕೋಂಟೆಯುಂ ವಶಗೈದಂ ॥ ೮೫

* ಬಡನೆ ಮಾದೇವಪುರದ
ಗ್ಗಡದ ಪರಿಸ್ತರಣಮಂ ವಶಂಗೈದು ಬಳಿ ।
ಕ್ಕಡವಲದೊಳುರುಬುವಹಿತರ
ಸೆಡವಂ ಮುರಿದಾಧರಿತ್ರಿಯುಂ ಸಾಧಿಸಿದಂ ॥ ೮೬

ಮತ್ತಮದಲ್ಲದಾ ಸಂಕಣನಾಯಕಂ ॥ ೮೭

ತರತರದೊಳ್ಕೈದಿ ಮಾರ್ಮಲೆ
ತುರುಬುವ ಯವನರ್ಕಳದಟನುಡುಗಿಸಿ ಘನಸಂ ।
ಗರದೊಳ್ಕರನಿಧಿಯ ಪರಿ
ಸ್ತರಣಮುಮಂ ವಡ್ಡಿ ಯವನಿಪುಮಂ ಸಾಧಿಸಿದಂ ॥ ೮೮

ಮತ್ತಮದಲ್ಲದತ್ಯಂತಗರ್ವೋದ್ರೇಕದಿಂ ಕುಹಕೋಪಾಯಂಗಳ ನೆಸಗುತಿರ್ಪ ಕಾರ್ಕಳದ ಭೈರಸವೊಡೆಯರುಮಂ ಪರಿಭವಿಸಿ ಕಪ್ಪಮಂ ಕೊಂಡು ತನ್ನಮದೋದ್ರೇಕಮಂ ಮುಗ್ಗಿಸಿದನಂತುಮಲ್ಲದೆಯುಂ ॥ ೮೯

ಚಾಳಕತನದಿಂ ದುಷ್ಟಜ
ನಾಳಿಯನೊಡವೆರಸು ರಾಜ್ಯಮಂ ಬಾಧಿಸುವಾ ।
ಸಾಳುವತಿಮ್ಮನ ಭುಜಬಲ
ದಾಳಿಗಮಂ ನಿಲಿಸಿ ರಾಷ್ಟ್ರಮಂ ರಕ್ಷಿಸಿದಂ ॥ ೮೯

ಇಂತಾ ಸಂಕಣನಾಯಕಂ ಸೋಳುವೆತಿಮ್ಮನಂ ನಿಗ್ರಹಿಸಿ ಸಂಗ್ರಾಮಮುಖದೊಳ್ ತತ್ಸೋಳುವಪಡೆಯನೆಲ್ಲಮಂ ಸಂಹರಿಸಿ ಸ್ವರಾಷ್ಟ್ರದೊಳ್ ನಿಷ್ಕಂಟಕತ್ವಮಂ ರಚಿಸಿ ಸಮಸ್ತ ರಾಜ್ಯರಾಷ್ಟ್ರಪ್ರಜೆಪರಿವಾರಮಂ ಪರಿಪಾಲಿಸುತ್ತುಂ ಪರಮಪ್ರಖ್ಯಾತಿಯುಂ ಪಡೆದು ವಿರಾಜಿಸುತ್ತುಮಿರ್ದನಂತುಮಲ್ಲದೆಯುಂ ॥ ೯೧

ಬಗೆಬಗೆಯ ದಾನಧರ್ಮಾ
ದಿಗಳಂ ಶಾಸ್ತ್ರೋಕ್ತಮಾರ್ಗದಿಂ ವಿರಚಿಸಿ ಮೂ ।
ಜಗಮೈದೆ ಪೊಗಳೆ ತನ್ನೃಪ
ನಗಣಿತಸದ್ಧರ್ಮದಿಂದಮಿಳೆಯಂ ಪೊರೆದಂ ॥ ೯೨

ಈ ದೊಡ್ಡಸಂಕಣನಾಯಕಂ ತನಗೆ ರಾಜಪಟ್ಟವಾದ ವಿಶ್ವಾವಸು ನಾಮ ಸಂವತ್ಸರದ ವೈಶಾಖ ಶುದ್ಧ ೫ ಯಾರಭ್ಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೪ ಯಲ್ಲಿಗೆ ವರುಷ ೧೬ ತಿಂಗಳು ೫ ಪರ್ಯಂತಂ ಸದ್ಧರ್ಮದಿಂ ರಾಜ್ಯಪರಿಪಾಲನಂಗೈದಂ ॥ *

ತೃತೀಯಾಶ್ವಾಸಂ ಸಂಪೂರ್ಣಂ.



* ಈ ದೊಡ್ಡಸಂಕಣನಾಯಕರಿಗೆ ಇಕ್ಕೇರಿಯಂರಮನೆಯು ಕೊಪ್ಪಲಸ್ಥಳದಲ್ಲೂ ಸಮಾಧಿಯಾಯಿತು. ಇವರಕಾಲದಲ್ಲಿ ಬದುಕುಗಳ ಮಾಡಿದವರು :– ಪ್ರಧಾನಿ ಆರಗದ ಕಳಸಪ್ಪಯ್ಯ, ಕರಣಿಕ ಅಣ್ಣಾಜಯ್ಯ, ಬಾಳಗಾರ ತಮ್ಮರಸಯ್ಯ, ರಾಯಸದ ಯಲ್ಲಪ್ಪಯ್ಯ, ನಾರಣಪ್ಪಯ್ಯ, ದಳವಾಯಿ ಕಲ್ಲಪ್ಪ. (ಕ)

# ಚತುರ್ಥಾಶ್ವಾಸಂ.



ಆ ದೊಡ್ಡಸಂಕಣನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷ ೧೪೮೧ನೆಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೫ ಯಲ್ಲಿ * ಚಿಕ್ಕಸಂಕಣನಾಯಕರಿಗೆ ಇಕ್ಕೇರಿಯಾರಮನೆಯಲ್ಲಿ ರಾಜಪಟ್ಟಂ.

ವರಸಂಕಣಾವನೀಶನ
ತರುವಾಯಿಯೊಳೆಸೆವ ತನ್ಮಹೀಶ್ವರನ ಸಹೋ ।
ದರನೆನಿಪ ಚಿಕ್ಕಸಂಕಣ
ಧರಣೀಶ್ವರನಾಳ್ದನೊಪ್ಪುವವನೀತಳಮಂ ॥ ೧

ಇಂತು ಚಿಕ್ಕಸಂಕಣನಾಯಕಂ ತನ್ನಗ್ರಜಹಿರಿಯಸಂಕಣನಾಯಕನ ಪುತ್ರರಾದ ರಾಮರಾಜನಾಯಕ ವೆಂಕಟಪ್ಪನಾಯಕರ್ವೆರಸು ಸುಖದಿಂ ರಾಜ್ಯಂಗೆಯ್ಯುತ್ತಿರಲ್ಕತಿಪಯವತ್ಸರಂಗಳ್ಪೋಗಲೊಡನೆ ॥೨

ಕರಮೆಸೆವ ಚಿಕ್ಕಸಂಕಣ
ಧರಣೀಶಂಗಂ ಕನಿಷ್ಠಪತ್ನಿಯ ಬಸಿರೊಳ್ ।
ಮೆರೆವ ಸುಲಗ್ನದೊಳತಿಬಂ
ಧುರತರಶುಭರೂಪನಪ್ಪ ಸುತನುದಯಿಸಿದಂ ॥ ೩

ಶುದ್ಧಯಿಸಿದುರುಸುವರ್ಣದ
ಮುದ್ದೆಯೆನಲ್ಕೆಸೆವ ತತ್ಕುಮಾರಂಗೊಲವಿಂ ।
ಸಿದ್ದಪನಾಯಕನೆನುತುಂ
ಮುದ್ದಿನ ಪೆಸರಿಟ್ಟು ಮೋದದಿಂ ಪೋಷಿಸಿದಂ ॥ ೪

---

* ಸದಾಶಿವನಾಯಕರ ಕನಿಷ್ಠಪುತ್ರನಾದ ದೊಡ್ಡಸಂಕಣನಾಯಕರ ಸಹೋದರರಾದ ಚಿಕ್ಕಸಂಕಣ....(ಕ)

ಇಂತು ವಿರಾಜಿಸುತಿರ್ಪ ಸತ್ಪುತ್ರಂ ಪ್ರತಿದಿನದೊಳಭಿವರ್ಧಿಸಿ ಬಾಲಲೀಲೆಯಂ ನಟಿಸುತ್ತಿರಲ್ನಿಟ್ಟಿಸಿ ಸಂತಸಂದಳೆಯುತ್ತುಂ ರಾಜ್ಯಂಗೆಯ್ಯುತ್ತಿರಲಾ ಪ್ರಸ್ತಾವದೊಳ್ ॥ ೫

ಗರುವಿಕೆಯೊಳ್ಪ್ಸೋದೆಯ ಹಿರಿ
ಯರಸಪ ನಾಯಕ ಸಮೇತವೈದಿದ ವಿಜಯಾ ।
ಪುರದ ಸಲಾಬಿತ ಖಾನನ
ವರಸೈನ್ಯವನಾಜಿರಂಗದೊಳ್ಕುಗ್ಗಿಸಿದಂ ॥ ೬

ಮತ್ತತಿಚಪಲದಿಂದಿಭಹಯ
ಪತ್ತಿಚಯಂವೆರಸು ಸರ್ವಸನ್ನಾಹದೆ ದಂ ।
* ಡೆತ್ತಿ ಬಂದಾತುರುಷ್ಕರ
ಮೊತ್ತವನಂಕದೊಳ್ ಮುರಿದನಾ ನೃಪತಿಲಕಂ ॥ ೭

ಮತ್ತಮದಲ್ಲದೆ ಯೆಡೆಯೆಡೆಗೆಯ್ತಂದು ದಾಳಿವರಿಯುತಿರ್ದವಿದ್ಧ ಕರ್ಣಾಕರ್ಣಾಳದಟಂ ಮುರಿದು ಭುಜಬಲಪ್ರತಾಪದಿಂ ರಾಜ್ಯಂಗೆಯ್ಯುತ್ತಮಿರಲಾಕಾಲದೊಳ್, ರಾಮರಾಯರ್ವಿದ್ಯಾನಗರಿಯಿಂ ತೆರಳ್ದು ತುರುಷ್ಕರ ಮೇಲೆ ದಂಡೆತ್ತಿ ಪೋಗಿರಲ್ ತದ್ರಕ್ತಾಕ್ಷಿಸಂವತ್ಸರದ ಮಾಘಮಾಸದೊಳ್ ತುರುಷ್ಕಸೈನ್ಯಕ್ಕಂ ರಾಯಸೈನ್ಯಕ್ಕಂ ಮಹಾದ್ಭುತಮಾದ ಯುದ್ಧಂ ಪಣ್ಣಿ ರಾಯಸೈನ್ಯಕ್ಕಿದಿರ್ಚಿ ನಿಲಲಶಕ್ಯಮಾಗಿ ಯವನ ಸೈನ್ಯಂ ಮುರಿದು ಹರಿಹಂಚಾಗಲ್, ಬಳಿಕ್ಕಂ ಗೋಲುಕೊಂಡೆಯದ ಕುತುಬಶಾಹನುಂ ಆಹಮದಾನಗರದ ಭೈರಿಪಾತುಶಾಹನೆನಿಪ ನಿಜಾಮಶಾಹನುಂ ಇವರಿರ್ವರುಂ ಯುದ್ಧರಂಗದೊಳ್ಕೈಗೆಯ್ದು ನಿಂದು ನಿತ್ತರಿಸಲಮ್ಮದೆ ಪಲಾಯನಂಬಡೆದಿಂತು ರಾಯಸೈನ್ಯಮಂ ಮುರಿವುದಸಾಧ್ಯಮೆಂದಿರ್ವರ್ಪಾತುಶಾಹರೊಂದಾಗಿ ಮಂತ್ರಾಲೋಚನೆಯಂ ರಚಿಸಿ ಮಾಯಾತಂತ್ರದಿಂ ಪೊರತು ಗೆಲ್ವುದಸಾಧ್ಯಮೆಂದು ನಿಶ್ಚಯಂಗೆಯ್ದು ರಾಯರ ಸಮೀಪದೊಳ್ ಮುಖ್ಯಸೇವಕನಾಗಿ ವರ್ತಿಸುತಿರ್ದ ವಿಜಾಪುರದ ಅಲ್ಲಿ [1] ಅದಿಲಪಾತುಶಾಹಂಗೆ ಸಂಧಾನವನೊಡರ್ಚಿಸಿ ಜಾತ್ಯಭಿ

(ಕ) ಪುಸ್ತಕದಲ್ಲಿ " ಅಬ್ದುಲ್ಲ (ಪಾತು) ಶಾಹ " **ನೆಂದಿದೆ.**

ಮಾನಹೇತುಪಂಥಮಂ ಪುಟ್ಟಿಸಿ ಮಂತ್ರಿಂ ಭಿನ್ನಿಸದಂತು ಸ್ವಜಾತ್ಯಭಿಮಾನದೇವತಾಸಾಕ್ಷಿಪೂರ್ವಕವಾಗಿ ಖಡ್ಗಮಂ ಮುಟ್ಟಿಸಿ ಕ್ರಿಯಾಪೂರ್ವಕವಾಗಿ ತಪ್ಪದಂತು ಭಾಷೆಯಂ ತೆಗೆದುಕೊಂಡೀಪ್ರಕಾರದಿಂ ಅಲ್ಲಿ [1] ಅದುಲಶಾಹನನೊಳಗುಮಾಡಿಕೊಂಡು ಗೋಲುಕೊಂಡೆಯದ ಕುತುಬಶಾಹನುಂ ಅಮದಾನಗರದ ಭೈರಿನಿಜಾಮುಶಾಹನುಂ ನಂಬುಗೆಯಾದೊಡೆ ಸಂಧಾನಮುಖದಿಂದೈತಂದು ಕಾಣ್ಬೆವೆಂದು ಹುಸಿಯು ವರ್ತಮಾನಮಂ ಪುಟ್ಟಿಸಿ ನಚ್ಚು ಹಾಕಿ ರಾಯರಂ ವ್ಯಾಮರಿಸಿ ಸಮಯಸಾಧನೆಯಂ ರಚಿಸಿ ಬಳಿಕ್ಕಂ ವಿಜಾಪುರದ ಅಲ್ಲಿ [1] ಅದುಲಶಾಹನ ಸಂಚಿನ ಮೇಲಾಪಾತುಶಾಹರೊಂದಾಗಿ ಮೋಸದ ಮೇಲೆ ಶಾಲಿವಾಹನಶಕವರ್ಷ ೧೪೮೬ನೆಯ ರಕ್ತಾಕ್ಷಿ ಸಂವತ್ಸರದ ಮಾಘ ಬಹುಳದಲ್ಲಿ ರಕ್ಕಸದಂಗಡಿಯೆಂಬ ಸ್ಥಳದಲ್ಲಿ ರಾಮರಾಯರಂ ಪಿಡಿದು ಶಿರಚ್ಛೇದನಂಗೈದು ಆ ಶಿರಮಂ ಕಾಶಿಗೆ ಕಳುಹಿ ತತ್ತತ್ಸ್ಥಾನಂಗಳಿಗೆಲ್ಲಂ ತಾವೇ ಸ್ವತಂತ್ರಕರ್ತೃಗಳಾಗಿರಲಿತ್ತಂ ರಾಯಸಂಸ್ಥಾನಂ ವಿಸ್ಖಲಿತವಾಗಿ ವಿದ್ಯಾನಗರಂ ಪಾಳಾಗಲಾರಾಯರ ಮನೆವಾರ್ತೆ ಜೊಕ್ಕಸದ ಸೇನಬೋವ ಚಿನ್ನಭಂಡಾರದ ನಾರಣಪ್ಪಯ್ಯನೆಂಬಾತನಲ್ಲಿ ನಿತ್ತರಿಸಲಮ್ಮದೆ [2] ಕುಟುಂಬಸಹಿತಂ ತೆರಳ್ದೈತಂದು ಚಿಕ್ಕಸಂಕಣನಾಯಕರ ಪಾದಾರವಿಂದವನಾಶ್ರಯಿಸಲವರ್ಗೆ ಪರಮಾಧಿಕಾರಭಾಗ್ಯಂಗಳನಿತ್ತು ಪೋಷಿಸಿದನಂತುಮಲ್ಲದೆಯುಂ, ೮

ನೆರಹುತೆಡವಲದ ಮನ್ನೆಯ
ಬೊರೆಗಳನಂಕದೊಳದಿರ್ಚಿ ಕೈಗೆಯ್ದದಟಂ ।
ಮೆರೆದಾ ಭೈರಾದೇವಿಯ
ಗರುವಿಕೆಯಂ ಮುರಿದನಾನ್ಯಪಾಲಕತಿಲಕಂ ॥ ೯

ಇಂತಿದಿರಾಂತರ ದುರ್ಮದ
ಮಂ ತವಿಸುತೆ ಚಿಕ್ಕಸಂಕಣೋರ್ವೀಪತಿ ತಾಂ ।

---

[1] (ಕ) ಪುಸ್ತಕದಲ್ಲಿ "ಅಬ್ದುಲ್ಲ (ಪಾತು) ಶಾಹ" ನೆಂದಿದೆ.

ನಿಜಕಳತ್ರಸಹೋದರವರ್ಗರಸು ಕುಟುಂಬಸಹಿತಂ.... (ಕ)

ಸಂತಸದೆ ಸಂತರೆಡಬಡು
ವೆಂತಿರೆ ಸದ್ಧರ್ಮದಿಂದಮಿಳೆಯಂ ಪೊರೆದಂ ॥ ೧೦

ಚಿಕ್ಕಸಂಕಣನಾಯಕಂ ಇಂತು ತನಗೆ ರಾಜಪಟ್ಟವಾದ ಶಾಲಿವಾಹನಶಕಾಬ್ದ ೧೪೯೧ನೆಯ ಶಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೫ ಯಾರಭ್ಯ ಪ್ರಮೋದೂತ ಸಂವತ್ಸರದ ಕಾರ್ತಿಕ ಶುದ್ಧ ೪ಯವರೆಗೆ ವರುಷ ೧೨ ತಿಂಗಳು ೧ ಪರ್ಯಂತಂ ರಾಜ್ಯಂಗೈದು ಶಿವಸಾಯುಜ್ಯಮಂ ಪಡೆದಂ.[1]

---

ಅನಂತರಂ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೯೩ನೆಯ ಪ್ರಮೋದೂತ ಸಂವತ್ಸರದ ಕಾರ್ತಿಕ ಶುದ್ಧ ೫ ಯಲ್ಲಿ ಚಿಕ್ಕಸಂಕಣನಾಯಕರ ಅಗ್ರಜನಾದ ದೊಡ್ಡ ಸಂಕಣನಾಯಕರ ಜ್ಯೇಷ್ಠಪುತ್ರನಾದ ರಾಮರಾಜನಾಯಕಂಗೆ ಇಕ್ಕೇರಿಯರಮನೆಯಲ್ಲಿರಾಜಪಟ್ಟಂ.

ನೆರೆಚಿಕ್ಕಸಂಕಣೇಂದ್ರನ
ತರುವಾಯಿಯೊಳಾಮಹೀಶನಗ್ರಜನೆನಿಪಾ ।
* ಹಿರಿಯಸಂಕಣನರೇಂದ್ರನ
ವರತನುಜಂ ರಾಮರಾಜನಿಳೆಗರಸಾದಂ ॥ ೧೧

ಆ ರಾಮರಾಜನಾಯಕಂ ತಮ್ಮ ಕಿರಿಯಯ್ಯನಾದ ಚಿಕ್ಕಸಂಕಣನಾಯಕರಾಳಬರುತ್ತಿರ್ದ ರಾಜ್ಯ ರಾಷ್ಟ್ರ ದೇಶ ಕೋಶ ಪರಿಸ್ತರಣ ಪ್ರಜೆ ಪರಿವಾರ ಪರಿಜನ ಪುರಜನ ಮಿತ್ರಜನ ಸೇವಕಜನಮೆಂತಾದ ಸಮಸ್ತ ಜನರಂ ಪರಿಪಾಲಿಸುತ್ತುಂ ತನ್ನನುಜನಾದ ವೆಂಕಟಪ್ಪನಾಯಕರಂ ಪ್ರೀತಿಯಿಂ ನಡೆಸಿಕೊಳುತ್ತುಂ ತಮ್ಮ ಕುಮಾರರಾದ ವೀರವೊಡೆಯರ್ ಬಸವಲಿಂಗನಾಯಕರುಮಂ ಸಂತೋಷದಿಂ ಪೋಷಿಸುತ್ತುಂ, ಅಂಕೆ ಝುಂಕೆ ಆಣೆ ಘೋಷಣೆ ಮೊದಲಾದ ರಾಜಧರ್ಮದೊಳಾವುದರಲ್ಲಿಯುಂ ಕೊರತೆ ಬಾರದಂತು ವರ್ತಿಸುತ್ತುಂ ॥ ೧೨

---

1 ಈ ಚಿಕ್ಕ ಸಂಕಣನಾಯಕರು ರಾಮರಾಜನಾಯಕರ ಶಸ್ತ್ರದಿಂದ ಮೃತಿಯಂ ಪಡೆದರು ; ಇಕ್ಕೇರಿಯರಮನೆಯ ಕೊಪ್ಪಲಸ್ಥಳದಲ್ಲಿ ಸಮಾಧಿಯಾಯಿತು. (ಕ.)

ಶ್ರೀ ರಾಮರಾಜನೃಪನರಿ
ವಾರಣಹರ್ಯಕ್ಷನಾನತಾವನದಕ್ಷಂ ।
ಚಾರುಯಶನೆನಿಸಿ ಧರ್ಮದ
ಸಾರವನುಡುಗಿಸದೆ ಪೊರೆದನವನೀತಳಮಂ ॥ ೧೩

ಇಂತಾ ರಾಮರಾಜನಾಯಕರ್ ತಮಗೆ ರಾಜಪಟ್ಟವಾದ ಶಾಲಿವಾಹನ ಶಕ ವರ್ಷ ೧೪೯೩ನೆಯ ಪ್ರಮೋದೂತ ಸಂವತ್ಸರದ ಕಾರ್ತಿಕ ಶುದ್ಧ ೫ ಯಾರಭ್ಯ ಚಿತ್ರಭಾನು ಸಂವತ್ಸರದ ಮಾರ್ಗಶಿರ ಶುದ್ಧ ೪ ಯವರೆಗೆ ವರ್ಷ ೧೦ ತಿಂಗಳು ೧ ಪರ್ಯಂತಂ ರಾಜ್ಯಂಗೈದು ಶಿವಸಾಯುಜ್ಯಮಂ ಪಡೆದರ್ *

ಚತುರ್ಥಾಶ್ವಾಸಂ ಸಂಪೂರ್ಣಂ.



* ಚಿಕ್ಕಸಂಕಣನಾಯಕರ ಕಾಲದಲ್ಲಿ ಬದುಕುಗಳ ಮಾಡಿದವರು :—ಪ್ರಧಾನಿ ನಾರಣಪ್ಪಯ್ಯ, ಕರಣೀಕ ಅಣ್ಣಾಜಯ್ಯ, ರಾಮಪ್ಪಯ್ಯ, ತಮ್ಮರಸಯ್ಯ, ರಾಯಸದ ರಾಮಚಂದ್ರಯ್ಯ, ಮಲ್ಲಪ್ಪಯ್ಯ, ದಳವಾಯಿ ಕಲ್ಲಪ್ಪ ಮುಂತಾದವರು.
ಈ ರಾಮರಾಜನಾಯಕರು ಗೇರಸಪ್ಪೆಯಲ್ಲೂ ಐಕ್ಯವಾದಲ್ಲಿ ಆ ಸ್ಥಳದಲ್ಲಿಯೇ ಸಮಾಧಿಯಾಯಿತು. ಇವರ ಕಾಲದಲ್ಲು ಬದುಕುಗಳ ಮಾಡಿದವರು :—ಪ್ರಧಾನಿ ಆರಗದ ಕಳಸಪ್ಪಯ್ಯ, ಕರಣಿಕ ಅಣ್ಣಾಜಯ್ಯ, ಜೋಯಿಸರ ತಿಮ್ಮರಸಯ್ಯ, ದಳವಾಯಿ ಚಿಕ್ಕಕಲ್ಲಪ್ಪ ಮುಂತಾದವರು. (ಕ.)

# ಪಂಚಮಾಶ್ವಾಸಂ.

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೦೫ನೆಯ ಚಿತ್ರಭಾನು ನಾಮ ಸಂವತ್ಸರದ ಮಾರ್ಗಶಿರ ಶುದ್ಧ ೫ ಯಲ್ಲಿ ದೊಡ್ಡಸಂಕಣ್ಣನಾಯಕರ ಜ್ಯೇಷ್ಠಪುತ್ರರಾದ ರಾಮರಾಜನಾಯಕರ್ಗೆ ಸಹೋದರರಾದ ವೆಂಕಟಪ್ಪನಾಯಕರ್ಗೆ ಇಕ್ಕೇರಿ ಪುರವರದರಮನೆಯೊಳ್ ರಾಜಪಟ್ಟಂ.

ಆ ರಾಮರಾಜನಾಯಕ
ವೀರನನಂತರದೆ ತತ್ಸಹೋದರನೆನಿಪಾ ।
* ಧೀರವೆಂಕಟನೃಪಂ ರಿಪು
ಭೈರವನವನೀಶವರ್ಯನಿಳೆಗರಸಾದಂ ॥ ೧

ಇರೆ ತದ್ವೆಂಕಟಧರಣೀ
ಶ್ವರಗೊಗೆದಂ ಪುತ್ರನೊರ್ವನತಿಶಯತೇಜಂ ।
ನಿರುಪಮಸುಗುಣಸಮಾಜಂ
ದೊರೆಗಳೊಳಧಿರಾಜನಿಳೆಗೆ ನೂತ್ನಮನೋಜಂ ॥ ೨

ಅನುಪಮಶಿಶುರೂಪದೊಳೊಗೆ
ದಿನನೆನೆ ಶೋಭಿಸುವ ತತ್ಕುಮಾರಂಗೊಲ್ದಾ ।
ಜನಪಂ ಭದ್ರಪನಾಯಕ
ನೆನಿಪೊಳ್ವೆಸರಿಟ್ಟು ಪೊರೆದನತಿಮುದದಿಂದಂ ॥ ೩

ಮತ್ತಮದಲ್ಲದಾ ವೆಂಕಟಪ್ಪನಾಯಕಂಗೊರ್ವ ಪೆಣ್ಮಣಿಯುದಿಸಲಾಕೆಗೆ ಹಿರಿಯಮ್ಮನೆಂದು ಪೆಸರಿಟ್ಟು ಪೋಷಿಸಿ ಕತಿಪಯವತ್ಸರಂಗಳ್ಪೋಗಲೊಡನಾಕೆಯುಂ ಜಂಬೂರ ವಿರುಪಣ್ಣವೊಡೆಯರ್ಗೆ ವಿವಾಹಮಂ ರಚಿಸಲಾ ಪೆಣ್ಮಣಿಯ ಬಸಿರೊಳೊರ್ವ ಪುತ್ರನುದಿಸಲಾತಂಗೆ ಸದಾಶಿವಯ್ಯನೆಂದು ಪೆಸರಿಟ್ಟು ಸಂರಕ್ಷಿಸುತುಂ ನಿಜಕುಮಾರ ಭದ್ರಪನಾಯಕಂಗಂ ರಾಯಸಂಬಂಧಿಯಪ್ಪ ಬೇಲೂರ ವೆಂಕಟಾದ್ರಿನಾಯಕನ

ಕುಮಾರಿ ಬಂಗಾರಮ್ಮನೆಂಬ ಪೆಣ್ಮಣಿಯುಂ ದಾನಿವಾಸದ ಸೀಮೆಯೊ ಮಳಲಹೊಳೆಯೆಂಬ ಸ್ಥಳದೊಳತ್ಯಂತ ಸಂಭ್ರಮದಿಂ ವಿವಾಹಮಂರಚಿಸಿ ಯುವರ್ಬಗಳುವಳಿಗಿತ್ತ ಜಾಗರದ ಸೀಮೆ ಕೋಂಟೆಯುಂ ಪರಿಗ್ರಹಿಸಿ ತತ್ಕೋಂಟೆಯುಂ ಬಲಿಸಿ ಬಳಿಕ್ಕಿಕ್ಕೇರಿಯ ಪುರವರಕ್ಕೆಳ್ತಂದು, ಕುಮಾರಭದ್ರಪನಾಯಕನುಮಂ ತನ್ನಗ್ರಜ ರಾಮರಾಜನಾಯಕನ ಕುಮಾರರಪ್ಪ ವೀರವೊಡೆಯರ್ ಬಸವಲಿಂಗನಾಯಕರುಮಂ ತಮ್ಮ ಕಿರಿಯಯ್ಯನಾದ ಚಿಕ್ಕಸಂಕಣನಾಯಕರ ಕುಮಾರನಾದ ಸಿದ್ಧಪ್ಪನಾಯಕನುಮಂ ಪೋಷಿಸುತ್ತುಂ ಸುಖದಿಂ ರಾಜ್ಯಂಗೆಯ್ಯುತ್ತುಮಿರಲಾ ಪ್ರಸ್ತಾವದೊಳ್ ॥ ೪

ಮೆರೆವ ವಿಜಾಪುರಾಧಿಪತಿಯಪ್ಪ ತುರುಷ್ಕಪ ಪಾತುಶಾಹನಂ
ದಿರದೆ ವಜೀರರಂ ನೆರಹಿ ದಕ್ಷಿಣರಾಜ್ಯವನೆಯ್ದೆ ಸಾಧ್ಯಮಂ ।
ವಿರಚಿಪುದೆಂದವರ್ಗರೆ ನಿಯಾಮಿಸಿ ವೀಳೆಯವಿತ್ತು ಕೂಡನಂ
ತರುಚಿರಮತ್ತಹಸ್ತಿಹಯಸೈನ್ಯವನೆಯ್ದೆ ತೆರಳ್ಚೆ ಖಾತಿಯಿಂ ॥ ೫

ಮಂಜುಳಖಾನಂ ಕರಮಾ
ರಂಜಿಪ ಮಹಮುದ್ದಖಾನ ಬಹಿಲಿಮಖಾನಂ ।
ಸಂಜರಖಾನಂ ಹಯಮದ
ಕುಂಜರತತಿಪತ್ತಿವೆರಸು ಶಾತೆಯಖಾನಂ ॥ ೬

ಒಡನೆ ಸಲಾಬಿತಖಾನಂ
ಕಡುಹಿಂ ನಿಜಸೈನ್ಯಸಹಿತಮಂಬರಖಾನಂ ।
ಪಡೆವೆರಸಂಕುಶಖಾನಂ
ಸಡಗರದಿಂ ಸೈನ್ಯಗೂಡಿದಂಮದಖಾನಂ ॥ ೭

ನೆರೆದಿನಿಬರ್ವಜೀರರುಗಳೆಳ್ತರೆ ಹೈದರಮಲ್ಲಿನಾಯಕಂ
ಬರಿಗಿಯ ದೇವಿನಾಯಕನುಮೆಯ್ದೆ ಸಿಡಿಲ್ಗಳ ಮೊತ್ತದಂತೆ ಭೀ ।
ಕರತರತಂತ್ರವಾರ್ಭಟಿಸುತೆಯ್ತರೆ ಸೈನ್ಯಪದೋಚ್ಚಧೂಳಿಯುಂ
ಬರವ ಮುಸುಂಕೆ ಬಂದುದು ಮಹೋಗ್ರತುರುಷ್ಕರ ಧಾಳಿ ತೀವ್ರದಿಂ ॥

ಕಡೆಗಾಲದಗ್ರದೊಳ್ಮಗೆ
ಕಡಲ್ಗಳ್ತೀವ್ರದೊಳ್ ಮೇರೆವರಿವಂತಿರೆ ಪೆ।
ರ್ಕಡೆವೆರಸೈದುತ್ತನಿಬ
ರ್ಜಡೆಯದ ಕೋಂಟೆಯ ಸಮೀಪಮಂ ಸಾರುತ್ತುಂ ॥ ೯

ಮುತ್ತಿಗೆಯನಿಕ್ಕೆ ಕೇಳ್ದು ಸು
ವೃತ್ತಂ ವೆಂಕಟನೃಪಾಲನರಿಕುಲಕಾಲಂ।
ಪತ್ತಿಚಯಮೆರಸು ತದ್ದು
ರ್ವೃತ್ತರ ಸೇನಾಸಮೂಹಕಂದಿದಿರಾಂತಂ ॥ ೧೦

ಇಂತಾ ವೆಂಕಟಪ್ಪನಾಯಕಂ ಜಡೆಯದ ಕೋಂಟೆಯಂ ವೇಷ್ಟಿಸಿದ ತುರಷ್ಕರ ಸೈನ್ಯಕ್ಕಿದಿರ್ಚಿ ನಿಂದು ಕೈಗೆಯ್ದು ಸಮರಾಂಗಣದೊಳಂ ಬರಖಾನನಂ ಕುಂಬಿಡಿಸಿ, ಅಂಕುಶಖಾನನ ಬಿಂಕಮಂ ಮುರಿದು, ಸಲಾಬತಖಾನನಂ ನಿಲವಿಕೆಗೆಡಿಸಿ, ಬಹಿಲಿಮುಖಾನನಂ ಬಹಿರ್ಮುಖನೆನಿಸಿ, ಮಂಜುಳಖಾನನಂ ರಂಜನೆಗೆಡಿಸಿ, ಶಾತೆಯುಖಾನನ ಲೂಟಿಯಂ ನಿಲಿಸಿ, ಮಹಮುದಖಾನನಹಮಿಕೆಯಂ ತೀರ್ಚಿ, ಅಂಮದಖಾನನ ಹೆಮ್ಮೆಯಂ ಮುರಿದು, ಸಂಜರಖಾನನಂ ಭಂಜನೆಗೈದು, ಸರ್ಜಾಖಾನನ ಗರ್ಜನೆಯಂ ನಿಲಿಸಿ, ಹೈದರಮಲ್ಲಿನಾಯಕನಂ ಕೈದುವನಿಕ್ಕಿಸಿ, ಬರಿಗಿಯ ದೇವೀನಾಯಕನಂಪರಾಭವಂಗೈದು, ಇಂತುರುಬಿ ತರುಬಿದ ತುರುಷ್ಕ ಸೈನ್ಯಸಾಗರಮಂಕಲಂಕಲವರ್ನಿಂದು ನಿತ್ತರಿಸಲಮ್ಮದೆ ಮುರಿದು ಮುತ್ತಿಗೆದೆಗೆದನಂತರಂ ॥ ೧೧

ಮತ್ತಂ ಹನುಮನರೇಂದ್ರನ
ಪತ್ತಿಚಯಂಮೆರಸು ತುಡುಗುಣಿಯ ಕೋಂಟೆಯುಮಂ।
ಮುತ್ತಿದ ಯುವನರ ಸೈನ್ಯದ
ಮೊತ್ತಮನಂಕದ್ಮೊಳ್ ಸದೆದು ಮುರಿದೋಡಿಸಿದಂ ॥ ೧೨

ಮತ್ತೆಸೆವ ಹಾನಗಲ್ಲಂ
ಗುತ್ತಿಯನಾವರಿಸಿದುರುತುರುಷ್ಕರ ಫೌಜಂ ।
ತತ್ತರದರಿದರಿಕದಳೀ
ಮತ್ತಗಜಂ ವೆಂಕಟೇಂದ್ರನಿರಿದೋಡಿಸಿದಂ ॥ ೧೩

ಮತ್ತಮದಲ್ಲದಾ ವೆಂಕಟಪ್ಪನಾಯಕಂ ರಾಮರಾಯಪರ್ಗಲ್ಲೆಣ್ಣೊಬ್ಬ
ಯುಂಬಳಿಗೆಂದು ಮುನ್ನಿತ್ತ ಮಾಸೂರ ಸೀಮೆಯಂ ಕಟ್ಟಿಕೊಳಲ್ಕೈ
ದಿದ ಮಂಜುಳಖಾನನಂ ಮುರಿದೆಂಜಲಖಾನನೆಂದು ಪೆಸರಿಟ್ಟಂತುಮಲ್ಲ
ದವನಂ ಬೆಂಕೊಂಡು ಬಿಡದೈದಿ, ॥ ೧೪

ಗಡಿಯಂ ದಾಂಟಿಸಿ ತರುಬಿದ
ಪಡೆಯಂ ಸಂಹರಿಸಿ ಹಾನಗಲ್ಲವನಿಯೊಳಂ ।
ತಡೆಯದೆ ತೊಲಗದ ಕಂಬವ
ನೆಡಿಸಿ ಮಹಾದ್ಭುತಪರಾಕ್ರಮವನುರೆ ಮೆರೆದಂ ॥ ೧೫

ಇಂತತ್ಯಂತ ಸಾಹಸಂಗೈದು ಭುಜಬಲಪರಾಕ್ರಮದಿಂ ರಾಜ್ಯಂ
ಗೆಯ್ಯುತಿರ್ಪ ವೆಂಕಟಪ್ಪನಾಯಕರ ಪ್ರತಾಪಾತಿಶಯಮಂ ವಿಜಾಪುರದ
ಪಾತುಶಾಹಂ ಕೇಳ್ದು ಕೆರಳ್ದು ತನ್ನೃಪನ ರಾಜ್ಯಮಂ ವಶಂಗೆಯ್ವು
ದೆಂದು ನಿಯಾಮಿಸಿ ಮಗುಳ್ದ ಪರಿಮಿತಸೇನಾಸಮುದ್ರಮಂ ತೆರಳ್ಚ
ಲವರ್ಗಡಿಯಂ ದಾಂಟಿ ಮಿಕ್ಕು ಮೀರಿ ದಾಳಿವರಿಯುತ್ತಿಸಮೀಪ
ಕೈತಂದರೆಂಬ ವಾರ್ತೆಯಂ ಕೇಳ್ದತ್ಯಂತ ಕೋಪಾಟೋಪದಿಂದಾಪ್ರ
ಸ್ಥಾನದೊಳ್ ॥ ೧೬

ಏಕಾಂಗದಿ ಪೊಕ್ಕಹಿತಾ
ನೀಕವನಿರ್ಕಯ್ಯ ಖಡ್ಗದಿಂ ಕುರಿದರಿದಾ ।
ಶ್ರೀಕರವೆಂಕಟಭೂಪಂ
ದೋಖಂಡೇರಾಯನೆಂಬ ಬಿರುದಂ ಮೆರೆದಂ ॥ ೧೭

ಮತ್ತಮಾವೇಳೆಯೊಳ್ ‖ ೧೮

ಅಸಮಬಲವೆಂಕಟೋರ್ವೀಪ
ನಸಿಯೆಂಬಸಿತಾಹಿ ಯುದ್ಧರಂಗದೊಳಹಿತ ।
ಪ್ರಸರದೆಸೆವುಸಿರೆಲರನಸ
ವಸದಿಂ ನುಂಗಿದುದು ನಿಮಿರ್ದು ಪಸಿವಡಗುವಿನಂ ‖ ೧೯

ಮತ್ತಮದಲ್ಲದೊಂದವಸರದೊಳ್ ತುರುಷ್ಕಯುದ್ಧದೊಳ್ ‖ ೨೦

ಪುದಿದೆಣೆ ದಲೆಯೊಳೇಕಾಂ
ಗದೆ ಬೆತ್ತಲೆಗುದರೆಯೇರ್ದು ದುವ್ವಾಳಿಸುತಾ ।
ಕಿದ ಪಾತುಶಾಹಫೌಜಂ
ಸದೆದೋಡಿಸಿ ಜಯವನಾಂತನಾವೆಂಕನೃಪಂ ‖ ೨೧

ಮತ್ತಮಾಕಾಲದೊಳ್ ‖ ೨೨

ಉರವಣಿಸಿಸೈನ್ಯಸಹಿತಂ
ಧುರದೊಳ್ಕ್ರಮರ್ಮಲೆತು ನಿಂದು ಕೈಗೆಯ್ದಲಸ ।
ದ್ಬರಿದಗವಜೀರನಂ ಮದ
ಕರಿಸಹಿತಂ ಪಿಡಿದು ಮೆರೆದನತಿವಿಕ್ರಮಮಂ ‖ ೨೩

ಮತ್ತಮದಲ್ಲದೊಂದವಸರದೊಳ್ ‖ ೨೪

ವರಪಾತುಶಾಹಸೈನ್ಯೋ
ತ್ಕರವನೆರಳ್ಕಯ್ಯೊಳಾಂತನೇಜಗಳಿಂ ಕೋ ।
* ಡಿರಿದು ಕಾಲ್ದೆಗೆಸಿ ವೆಂಕಟ
ನರಪತಿ ದೋನೇಜನೆಂಬ ಬಿರುದಂ ಮೆರೆದಂ ‖ ೨೫

ಇಂತೆರಳ್ಕ್ರಮರ್ಮಳಯಿದ್ದ ಪಾತುಶಾಹನ ಫೌಜಂ ಪುಡಿಗೆಯ್ದು ಪಲಾಯನಂಗೊಳಿಸಿ ಪ್ರಖ್ಯಾತಿಯುಂ ಪಡೆದಾ ವೆಂಕಟಪ್ಪನಾಯಕಂ ತನ್ನ ಕಿರಿಯಯ್ಯಚಿಕ್ಕಸಂಕಣನಾಯಕರ ಪುತ್ರನಾದ ಸಿದ್ದಪ್ಪನಾಯ

ಕಂಗಿರ್ವರ್ಕನ್ಯಾಶಿರೋಮಣಿಗಳಂ ವಿವಾಹಮಂ ರಚಿಸಿ, ಸ್ವಪುತ್ರಭದ್ರಪನಾಯಕಂಗಂಡಿಗೆಯವರಲ್ಲಿ ತಂದ ಪೆಣ್ಮಣಿಯ ಬಸಿರೊಳಿರ್ವರ್ಪುತ್ರರುದಿಸಲವರ್ಗೆ ರಾಮಲಿಂಗನಾಯಕ ವೀರಭದ್ರನಾಯಕರೆಂದು ನಾಮಕರಣಮಂ ರಚಿಸಿ ಸಂತಸದಿಂ ಪೋಷಿಸುತ್ತಿರಲವರಿರ್ವರೊಳ್ಹಿರಿಯನಾದ ರಾಮಲಿಂಗನಾಯಕಂ ಬಾಲತ್ವದಲ್ಲಿಯೇ ಸಂದನಂತರಮಾಭದ್ರಪನಾಯಕಂಗೊರ್ವಳ್ಪೆಣ್ಮಣಿಯುದಿಸಲಾ ಪೆಣ್ಮಣಿಯನಾ ವೆಂಕಟಪ್ಪನಾಯಕಂ ತನ್ನ ದೌಹಿತ್ರನಾದ ಜಂಬೂರ ವಿರುಪಣ್ಣವೊಡೆಯರ ಸುತ ಸದಾಶಿವಯ್ಯಂಗೀಯಲಾ ಪೆಣ್ಮಣಿಯ ಬಸಿರೊಳ್ ವೆಂಕಟಯ್ಯ ಭದ್ರಯ್ಯರೆಂದಿರ್ವರ್ಪುತ್ರರುದಿಸಲವರ್ಕಳಂ ನಿಟ್ಟಿಸಿ ಪರಮಸಂತೋಷಂಬಡುತಿಂತು ಮಕ್ಕಳ್ಮೊಮ್ಮಕ್ಕಳ್ಮರಿಮಕ್ಕಳ್ವೆರಸು ಸುಖದಿಂ ರಾಜ್ಯಂಗೆಯ್ಯುತಿರಲೊಡನೆ ಸ್ವಪುತ್ರಭದ್ರಪನಾಯಕಂ ತುರುಷ್ಕಕಿರಾತರಮೇಲೆ ಕೆಲವು ರಾಜಕಾರ್ಯಂಗಳಂ ಮಾಡಿ ಪ್ರಖ್ಯಾತಿವೆತ್ತು ಕತಿಪಯವತ್ಸರಂ ಸುಖಮಿರ್ದನಂತರಂ ಶಿವಸಾಯುಜ್ಯವನೈದಲ್, * ವೆಂಕಟಪ್ಪನಾಯಕಂ ಪುತ್ರಶೋಕದಿಂ ಮಹಾವ್ಯಾಕುಲಿತಚಿತ್ತನಾಗಿ ಬಳಿಕಧ್ಯಾತ್ಮಶಾಸ್ತ್ರವಿಚಾರಮುಖದಿಂ ಸ್ವಸ್ಥಚಿತ್ತನಾಗಿರುತ್ತುಂ, ಮೊಮ್ಮಗ ವೀರಭದ್ರನಾಯಕಂಗಂಕೊಲ್ಲ...ಮ್ಮಾಜಿಯವರ ಮಕ್ಕಳಿರ್ವರ್ಕನ್ಯಾರತ್ನಂಗಳನತ್ಯಂತವಿಭವದಿಂ ವಿವಾಹಮಂ ರಚಿಸಿ ಕಿರಿಯಯ್ಯ ಚಿಕ್ಕಸಂಕಣನಾಯಕನ ಪುತ್ರಂ ಸಿದ್ದಪ್ಪನಾಯಕಂಗೆ ಜ್ಯೇಷ್ಠಪತ್ನಿಯೊಳೊರ್ವ ಕುಮಾರನುದಿಸಲಾತಂಗೆ ಶಿವಪ್ಪನಾಯಕನೆಂದು ಪೆಸರಿಟ್ಟು ಮತ್ತಮಾಪತ್ನಿಯೊಳುದ್ಭವಿಸಿದ ಪೆಣ್ಮಕ್ಕಳ್ಗೆ ಪರಮೇಶ್ವರಮ್ಮ ನಾಗಾಜಮ್ಮ ಚನ್ನಮ್ಮನೆಂದು ಪೆಸರಿಟ್ಟು ಮತ್ತಮಾಸಿದ್ದಪ್ಪನಾಯಕಂಗೆ ಕನಿಷ್ಠಪತ್ನಿಯೊಳೊರ್ವ ಕುಮಾರಂ ಜನಿಸಲಾತಂಗೆ ವೆಂಕಟಪ್ಪನಾಯಕನೆಂದು ನಾಮಕರಣಮಂ ರಚಿಸಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತಿರ್ದನಂತು ಮಲ್ಲದೆಯುಂ ॥ ॥೨೬॥

---

* ಭದ್ರಪನಾಯಕರಿಗೆ ಅವರ ಪತ್ನಿಯರಿಬ್ಬರಿಗೆ ಸಹ ಇಕ್ಕೇರಿಯರಮನೆಯ ಕೊಪ್ಪಲಸ್ಥಳದಲ್ಲಿ ಸಮಾಧಿಯಾಯಿತು; ಭದ್ರಪನಾಯಕರ ಸಂಗಡಲೆ ಸಮಾಧಿಯಾಯಿತು. (ಕ)

ಚಂಡಪರಾಕ್ರಮಜಿತದೋ
ರ್ದಂಡಾರ್ಜಿತಭೂರಿವಿಭವವೆಂಕಟಭೂಪಂ ।
* ದಂಡಯಾತ್ರೆಯೊಳ್ ಪರಭೂ
ಮಂಡಲಮಂ ಯುದ್ಧರಂಗದೊಳ್ಸಾಧಿಸಿದಂ ॥ ೨೭

ಅದೆಂತೆಂದೊಡೆ ॥ ೨೮

ಮೆರೆವ ಕಿರಾತರ ವಶಮಾ
ಗಿರುತಿಹ ಹರಕಾಳನೆಡೆಯಹಳ್ಳಿಯುಮಂ ಕೊಂ ।
ಡುರುಕೋಂಟೆಯಂ ಬಲಿಯಿಸಿ ತ
ದ್ಧರಣಿಪನಾನಂದಪುರಮೆನಿಪ ಪೆಸರಿಟ್ಟಂ ॥ ೨೯

ಮತ್ತಮಲ್ಲದಾ ವೆಂಕಟಪ್ಪನಾಯಕನಾನಂದಪುರದ ಪರಿಸ್ತರಣ ದೊಳಾಗಮೋಕ್ತಪ್ರಧಾನದಿಂ ತಾಂಡವೇಶ್ವರನೆಂಬ ಮೂರ್ತಿಯಂ ಪ್ರತಿಷ್ಠೆಯಂ ರಚಿಸಿ ಪರಮಮನೋಹರಮಾದರಮನೆಯಂ ರಚನೆಗೈಸಿ, ವಾಪೀಕೂಪತಟಾಕಾರಾಮಾದಿಗಳಂ ನಿರ್ಮಾಣಂಗೈಸಿ, ಮಗುಳ್ಕೆರೆಯರಮನೆಯೊಳ್ವಿಚಿತ್ರತರರಚನಾಕೌಶಲ್ಯದಿಂ ನಾಟಕಶಾಲೆಯಂ ನಿರ್ಮಾಣಂಗೈಸಿ, ತದಿಕ್ಕೇರಿಯೂನಂದಪುರಕ್ಕಂ ವೈಹಾಳಿಯನೆಸಗುತ್ತತ್ಯಂತೋತ್ಸಾಹದಿಂ ವಿಹರಿಸುತ್ತುಂ ರಾಜ್ಯಂಗೆಯ್ಯುತಿರ್ದನಂತುಮಲ್ಲದೆಯುಂ॥೩೦

ತುರುಕರ ಮೂಲಕದೆ ಕಿರಾ
ತರ ವಶಮಾಗಿರ್ಪ ಪೊಳೆಯಪೊನ್ನೂರ ಪರಿ ।
ಸ್ತರಣಮನಾ ಸಂಕಣನೃಪ
ವರನಾತ್ಮಜನಾಜಿರಂಗದೊಳ್ಸಾಧಿಸಿದಂ ॥ ೩೧

ಇಂತಾ ವೆಂಕಟಪ್ಪನಾಯಕಂಹರಕಾಳಡೆಯಹಳ್ಳಿ ಪೊಳೆಯಪೊನ್ನೂರ ಪರಿಸ್ತರಣಸೀಮೆಗಳನಧೀನಮಂ ರಚಿಸಲ್,ತನ್ನ ಸೀಮೆಕೋಂಟೆಗಳನೀಳ್ದನೆಂದತ್ಯಂತಕೋಪಾಟೋಪದಿಂ, ॥ ೩೨

ಪಿಂಗದಡಿಗಡಿಗೆ ನಿಲ್ತೋ
ಕಾಂಗದೆ ಕೈಗೆಯ್ದು ಸಾಸಮಂ ಮೆರೆದ ಲಸ ।

ತ್ಕಂಗೆಯಹನುಮನರೇಂದ್ರೋ
ತ್ತುಂಗನ ಭುಜಬಲವನಂಕದೊಳ್ಕುಗ್ಗಿಸಿದಂ ॥ ೩೪

ಮತ್ತಮದಲ್ಲದಾ ವೆಂಕಟಪ್ಪನಾಯಕಂ ॥ ೩೫

ಕುಂಬಸೆಯ ದಾನಿವಾಸದ
ಕುಂಭಿನಿಗಳನಾಳ್ವ ಬೊಂಮಣಂ ವೀರಣರೆಂ ।
ದೆಂಬದಟರ ಮುರಿದಾಧರೆ
ಯಂ ಭುಜಬಲದಿಂದಧೀನಮಂ ವಿರಚಿಸಿದಂ ॥ ೩೬

ಮತ್ತಮದಲ್ಲದೆ ॥ ೩೭

ಅಂಡಿಗೆಯುದ್ರೆಯ ಗುಡುವೆಯ
ಗೆಂಡಲ ತಲವೂರನೆಸೆವಮುಂಚೆಯನಾಳ್ದ ।
ದ್ದಂಡರನುರೆಮುರಿದಾ ಭೂ
ಮಂಡಲಗಳನಧಿಕಶೌರ್ಯದಿಂ ಸಾಧಿಸಿದಂ ॥ ೩೮

ಮತ್ತಮದಲ್ಲದಾ ವೆಂಕಟಪ್ಪನಾಯಕಂ, ಸಾತಳಬ್ಬೆಳವೆಂದೂರು ಹೆಬ್ಬೆ ಮಂಡಗದ್ದೆ ಹೊನ್ನೂರು ಹಾರನಹಳ್ಳಿ ಸೀಮೆಗಳಂ ಸಾಧಿಸಿ ತತ್ತತ್ಪಟ್ಟೆಯದಾರರ್ಕಳಿಂ ಪಣಮಣಿಹಂಗೊಂಡು ಕುಂಬಸೆ ದಾನಿವಾಸ ಹೆಬ್ಬೆ ಮಂಡಗದ್ದೆ ಮುಂತಾದ ಸ್ಥಳಗಳಲ್ಲಿ ಪರಿಶೋಭಿಪ ಪರಿಸ್ತರಣಂಗಳಂ ರಚನೆಗೈಸಿದನಂತುಮಲ್ಲದೆಯುಂ ॥ ೩೯

ಗರುವನರಶಿಂಗನಾಯಕ
ನುರುತರಶೌರ್ಯಾತಿಶಯವನುಡುಗಿಸಿ ಬಂಕೀ ।
ಪುರದಪರಿಸ್ತರಣವನನು
ವರದೊಳ್ಕೊಂಡಾಳ್ದನೆಸವೆ ತದ್ಭೂತಳಮಂ ॥ ೪೦

ವಿರುಪೇಕಲಕ್ಷದೇಶದ
ದೊರೆಮನ್ನೆಯಳನಿಸಿ ರೂಢಿವೆತ್ತಿಚಲಮಂ ।

ಮೆರೆದಾಭೈರಾದೇವಿಯ
ಗರುವಿಕೆಯಂ ಮುರಿದು ಧುರದೆ ಕೈಸೆರೆವಿಡಿದಂ ॥ ೪೧

ಇಂತು ದಳವಾಯಿಲಿಂಗಣನಾಯಕನಂ ಕಳುಹಿ ಕೈಸೆರೆವಿಡಿದಾವಿನಹಳ್ಳಿ ಕರುವೂರು ಮೊರಬಡಿ ಸಾಳನಾಡು ಬಟ್ಟಕಳ ಗೆರಸಪ್ಪೆ ಚಂದಾವರ ಗೋವರ್ಧನಗಿರಿ ವಡ್ಡಮೇದಿನಿ ಮುಂತಾದಾಕೆಯಾಳ್ವ ರಾಜ್ಯಪರಿಸ್ತರಣಮಂ ವಶಮಾಡಿಕೊಂಡು ತದೀಯವಿಚಿತ್ರತರವಸ್ತುವಾಹನಾಂಬರಾರ್ಥಾದಿಸರ್ವಸ್ವಮಂ ಸ್ವಾಧೀನಂಗೈದನಂತುಮಲ್ಲದೆಯುಂ ॥

ಹೊನ್ನೆಯಕಂಬಳಿವೆಸರಿನ
ಮನ್ನೆಯನಾರ್ನಾಡುಮುಂಗಿನಾಡೆಡವೂರಾ ।
ಚಿನ್ನಬಿದರೂರ್ಪೊಸಂಗಡಿ
ಗನ್ನಾಯಕನೆನಿಸಿ ನೆರೆ ವಿರಾಜಿಸುತಿರ್ದಂ ॥ ೪೨

ಇಂತು ನೆಗಳ್ತೆವೆತ್ತ ಹೊನ್ನೆಯಕಂಬಳಿಯೆಂಬ ಮನ್ನೆಯಂ ಹೊಸಂಗಡಿಯೆಂಬೂರೊಳಿರ್ದು ಶಂಕರನಾರಾಯಣಭಟ್ಟನೆಂಬವನಂ ಮಂತ್ರಿಯಂ ಮಾಡಿಕೊಂಡವನ ಮುಖದಿಂ ತನ್ನ ರಾಜ್ಯಭಾರವಿಚಾರಂ ಮುಂತಾದೆಲ್ಲ ಕಾರ್ಯಂಗಳಂ ನಡೆಸಿಕೊಳುತ್ತುಮಿರಲ್, ದಿನದಿನದೊಳಾಶಂಕರನಾರಾಯಣಭಟ್ಟಂ ಕ್ರಮದಿಂ ಪ್ರಖ್ಯಾತನಾಗಿ ಹೊನ್ನೆಯಕಂಬಳಿಯಂ ಬಗೆಗೊಳದೆ ತಾಂ ಬಿದುರೂರೊಳ್ನಲೆಯಾಗಿ ನಿಂದೆಡವಲದೊಳಿರ್ಪಾರುನಾಡು ಕಬ್ಬುನಾಡು ಮುಂಗಿನಾಡು ಮುಂತಾದ ಸೀಮೆಗ್ರಾಮಗಳೆಲ್ಲಂ ತಾನೆ ಸ್ವತಂತ್ರಕರ್ತೃವಾಗಿ ವರ್ತಿಸುತ್ತುಮಿರಲಾಕಾಲದೊಳ್ ವೆಂಕಟಪ್ಪನಾಯಕಂ ದಳವಾಯಿಲಿಂಗಣ್ಣನಾಯಕಂವೆರಸು ಸೈನ್ಯಸಮೇತಂ ತೆರಳ್ದು ದಾಳಿವರಿಯುತ್ತೈದಿ ಬಿದುರೂರ ಪ್ರಾಂತದೊಳಿಳಿದು ಪ್ರಯತ್ನದಿಂದೊಳಸಾರ್ದು ಬಿದುರೂರ ಪರಿಸ್ತರಣಮಂ ವೇಷ್ಟೈಸಿ ಜಕೀರಿರಸ್ತುಮುಸ್ತೈದೆಗಳೊಳಪೊಗದಂತು ಕಂಡಿಕಣಿವೆಪಥಂಗಳಂ ಕಟ್ಟಿ ಜೇರುಮುತ್ತಿಗೆಯಂ ರಚಿಸಲಾ ಶಂಕರನಾರಾಯಣಭಟ್ಟಂ ಹೇರಳ ಘುಂದಿಮಕ್ಕಳಂ ನೆರಹಿ ಮೂವರ್ಳೆತು ಕೋಟೆಯಂ ಕಲಿಯೇರಿಸಿ

ನಾಲ್ಕುರುತಿಂಗಳಪ್ಪನ್ನೆವರಂ ಕಾದಿಸಲಾಗಳಾ ಕೋಂಟೆಯ ನಾಲ್ಗಡೆ ಯಡೆದಿಟ್ಟಿಗಳೊಳ್ ಬುರುಜುಗಳನೆಬ್ಬಿಸಿ ಶತಘ್ನಿಗಳಂ ಪೂಡಿಸಿ ತತ್ಪ್ರಯೋಗವಮುಖದಿಂದಾಬಿದುರೂರ ಕೋಂಟೆಯಂ ತೆಗೆದುಕೊಂಡು ಶಂಕರನಾರಾಯಣಭಟ್ಟನಂ ಕೈನೆಶಂಗೆಯ್ದಾ ಕೋಂಟೆಯಂ ಬಲಿಸಿ ಯೆಡವೂರ್ಮುಂಗಿನಾಡಾರುನಾಡುಕಬ್ಬುನಾಡು ಪಟ್ಟಿಗುಪ್ಪೆಮುಂತಾದ ಸೀಮೆಯ ಪ್ರಜೆಪರಿವಾರಂಗಳಂ ಕಾಣಿಸಿಕೊಂಡು ಕಾಣಿಕೆಗೊಂಡಬಳಿಕ್ಕಂ,ಸ್ಕಾಂದ ಪುರಾಣದೊಳ್ ಸನತ್ಕುಮಾರ ಸಂಹಿತೆಯೊಳ್ ಸಹ್ಯಾದ್ರಿಖಂಡದೊಳು ಸಿರ್ದಂತಾಬಿದುರೂರೊಳ್ ಸ್ನಾನಮಾತ್ರದೊಳನೇಕದುಷ್ಕೃತಂಗಳಂ ನಿವಾರಿಪ ಕಲಾವತಿಯ ನದಿಯ ತೀರದೊಳ್ ವೇಣುವನಮಧ್ಯದೊಳ್ ವಲ್ಮೀಕದೆಡೆಯೊಳ್ ಪ್ರಾದುರ್ಭಾವಮಾಗಿ ಮಹಾಪ್ರಸನ್ನಮೂರ್ತಿಯೆನಿಸಿ ಭಕ್ತಜನರ್ಗೆ ಬೇಡಿದಿಷ್ಟಾರ್ಥಂಗಳನೀಯುತುಂ ವಿರಾಜಿಸುತ್ತಿರ್ಪ ತದ್ಬಿದುರೂರ ನೀಲಕಂಠೇಶ್ವರಲಿಂಗದ ಪೂಜೆ ಲೋಪಮಾಗದೆ ನಡೆವಂತು ಕಟ್ಟಳೆಯಂ ರಚಿಸಿ ಮತ್ತಮಾ ವೆಂಕಟಪ್ಪನಾಯಕಂ ಬಿದುರೂರಿಂ ತೆರಳ್ದು ಘಟ್ಟವನಿಳಿದು ಹೊನ್ನೆಯಕಂಬಳಿಯೆಂಬ ಮನ್ನೆಯನಂ ಮಗ್ಗಿಸಿ ಹೊಸಂಗಡಿ ಕಡರಿ ಬಗ್ಗವಾಡಿಯ ಹೋಬಳಿ ಕೊಲ್ಲೂರು ಮುಂತಾದ ಹೊನ್ನೆಯಕಂಬಳಿಯಾಳ್ವ ಸೀಮೆಯ ಪ್ರಜೆಪರಿವಾರಮಂ ಕಾಣಿಸಿಕೊಂಡು ಬಗ್ಗವಾಡಿ ಹೊಸಂಗಡಿಯೆಂಬ ಸ್ಥಳಂಗಳೊಳ್ ಪರಿಸ್ತರಣಮಂ ನಿರ್ಮಾಣಂಗೈಸಿ ಕೊಲ್ಲೂರುಮೂಕಾಂಬಿಕೆಯಮ್ಮನವರ ಪೂಜಾದಿ ವಿಭವಂ ಲೋಪಮಾಗದಂತೆ ನಡೆವಂತು ನಿಯಾಮಕಂಗೈಸಿದನಂತು ಮಲ್ಲದೆಯುಂ ॥ ೪೪

ಎಡಬಲದೊಳಿರ್ಪ ಧೂರ್ತರ
ಕಡುಹಂ ಮಗ್ಗಿಸಿ ಸದಾಶಿವೇಂದ್ರನ ಪೌತ್ರಂ।
*ಪಿಡಿದು ಪುಂಡರ್ಕಳಂ ಬಳಿ
ಕಡಿಮಲೆಯ ಧರಿತ್ರಿಯಂ ಕರಂ ವಶಗೈದಂ ॥ ೪೫

ಭೈರಸವೊಡೆಯರುಮಂ ತ
ದ್ಧೀರಂ ನಿಗ್ರಹಿಸಿ ಕೊಪ್ಪಮಂ ಬೆಳ್ಕರೆಯಂ।

ಕಾರಕಳ ಕಳಸ ಖಾಂಡ್ಯದ
ಚಾರುಪರಿಸ್ತರಣಭೂಮಿಯುಂ ವಶಗೈದಂ ॥ ೪೬

ಇಂತು ಕಾರಕಳದ ಭೈರಸವೊಡೆಯರಂ ನಿಗ್ರಹಿಸಿ ತದ್ರಾಜ್ಯಪರಿಸ್ತರಣಂಗಳಂ ವಶಂಗೈದನಂತರಂ, ಮಾಳಕಾಡ ಹೊಳೆಯುಬಯುಲೂರ ಕೋಂಟೆಗಳಂ ನಿರ್ಮಾಣಂಗೈಸಿದನಂತುಮಲ್ಲದೆಯುಂ, ॥ ೪೭

ಬಲ್ಲಿದ ಶಿರಾಲಿಯುವರೆಂ
ಘಲ್ಲಿಸಿ ವಶಗೈದು ಕೂಡೆ ತದ್ಭೂತಳವುಂ ।
ಹಲ್ಲಗ್ರ್ಗಡೆಯೆನಿಸದ ಕೇ
ಡಿಲ್ಲದ ವಸುಪುರವನಾನೃಪಂ ಸಾಧಿಸಿದಂ ॥ ೪೮

ಇಂತು ಬಸುರೂರಂ ಸಾಧಿಸಿ ಮಹಾಲಿಂಗೇಶ್ವರದೇವರ ಪೂಜೆ ಲೋಪವಾಗದಂತು ನಿಯಾಮಕಂಗೆಯ್ದು ತೆರಳ್ದನಂತುಮಲ್ಲದೆಯುಂ ॥

ಅವನೀಶಭೂತಪಾಂಡ್ಯೋ
ರ್ವ್ವಿವರ್ಗಳ್ಮನ್ನಿಳ್ದ ಪರಮವೈಭವದಿಂದೊ ।
ಪ್ಪುವ ಭಾರಕೂರ ಸಂಸ್ಥಾ
ನವನುರೆ ವಶಗೈದನಾ ನೃಪಾಲಕತಿಲಕಂ ॥ ೫೦

ಇಂತಾ ವೆಂಕಟಪ್ಪನಾಯಕಂ ಬಾರಕೂರ ಸಂಸ್ಥಾನವಂ ಸ್ವಾಧೀನಂಗೆಯ್ದು ಬಾರಕೂರು ಕಲ್ಯಾಣಪುರ ಮಲ್ಲಿಕಾರ್ಜುನಗಿರಿ ಕಂಡುಲೂರ ಕೋಂಟೆಗಳಂ ನಿರ್ಮಾಣಂಗೈಸಿದನಂತುಮಲ್ಲದೆಯುಂ ॥ ೫೧

ಮುರಿದು ಸುರಾಲರ ತೊಳಹರ
ಸಿರಿಯುರ ನಾಲ್ವತ್ತುನಾಡು ಕೆಲನಾಡುಂ ಶಂ ।
ಕರನಾರಾಯಣ ಬೈದೂ
ರ್ವ್ವೆರಸಿದ ಹಳ್ಳಿಗೆರೆಯುವನಿಯುಂ ಸಾಧಿಸಿದಂ ॥ ೫೨

ಇಂತು ಸುರಾಲರ ತೊಳಹರ ಸೀವೆಗಳಂ ವಶಂಗೈದನಂತರಂ ॥

ಬಂಗಾಜಲ ಸಾವಂತ ಮ
ನಂಗೆಳಸುವ ಚೌಟ ಮೂಲ ಕುಂಬಳೆ ಯಿವರಂ ।
ಭಂಗಿಸಿ ತದ್ಧರೆಯುಮನು
ತ್ತುಂಗಶ್ರೀಮಂಗಳೂರನುರೆ ಸಾಧಿಸಿದಂ ॥ ೫೪

ಇಂತು ಚೌಟ ಬಂಗಾಜಲ ಸಾವಂತ ಮೂಲ ಕುಂಬಳೆ ಕಾಸರಗೋಡ ಮನ್ನೆಯರ ಮುರಿದು ತತ್ತದ್ಧರಿತ್ರಿಯುಂ ವಶಗೈದು ಮಂಗಳೂರ ಸಂಸ್ಥಾನಮಂ ಸ್ವಾಧೀನಂಗೈದನಂತರಂ ಮೂಲಿಕೆ ಕೊಡೆಯಾಲ ಮೂಡಬಿದಿರೆ ಉಳ್ಳಾಲ ಕುಂಬಳೆ ಕಾಸರಗೋಡು ಪುದುವೆಟ್ಟು ಬೆಳ್ಳರೆ ಕಾಂತಮಂಗಲ ಬಂದ್ಯಡಕ ಕುಂಡಂಕುಳಿ ಕೊಲ್ಲೂರಬಾಚಿ ಶಿಶಿಲ ಚಂದ್ರಗಿರಿ ಕಿದುಟು ಮೂಡಗೊಡೆಯಾಲ ಫಣಿಯಾಲ ಮುಂತಾದ ಕೋಂಟೆಗಳಂ ಬಲಿಯಿಸಿದನಂತುಮಲ್ಲದೆಯುಂ ॥ ೫೫

ಕಡುಗಲಿಗಳೆನಿಸುವಗ್ಗದ
ಕೊಡಗರನೊಳಗೆನಿಸಿ ಸಾರ್ದು ಗೋರಾಷ್ಟ್ರದ ನಾ ।
ಲ್ಗಡೆಯಂ ಸಾಧಿಸಿ ಪಡುಗಡ
ಲೊಡೆಯಂ ತಾನೆನಿಸಿ ವೆಂಕಟೋರ್ವಿಪನೆಸೆದಂ ॥ ೫೬

ಮತ್ತಮದಲ್ಲದೆ ॥ ೫೭

ಚಾರುತುರಂಗಮಚಯಮದ
ವಾರಣಬಹುಪತ್ತಿವೆರಸುತಲ್ಲಿಂ ತೆರಳ್ದು ।
ಧೀರವೆಂಕಟನೃಪಾಲಂ
ಕೌಲಿಗ್ರಾಮಪ್ರದೇಶಮಂ ಪುಗೆ ಸಾರ್ದಂ ॥ ೫೮

ಇಂತು ಕೌಲಿಗ್ರಾಮಪ್ರದೇಶಮಂ ಸಾರ್ದು ಕೌಲಿದುರ್ಗಕ್ಕೆ ಮುತ್ತಿಗೆಯಿಕ್ಕಲಾ ಗ್ರಾಮಾಧಿಪತಿಗಳಪ್ಪ ತೋಲೆತಮ್ಮ ಮುಂಡಿಗೆತಮ್ಮರೆಂಬತಿಪರಾಕ್ರಮಶಾಲಿಗಳಪ್ಪಿರ್ವರ್ಸಹೋದರರಸಂಖ್ಯಾತಮಪ್ಪ ಮಂದಿಮಕ್ಕಳಂ ನೆರಹಿ ಮಾರ್ಮಲೆತು ಕೋಂಟೆಯಂ ಕಲಿಯೇರಿಸಿ ಪಲವು

ಮಾಸಂ ಕಾದಿಸಲ್, ಬಳಿಕ್ಕಂ ಜಕೀರಿರಸುತ್ತುಮುಸ್ತ್ಯದೆಯೊಳಪುಗ
ದಂತು ಪಥಪ್ರೈಕಕಂಡಿಕಣಿವೆಗಳಂ ಕಟ್ಟಿ ಕೋಟೆಯುಂ ಜೇರುಗೆಯ್ಯ್ಯ
ಲೊಳಗೆ ನಿತ್ತರಿಸಲಮ್ಮದೆ ಪೊರಗಣ್ಗೈದಿ ॥ ೫೯

ಛಲಪದಮಂ ಮೆರೆದತಿಭುಜ
ಬಲದಿಂ ಮಾರ್ಮಲೆತು ನಿಂದಿದಿರ್ಚಿದ ಬಲವ ।
ತ್ತೊತ್ತಲೆಮುಂಡಿಗೆಪಮ್ಮಾಖ್ಯೆಯು
ಮಲೆತರನುರೆಗೆಲ್ದು ಕೋಂಟೆಯುಂ ಸಾಧಿಸಿದಂ ॥ ೬೦

ಇಂತತ್ಯಂತಸಾಹಸದಿಂದಾಕೋಂಟೆಯುಂ ಕೊಂಡನಂತರಮಾ ಕೋಂಟೆಯುಂ ಬಲಿಸಿಯುದಕ್ಕೆ ಭುವನಗಿರಿಯದುರ್ಗಮೆಂದು ನಾಮಾಂಕಿತಮಂ ರಚಿಸಿ ಪಿಂತೆ ತಮ್ಮ ಜನಕ ದೊಡ್ಡಸಂಕಣನಾಯಕಂ ಕಾಶೀಕ್ಷೇತ್ರದಿಂ ತಂದ ದಿವ್ಯಲಿಂಗಮಂ ವಿಶ್ವೇಶ್ವರಲಿಂಗಮೆಂದಾಗಮವಿಧಾನದಿಂದಾಕೋಂಟೆಯೊಳ್ಪ್ರತಿಷ್ಠೆಯುಂ ರಚಿಸಿ ಶಿಲಾಮಯಮಾದ ದೇವಸ್ಥಾನಮಂ ಕಟ್ಟಿಸಿ ಭೂಸ್ವಾಸ್ಥ್ಯಮಂ ಧಾರೆಯನೆರೆದು ತತ್ಪೂಜಾವಿಭವಂಗಳಂ ನಡೆಯಿಸಿ ಮತ್ತಮಾದುರ್ಗದೊಳುಚಿತಸ್ಥಾನಂಗಳೊಳ್ ಪರಿವಾರದೇವತೆಗಳಂ ಪ್ರತಿಷ್ಠೆಗೈಸಿ ನಿಚ್ಚಂ ತದರ್ಚನೆ ನಡೆವಂತು ನಿಯಾಮಕಂಗೈದು ಮತ್ತಮಾ ಕೋಂಟೆಯೊಳುತ್ಕೃಷ್ಟಮಾದರಮನೆಯುಂ ಕಟ್ಟಿಸಿ ಭಂಡಾರ ಜಾನಶಾಲೆ ಯುಗ್ಮಾಣ ಪಣತಮಾನೆಯಮಹಲು ಕುದುರೆಯಲಾಯ ಮುಂತಾದ ಮಹಲುಗಳಂ ನಿರ್ಮಾಣಂಗೈಸಿ ಮತ್ತಮಾ ಕೋಂಟೆಯ ಪೊರಗಡೆಯೊಳ್ ಕಲ್ಯಾಣಮಹಲೆಂಬ ಬೆಟ್ಟದರಮನೆಯುಂ ಕಟ್ಟಿಸಿ, ಮತ್ತಮಗ್ರಹಾರ ಮಹತ್ತಿನಮಠ ಶೃಂಗೇರಿಮಠ ಪೇಟೆ ತಲಪಾರಗಟ್ಟೆ ಕೆರೆ ತೋಟ ಗದ್ದೆಗಳಂ ನಿರ್ಮಾಣಂಗೈಸಿ ತತ್ತತ್ಸ್ಥಾನಂಗಳೊಳ್ ಗ್ರಾಮಾಧಿದೇವತೆಗಳಂ ನೆಲೆಗೊಳಿಸಿ ಪೊರಗುಕ್ಕಡಮನೊಡ್ಡುಗಳಂ ಬಲಿಯಿಸಿ ರಚನೆಗೈಸಿದನಂತುಮಲ್ಲದೆಯುಂ ॥ ೬೧

ಹೆಗ್ಗಡೆ ಬಲ್ಲಾಳರ್ಕಳ
ಪೊಗ್ಗಳಮಂ ಮುರಿದು ಕೊಂಡು ತದ್ಭೂತಳಮಂ ।

ಬಗ್ಗದ ಮನ್ನೆಯುರದಟಂ
ಮಗ್ಗಿಸಿ ತತ್ಸದ್ಧರಿತ್ರಿಯುಂ ವಶಗೈದಂ ॥ ೬೦

ಮತ್ತಮದಲ್ಲದಾಯನೂರಗೌಡಂ ಪೊಸರೂರೊಳ್ಕೋಂಟೆಯುಂ ಮಾಡಿಕೊಂಡಿರಲಾ ಕೋಂಟೆಸೀಮೆಗಳಂ ತೆಗೆದುಕೊಂಡಾ ಕೋಂಟೆಯುಂ ಕೆಡಹಿ ಸಿದ್ಧೇಶ್ವರದೊಳ್ [1] ನವೀನಪರಿಷ್ಕರಣಮಂ ನಿರ್ಮಾಣಂಗೈಸಿದ ನಂತುಮಲ್ಲದೆಯುಂ ॥ ೬೩

ಹಿರಿಯಹನುಮೇಂದ್ರಸುತನಂ
ಪೊರೆವೆಡೆತೊರೆ ಗಾಜನೂರು ಸೀಮೊಗೆಯ ಸುವಿ ।
ಸ್ತರಮಾದ ಲಕ್ಕುವಳ್ಳಿಯ
ವರಕೋಂಟಾತ್ರಯಮನಾನೃಪಂ ವಶಗೈದಂ ॥ ೬೪

ಅದೆಂತೆಂದೊಡೆ, ತರಿಕೆರೆಯ ಹಿರಿಯಹನುಮಪ್ಪನಾಯಕನಸು ತರಿರ್ವರುಂ ತಂದೆ ಹಸುಗೆಗೆಯ್ದು ಕೊಟ್ಟಂತಿರದೆ ತಮ್ಮೊಳ್ವಾದಿಸಿ ಪೋಣರ್ದು ಕಿರಿಯಾತಂ ಕಡವೂರಂ ತೆಗೆದುಕೊಳಲ್ ಪಿರಿಯಾತನಿಕ್ಕೇ ರಿಗೆ ಬಿನ್ನೈಸಿ ಕಳುಪಲ್ ಚಿಕ್ಕಕಲ್ಲಪ್ಪನೆಂಬ ದಳವಾಯಿ ಸಂಗಡಂ ಸೈನ್ಯಮಂ ಕೂಡಿಸಿ ಕಳುಪಲಾ ಚಿಕ್ಕ ಕುಮಾರಂ ಬೇಲೂರ ವೆಂಕ ಟಾದ್ರಿನಾಯಕಮೈಸೂರವರ್ಚಿಕ್ಕನಾಯಕನಹಳ್ಳಿಯವರ್ಚಿಂತನಕಲ್ಲ ಪಸೀರದ ರಂಗಪ್ಪನಾಯಕಮರ್ಮಂತಾದವರ ಸೈನ್ಯಮಂ ಬರಿಸಿಕೊಂಡು ಹೇರಳಬಲಮಂ ಮಾಡಿಕೊಂಡಿದಿರ್ಚಿ ನಿಲಲ್, ಪಿರಿಯ ಕುಮಾರಂ ನಿತ್ತರಿಸಿ ನಿಲಲಶಕ್ಯಮಾಗಿ ಮತ್ತಮಿಕ್ಕೇರಿಗೆ ಬಿನ್ನೈಸಿ ಕಳುಪಲಾಗಳಾ ವೆಂಕಟಪ್ಪನಾಯಕಂ ಸೈನ್ಯಸಹಿತಂ ಇಕ್ಕೇರಿಯಿಂ ತಾನೆ ತೆರಳ್ದೈತರ ಲಾಗಳಾ ಪಿರಿಯ ಕುಮಾರನೆಳ್ತಂದು ಗಂಗೂರೆಡೆಯೊಳ್ಸಂಧಿಸಿ, ಸಿಮೊಗೆ ಗಾಜನೂರು ಲಕ್ಕುವಳ್ಳಿಯ ಸೀಮೆ ಕೋಂಟೆಗಳಂ ಕಾಣಿಕೆರೂಪಾ ಗಿತ್ತು ಮರೆವುಗಲಭಯಮಿತ್ತು ತುಂಗಭದ್ರಾನದಿಯನುತ್ತರಿಸಲಾವಾ ರ್ತೆಯಂ ಕೇಳ್ದು ಕಿರಿಯ ಕುಮಾರನ ಸಹಾಯಕ್ಕೆ ಬಂದವರ್ಧೈರ್ಯ

---

1 ಶಿವೇಶ್ವರದೊಳ್ (ಕ.)

ಯರ್ಗಂಗುಂದಿ ನಿತ್ತರಿಸಲಾರದೆ ಬಾಣಾವರಕ್ಕಾಗಿ ಪಲಾಯನಂಗೆಯ್ಯಲಾಗಳಾ ವೆಂಕಟಪ್ಪನಾಯಕಂ ಹಿರಿಯ ಲಿಂಗಣನಾಯಕನೆಂಬ ಧಳವಾಯಸಂಗಡಂ ಹೇರಳಬಲವಂ ತೆರಳ್ಚಿ ಕಳುಪಲಾತಂ ಕಡವೂರ ಕೋಟೆಯಂ ವೇಡೈಸಿ ತಳಸುರಂಗಗಳಂ ನಡೆಸಿ, ತತ್ಕೋಟೆಯಂ ತೆಗೆದುಕೊಳಲಾ ಕೋಟೆಯಂ ಹಿರಿಯ ಕುಮಾರಂಗಿತ್ತು ಮನ್ನಿಸಿ, ಮತ್ತಂ ಬಾಣಾವರಕ್ಕೈದುತಿರಲಾ ವಾರ್ತೆಯಂ ಕೇಳ್ದತ್ಯಂತಭಯೋದ್ರೇಕದಿಂ ಚಿಕ್ಕ ಕುಮಾರನೆಳ್ತಂದು ಮರೆವುಗಲವರಿರ್ವರ ವಿವಾದವಂ ತೀರ್ಚಿ ಮನಸ್ಸಂಕೋಚವಂ ಪರಿಹರಿಸಿ ಬುದ್ಧಿಮಾರ್ಗಂಗಳಂ ತಿಳುಪಿ, ಬಳಿಕವರ್ಗಳಿಂದನೇಕದ್ರವ್ಯಾಭರಣಾಂಬರವಸ್ತುವಾಹನಾದಿಗಳಂ ಸಂಗ್ರಹಿಸಿ ಪರಮಪ್ರಖ್ಯಾತಿಯಂ ಪಡೆದು ಮರಳ್ದನಂತುಮಲ್ಲದೆಯುಂ ॥ ೬೫

ವರರಾಯದುರ್ಗಬೇಲೂ
ರರಸರನೊಳಗೆನಿಸಿ ಹರಪುರಾಧೀಶ್ವರನಂ ।
ಘೊರೆದುರುತರಚಿಂತನಕ
ಲ್ಲರೆಯನನೆರ್ದೆಗೆಡಿಸಿ ಬಾಹುಬಲವಂ ಮೆರೆದಂ ॥ ೬೬

ಇಂತಾ ವೆಂಕಟಪ್ಪನಾಯಕಂ ಸೊದೆ ಬಿಳಗೆ ತರಿಕೆರೆ ಮುಂತಾದ ಮನ್ನೆಯರ್ಕಳೊಳ್ತಾನತ್ಯಂತ ಪ್ರಖ್ಯಾತಿಯಂ ಪಡೆದು ರಾಜ್ಯಮಂ ಪರಿಪಾಲಿಸುತ್ತುಂ ಸ್ವರಾಜ್ಯಪರಿಸ್ತರಣಂಗಳೊಳ್ ತತ್ತತ್ಸ್ಥಾನಂಗಳ್ಗುಚಿತಮಾದಧಿಕಾರಿಗಳಂ ನೆಲೆಗೊಳಿಸಿ ಕೋಂಟೆಗಳಂ ಬಲಿಸಿ ಜಕೀರಿರಸ್ತುಮುಸ್ತೈದೆಗಳಂ ಪೂರ್ಣವನಾಗಿಸಿ ತತ್ಪರಿಸ್ತರಣಂಗಳ ಯೋಗ್ಯತಾನುಸಾರವರಿತು ಪದಾತಿಗಳಂ ನೆಲೆಗೊಳಿಸಿದನಂತುಮಲ್ಲದೆಯುಂ ॥ ೬೭

ಕೆರೆ ಕಾಳ್ಪುರವಾರಾಮಂ
ವರಶಾಲಿ ಸಿತೇಕ್ಷು ಧಾನ್ಯಭೂಮಿಕೆ ಯೆಸೆವಾ ।
ಗರತೋಂಟಮಿವರ್ಗಳಿಂದೆಡೆ
ದೆರಪಿಲ್ಲದ ತೆರದೆ ಗೆಯ್ಮೆಗೊಳಿಸಿದನಿಳೆಯಂ ॥ ೬೮

ತರುವೆಲ್ಲಂ ಸುರಭೂಜಗಳ್ ಲತೆಗಳೆಲ್ಲಂ ದೇವತಾವಲ್ಲಿಗಳ್
ತೊರೆಯಲ್ಲಂ ಬರ್ದಿಲೇರುಗಳ್ಕರಿಗಳೆಲ್ಲಂ ದೇವಮಾತಂಗಗಳ್ ।
ಗಿರಿಯೆಲ್ಲಂ ರಜತಾದ್ರಿಗಳ್ ವನಜವೆಲ್ಲಂ ಪುಂಡರೀಕಂಗಳಾ
ಗಿರೆ ಪರ್ದಿತ್ತುರೆ ವೆಂಕಟೋರ್ವಿಪಯಶಂ ವಿಶ್ವಂಭರಾಚಕ್ರದೊಳ್ ॥ ೬೯

ಪಶುಗಳ್ಕಯ್ಗುಂದಿದುವೆಹಿ
ಝುಷಕಪಿಗಳಲ್ಲವಾದುದೆಡೆ ಪೂಗಚಯಂ ।
ನಸಿದುವು ಕೆಳದಿಯ ವೆಂಕಟ
ವಸುಧಾಧಿಪನೊಡನಿದಿರ್ಚಿದರಿಗಳ ದೆಸೆಯಿಂ ॥ ೭೦

ಇಂತು ಭುವನಜನಂ ನುತಿಸಲ್ಸದ್ಧರ್ಮದಿಂ ರಾಜ್ಯಪರಿಪಾಲನಂಗೈ
ದನಂತುಮಲ್ಲದೆಯುಂ ॥ ೭೧

ಕಾರಕಳದೊಡೆಯರೆನಿಸಿದ
ಭೈರಸವೊಡೆಯರ್ವಿರೋಧದಿಂ ವಿಲಸಚ್ಛೃಂ ।
ಗೇರಿಯ ಧರೆಯಂ ಕೊಂಡುರೆ
ಘೇರಿಸಿ ಮಾತ್ಸರ್ಯದಿಂದೆ ತತ್ಪುರವರಮಂ ॥ ೭೨

ಭೈರವನ ಬೆಟ್ಟದೆಡೆಯೊಳ್
ಭೂರಿಶತಘ್ನಿಗಳ ಪೂಡಿ ಬಲ್ಗುಂಡುಗಳಂ ।
ಪಾರಿಸಿ ಪುರಮಠಗಳ್ಗೂಡಿ
ಯೂರದೊಳಂಡಲೆದುಪದ್ರವಂಗಳನೆಸಗಲ್ ॥ ೭೩

ಇಂತೆಸಗಿದ ಭೈರಸವೊಡೆಯರ ಮದೋದ್ರೇಕಮಂ ಮುಗ್ಗಿಸಿ ಮು
ತ್ತಿಗೆದೆಗೆಸಿ ಬಳಿಕ್ಕವನತಿರೇಕದಿಂದಾಕ್ರಮಿಸಿದ ಭೂಮಿಯಂ ತೆಗೆದು
ಕೊಂಡು ಶೃಂಗಪುರದ ಸ್ವಾಮಿಗಳ್ಗಿತ್ತು ತನ್ಮಠದ ಧರ್ಮಕ್ಕೆ ತಾನುಂ
ಬೇರೆ ಶಿವಾರ್ಪಿತಮಾಗಿ ಭೂಸ್ವಾಸ್ಥ್ಯಮಂ ಧಾರೆಯನೆರೆದು ತನ್ಮಠಮಂ
ಜೀರ್ಣೋದ್ಧಾರಮಂ ರಚಿಸಿ, ಇಂತು ಶೃಂಗೇರಿಯ ಧರ್ಮಸಂಸ್ಥಾನ
ವನುದ್ಧರಿಸಿ ಪರಮಪ್ರಖ್ಯಾತಿಯಂ ಪಡೆದನಂತುಮಲ್ಲದಿಕ್ಕೇರಿಯ ಪುರ
ವರದ ಸಮೀಪದೊಳ್ ॥ ೭೪

ಭದ್ರಗುಣವೆಂಕಟೇಂದ್ರಂ
ಭದ್ರಪನಾಯಕನ ಪೆಸರೊಳೂಪ್ಪವವಿಲಸ ।
ದ್ಭದ್ರಪುರವೆಂಬ ಪೇಟೆಯ
ಭದ್ರವೆನಲ್ಬಹಳರಚನೆಗೆಯ್ಸಿದನನುವಿಂ ॥ ೨೫

ಇಂತಾ ವೆಂಕಟಪ್ಪನಾಯಕಂ ಭದ್ರರಾಜಪುರವೆಂಬ ಪೇಟೆಯಂ ಕಟ್ಟಿಸಿಯನಂತರಂ ಕೆಳದಿಯಿಕ್ಕೇರಿಪುರವರದ ಮಧ್ಯದೊಳ್ ತಮ್ಮ ಪಿತಾಮಹನ ಹೆಸರಲ್ಲಿ ಪೇಟೆ ಪಟ್ಟಣವಂ ಕಟ್ಟಿಸಿಯಾಪೊಳಲ್ಗೆ ಸದಾಶಿವಸಾಗರವೆಂದು ನಾಮಾಂಕಿತಂಗೈದನಂತುಮಲ್ಲದೆಯುಂ ॥ ೨೬

ಸಾಗರದ ಪೊಳಲೊಳಸವ ಮ
ಹಾಗಣಪತಿಯಂ ಪ್ರತಿಷ್ಠೆಯಂ ವಿರಚಿಸಿ ಚ ।
ನ್ನಾಗಿರೆ ತಟಾಕವಂ ತಾ
ನಾಗಿಸಿ ಬಳಿಯೊಳ್ಸ್ವಸೌಧವಂ ಕಟ್ಟಿಸಿದಂ ॥ ೨೭

ಚಂದಬನವೆಂಬ ಪೆಸರಿನ
ನಂದನವಂ ರಚನೆಗೊಳಿಸಿ ವೆಂಕಟನೃಪನಾ ।
ನಂದದೆ ಗಣಪತಿಯರ್ಚನೆ
ಗಂದುರುತರವಾದ ಭೂಮಿಯಂ ಕಲ್ಪಿಸಿದಂ ॥ ೨೮

ಮತ್ತಮದಲ್ಲದಾ ವೆಂಕಟಪ್ಪನಾಯಕಂ ತನ್ಮಹಾಗಣಪತಿದೇವರ್ಗೆ ಶಿಲಾಮಯವಾದ ದೇವಸ್ಥಾನಮಂ ನಿರ್ಮಾಣಂಗೈಸಿ ರಥೋತ್ಸವಾದಿ ಕಟ್ಟಲೆಗಳ್ನಡೆವಂತು ನಿಯಾಮಕಂಗೈಸಿ ಮತ್ತಮಾ ಸದಾಶಿವಸಾಗರದ ಬಳಿಯ ವರದಾನದೀತೀರದೊಳ್ ವಿಶ್ವೇಶ್ವರದೇವರಂ ಪ್ರತಿಷ್ಠೆಯಂ ರಚಿಸಿ ದೇವಾಲಯಮಂ ಕಟ್ಟಿಸಿ ಭೂಸ್ವಾಸ್ಥೆಯಂ ಬಿಡಿಸಿ ಮತ್ತಮಾ ನದೀತೀರದೊಳ್ ವಿಶ್ವನಾಥಪುರವೆಂಬಗ್ರಹಾರಮಂ ರಚಿಸಿ ವೃತ್ತಿಕ್ಷೇತ್ರನಿವೇಶನಂಗಳಂ ನಿಯಾಮಿಸಿ ಶ್ರೋತ್ರಿಯಬ್ರಾಹ್ಮಣರ್ಗೆ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ಗಣೇಶದೀಕ್ಷಿತರ ಕಯ್ಯಿಂ ವಾಜಪೇಯಯಾಗಮಂ ರಚಿಯಿಸಿ ಮತ್ತಮಾಸದಾಶಿವಸಾಗರದ ಪೊಳಲೊ

ಕ್ಕನೋಹರವಾದ ರಾಜಾಲಯಮಂ ನಿರ್ಮಾಣಂಗೈಸಿ ಮತ್ತಮಾಸದಾಶಿವಸಾಗರಕೆಳದಿಯಪ್ಪೊಳಲ ಮಧ್ಯದೊಳಸೆವ ಸಂಗಮೇಶ್ವರಮೆಂಬ ಗ್ರಾಮದೆಡೆಯೊಳ್ ಲೋಕಹಿತಾರ್ಥಮತ್ಯಂತಮನೋಹರವಾದ ತಟಾಕಮಂ ನಿರ್ಮಾಣಂಗೈಸಿದನಂತುಮಲ್ಲದೆಯುಂ ॥ ೭೯

ಆ ಕೆರೆಯ ಬಳಿಯೊಳನುಪಮ
ನಾಕೋದ್ಯಾನಕ್ಕೆ ತೊಣೆಯೆನಿಪ್ಪಾರಾಮಾ ।
ನೀಕಮನರಮನೆಯುಂ ಸೌ
ಖ್ಯಾಕರಕೇಳೀಸುಸೌಧಮಂ ರಚಿಯಿಸಿದಂ ॥ ೮೦

ಮತ್ತಮಾಸಂಗಮೇಶ್ವರದೆಡೆಯೊಳ್, ಶಾಲೀಕ್ಷೇತ್ರ ಪುಂಡ್ರೇಕ್ಷುವಾಟಿಗಳಂ ಕಲ್ಪಿಸಿ ಇಕ್ಕೇರಿಯಘೋರೇಶ್ವರದೇವರಹೋಬಳಿಯೆಂದ ಘೋರೇಶ್ವರದೇವರ ಪೂಜಾವೈಭವಾರ್ಥಮೀರಾರುಸಾಸಿರ ಪೊಂಗಳನೀವ ಸಿಸ್ತಿನ ಸೀಮೆಯುಂ ಪಿಂಗಡಿಸಿ, ಅದಕ್ಕುಚಿತಮಾದಧಿಕಾರಿಯುಂ ನೆಲೆಗೊಳಿಸಿ ಆಗಮೋಕ್ತವಿಧಾನದಿಂ ತದ್ದೇವತಾಪೂಜೆ ಕಾರ್ತಿಕದೀಪಾರಾಧನೆ ಮುಂತಾದ ಪೂಜೆಗಳಂ ನಡೆಸಿ ಕೆಳದಿರಾಮೇಶ್ವರದೇವರ್ಗಂ ವೀರಭದ್ರದೇವರ್ಗಂ ವಿಶೇಷಭೂಸ್ವಾಸ್ಥ್ಯಮಂ ಬಿಟ್ಟು ಪೂಜೆಗಳಂ ನಡೆಸಿ ರಾಮೇಶ್ವರದೇವರ ರಂಗಮಂಟಪಮಂ ಶಿಲಾಮಯಮನಾಗಿಸಿ ಮತ್ತಮಾ ಕೆಳದಿಯರಮನೆಯ ಸಮೀಪದೊಳ್ ಸಂಪೆಕಟ್ಟೆಯೆಂಬ ತಟಾಕಮಂ ಪುಷ್ಪವಾಟಿಗಳುಮಂ ನಿರ್ಮಾಣಂಗೈಸಿದನಂತುಮಲ್ಲದೆಯುಂ ॥ ೮೧

ಚಾರುತರತುಂಗಭದ್ರಾ
ತೀರಸಮೀಪದೊಳ್ ಮಾತೃನಾಮಾಂಕಿತದೊಳ್ ।
ವೀರಾಂಬಾಪುರಮೆಂಬ ಮ
ಹಾರಮ್ಯತರಾಗ್ರಹಾರಮಂ ವಿರಚಿಸಿದಂ ॥ ೮೨

ಇಂತು ತುಂಗಭದ್ರಾ ನದೀತೀರದೊಳ್ ಭೀಮನಕಟ್ಟೆಯೊಳ್ ವೀರಾಂಬಾಪುರಮೆಂಬಗ್ರಹಾರಮಂ ಕಟ್ಟಿಸಿ ಮತ್ತಂ ಭಾರಂಗಿಯೊಳ್ ಶರಾವತೀತೀರದೊಳ್ ಸ್ವಪತ್ನಿಯ ಪೆಸರೊಳಭಿನವವೀರಾಂಬಾಪುರ

ಮೆಂಬಗ್ರಹಾರಮುಮಂ ಕಟ್ಟಿಸಿ ವೃತ್ತಿಕ್ಷೇತ್ರನಿವೇಶನಂಗಳಂ ಕಲ್ಪಿಸಿ ಸದ್ಬ್ರಾಹ್ಮಣರ್ಗೆ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತನಂತುಮಲ್ಲದೆಯುಂ ॥ ೮೩

* ಬಾರಕೂರ್ಬೆಣ್ಣೆಹಳ್ಳಿಯು
ಮಾರಗ ಶಂಕರನಾರಾಯಣ ಸಾಗರ ಬೋ।
ಳೂರು ಕೊಡೆಯಾಲಗಳೊಳಮು
ದಾರ ಮಹತ್ತಿನ ಮಠಂಗಳಂ ಕಟ್ಟಿಸಿದಂ ॥ ೮೪

ಇಂತಿವು ಮುಂತಾದ ಸ್ಥಳಂಗಳೊಳ್ ಮಹತ್ತಿನ ಮಠಮುಮಂ ಕಟ್ಟಿಸಿ ಭೂಸ್ವಾಸ್ಥ್ಯಗಳಂ ಬಿಡಿಸಿ ಶಿವಜಂಗಮಾರ್ಥಂ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ಸುಖಮಿರುತ್ತುಮಿರಲ್ ತನ್ನ ಕಿರಿಯಯ್ಯ ಚಿಕ್ಕಸಂಕಣ್ಣನಾಯಕನ ಪುತ್ರನಾದ ಸಿದ್ದಪ್ಪನಾಯಕಂ ಶಿವಸಾಯುಜ್ಯಮನೈದಲತ್ಯಂತದುಃಖದಿಂ ಚಿತ್ತವಿಹ್ವಲನಾಗಿ ವೈರಾಗ್ಯಂ ಪುಟ್ಟಿ ಬಳಿಕ್ಕಾತ್ಮಜ್ಞಾನಾನುಸಂಧಾನೋಪಯುಕ್ತಮಾದಧ್ಯಾತ್ಮಶಾಸ್ತ್ರಂಗಳಂ ಸಕಲನೀತಿಶಾಸ್ತ್ರಂಗಳಂ ಕೇಳ್ದು ಬಳಿಕಂ ಪದ್ಮಪುರಾಣದುತ್ತರಖಂಡದೊಳ್ ಶ್ರೀಮತ್ಪರಮೇಶ್ವರಂ ರಾಮಭದ್ರಂಗುಪದೇಶಂಗೈದ ಪದಿನೆಂಟಧ್ಯಾಯಂಗಳುಳ್ಳ ಶಿವಗೀತೆಯಂ ಲೋಕೋಪಕಾರಾರ್ಥಮಾಗಿ ಕವಿತಿರುಮಲಭಟ್ಟರಿಂ ವಾರ್ಧಿಕಷಟ್ಪದಿಯೊಳ್ ಕರ್ಣಾಟಕಕಾವ್ಯಮನಾಗಿಸಿ, ಮತ್ತಮದಲ್ಲದಾ ಕವಿತಿರುಮಲಭಟ್ಟರಿಂ ಗೀರ್ವಾಣದೊಳ್ ಶಿವಾಷ್ಟಪದಿಯುಮಂ ರಚನೆಗೈಸಿ, ಮತ್ತಮದಲ್ಲದೆ ರಂಗನಾಥದೀಕ್ಷಿತನೆಂಬ ವಿದ್ವಾಂಸನಿಂ ತಂತ್ರಸಾರಮೆಂಬಾಗಮಗ್ರಂಥಕ್ಕೆ ವ್ಯಾಖ್ಯಾನಮಂಮಾಡಿಸಿ ದೇವತಾಸ್ವಪ್ನಸೂಚನಾಮೂಲದಿಂ ತನ್ನೆಡೆಗೈದಿದಶ್ವಪಂಡಿತರಮುಖದಿಂ ಮಾನಪ್ರಿಯಮೆಂಬ ಪೆಸರುಳ್ಳ ವಿಸ್ತಾರಮಾದಶ್ವಶಾಸ್ತ್ರಮಂ ಸಂಪಾದಿಸಿ ವರ್ತಿಸುತ್ತುಮಿರಲಾಕಾಲದೊಳ್, ವಿಶೇಷಬಿರುದನಾಂತುವರ್ತಿಸುತ್ತುಮಿರ್ದ ವಿಶಿಷ್ಟಾದ್ವೈತವಾದಸಮರ್ಥನಾದ ಚತುಶ್ಶಾಸ್ತ್ರಪಂಡಿತನೆನಿಪ್ಪ ರಾಮಾನುಜಶೃಂಗಿಮರ್ಯನೆಂಬೊರ್ವ[1] ವಿದ್ವಾಂಸಂ ಇಕ್ಕೇರಿಗೆ

1 ರಾಮಾನುಜಶೃಂಗಿಮೈಯ್ಯನಾದೊರ್ವ (ಬ)

ಬಂದು ತಮ್ಮಂ ಸಂಧಿಸಿ ಸಮೀಪದಲ್ಲಿ ವರ್ತಿಸುತ್ತುಮಿರಲಾಕಾಲದೊಳ್, ಕಾಶಿಯಿಂ ಭಟ್ಟೋಜಿದೀಕ್ಷಿತನೆಂಬ ಘಟಕವಿದ್ವಾಂಸನೈದಿರಲಾ ಭಟ್ಟೋಜಿದೀಕ್ಷಿತರ್ಗಂ ಆ ರಾಮಾನುಜಶೃಂಗಿಗಂ ವಿಶಿಷ್ಟಾದ್ವೈತಶುದ್ಧಾದ್ವೈತಶಾಸ್ತ್ರಂಗಳಲ್ಲಿ ಪ್ರಸಂಗಮಂ ಮಾಡಿಸಿ ಸಕಲವಿದ್ವಜ್ಜನಸಮ್ಮತಿಯಿಂದಾವಿಶಿಷ್ಟಾದ್ವೈತವಾದಸಮರ್ಥನಾದ ರಾಮಾನುಜಶೃಂಗಿಯ ಕಕ್ಷಿಯಂ ಖಂಡಿಸಿ ಮತ್ತಂ ಕೆಲವುಶಾಸ್ತ್ರಪ್ರಸಂಗಮುಖದಿಂದವನಂ ಸೋಲಿಸಿ ಅವನ ವಿಶೇಷಬಿರುದಂ ಕಳಚಿಸಿ ವಶಂಗೈದು ವಿಶಿಷ್ಟವೈದಿಕಾದ್ವೈತಸಿದ್ಧಾಂತಸ್ಥಾಪನಾಚಾರ್ಯನೆಂಬ ಬಿರುದಿನ ಪೊಗಳ್ಕೆಯಭಿಧಾನಮಂ ಸಂಪಾದಿಸಿದನಂತರಂ ತಮ್ಮ ಕಿರಿಯಯ್ಯ ಚಿಕ್ಕಸಂಕಣ್ಣನಾಯಕರ ಪೌತ್ರನಾದ ಶಿವಪ್ಪನಾಯಕಂಗೆ ದುರ್ಗದ ಪಟ್ಟಣಶೆಟ್ಟರ ಮಗಳು ಲಿಂಗಮ್ಮಾಜಿಯುವರು ಸೂರಿರಾಯನ ಬಸವಪ್ಪನ ತಂಗಿ ಶಾಂತಮ್ಮಾಜಿಯುವರು ಹೀಗೆ ಇರ್ವರ್ಕನ್ಯಾರತ್ನಂಗಳಂ ವಿವಾಹಮಂ ರಚಿಸಿ ತಚ್ಛಿವಪ್ಪನಾಯಕರ ಸಹೋದರನಾದ ಚಿಕ್ಕವೆಂಕಟಪ್ಪನಾಯಕಂಗೆ ವೀರವೊಡೆಯರ ಕುಮಾರಿಯಾದ ಮಲ್ಲಮ್ಮಾಜಿಯೆಂಬ ಪೆಣ್ಮಣಿಯನುದ್ವಾಹಮಂ ರಚಿಸಿ ॥ ೮೫

* ಸರಸಸಂಗೀತಲೋಲಂ
ನಿರುಪಮಕೌಶಲ್ಯವಿವಿಧಸಾಹಿತ್ಯವಿದಂ ।
ಸುರುಚಿರಸಕಲಕಲಾಸ
ತ್ಪರಿಣತನೆಂದೆನಿಸಿ ವೆಂಕಟೋರ್ವಿಪನೆಸೆದಂ ॥ ೮೬

ಮತ್ತಮದಲ್ಲದಾ ವೆಂಕಟಪ್ಪನಾಯಕಂ ಕೊಲ್ಲೂರ ಮೂಕಾಂಬಿಕೆಯಮ್ಮನವರ ದೇವಸ್ಥಾನಮಂ ವಿಸ್ತಾರವಾಗಿ ಶಿಲಾಮಯುವನಾಗಿಸಿ ವಿಶೇಷಭೂಸ್ವಾಸ್ಥ್ಯಯಂ ಬಿಡಿಸಿ ತತ್ಪೂಜಾವಿಭವಂಗಳಂ ಲೋಪವಾಗದಂತೆ ನಡೆಸಿ ತಾಂ ಸಾಧಿಸಿದ ಘಟ್ಟದ ಮೇಗಣ ಕೆಳಗಣ ಮಹಾದೇವತಾಸ್ಥಳಂಗಳೊಳ್ ಪ್ರತಿವರ್ಷಶ್ರಾವಣಮಾಸದೊಳ್ ವಿಶೇಷಗಟ್ಟಳೆಯಾಗಿ ಪೂಜೆ ಕಾರ್ತಿಕಮಾಸದೊಳ್ ಲಕ್ಷದೀಪಾರಾಧನೆ ರಥೋತ್ಸವಾದಿಕಟ್ಟಳೆಗಳ್ನಡೆವಂತು ನಿಯಾಮಕಂಗೈಸಿ, ಗುರುಲಿಂಗಜಂಗಮಾ

ದಿಪೂಜಾನಿರತನಾಗಿ, ಶೃಂಗೇರಿಯಧರ್ಮ ಬಾಳೆಹಳ್ಳಿಸಿಂಹಾಸನದಧರ್ಮ ಸ್ವರಾಷ್ಟ್ರಗಳೊಳ್ ನಾಲ್ಕಡೆಗಳೊಳುಳ್ಳ ಸನ್ಯಾಸಿಗಳ ಮಠ ಮಹತ್ತಿನಮಠಾಗ್ರಹಾರ ಕೊಡಗಿ ಮಾನ್ಯ ಉಂಬಳಿ ಉತ್ತಾರ ಪಳ್ಳಿದಾಸರಧರ್ಮ ಮುಂತಾದ ನಾನಾಧರ್ಮಂಗಳಂ ಸಮಗ್ರಮಾಗಿ ನಡೆಸಿ ಗಜತುರಗಪತ್ತಿರಾವುತಠಾಣ್ಯಪ್ರಜೆಪರಿವಾರನೆರೆಸೂವೆಂತಪುರಜನ ಪರಿಜನ ವಿದ್ವಜ್ಜನಾಶ್ರಿತಸೇವಕಜನಯಾಚಕಜನಮುಂತಾದಸಮಸ್ತಜನರ್ಕಳಂ ಸಂರಕ್ಷಿಸುತುಂ ವಿರಾಜಿಸುತ್ತಿರ್ದನಂತುಮಲ್ಲದೆಯುಂ ॥ ೮೭

ಶ್ರೀಮಚ್ಚೌಡಪವಂಶವರ್ಧನಕರಂ ಶತ್ರುಚ್ಛಟಾಭೀಕರಂ
ಸೋಮೇಶೋತ್ತಂಸಪದಯುಕ್ತಭಾಗ್ಯನಿಕರಂ ಗಾಂಭೀರ್ಯರತ್ನಾಕರಂ ।
ಕಾಮಾಕಾರನುದಗ್ರಪಾಯಕಕರಂ ಪೂರ್ಣಾನುಕಂಪಾಕರಂ
ಧೀಮಚ್ಛೇಖರನಾಳ್ದನೊಪ್ಪುವಿಳೆಯಂ ಶ್ರೀವೆಂಕಟೋರ್ವೀಶ್ವರಂ ॥ ೮೮

ಈ ವೆಂಕಟಪ್ಪನಾಯಕರ ಚಿತ್ರಭಾನುಸಂವತ್ಸರದ ಮಾರ್ಗಶಿರ ಶುದ್ಧ ೫ಯಾರಭ್ಯ ಶುಕ್ಲ ಸಂವತ್ಸರದ ಕಾರ್ತಿಕ ಬಹುಳ ೩ಂಯು ವರೆಗೆ ವರ್ಷ ೪೬ ತಿಂಗಳು ೧೧ ದಿನ ೨೬ ಪರ್ಯಂತಂ ರಾಜ್ಯವಾಳಿ ಐಕ್ಯವಾದರು *

ಪಂಚಮಾಶ್ವಾಸಂ ಸಂಪೂರ್ಣಂ



* ಇವರ ಕಾಲದಲ್ಲಿ ಖುದುಕಾರ್ಯಂ ಮಾಡಿದವರು: ಪ್ರಧಾನಿ ಚೌಡಪ್ಪಯ್ಯ, ಕರಣಿಕ ಅಣ್ಣಾಜಿವೆಂಕಟಯ್ಯ, ಅಣ್ಣಾಜಿ ತಿರುಮಲಯ್ಯ, ಕಲಿಸೆ ತಿಮ್ಮಪ್ಪಯ್ಯ, ಬಾಳಗಾರ ತಮ್ಮರಸಯ್ಯ, ಜೋಯಿಸ ತಿಮ್ಮಪ್ಪಯ್ಯ, ಬಿಳಿಗಿ ಗಿರಿಯಪ್ಪಯ್ಯ, ರಾಯಸದ ರಾಮಚಂದ್ರಯ್ಯ, ಚಿಕ್ಕರಸರ ಶಂಕರನಾರಣಯ್ಯ ಮಲ್ಲಪ್ಪನ ವೆಂಕಟಪ್ಪಯ್ಯ, ಯಲ್ಲಪ್ಪಯ್ಯ, ತಮ್ಮರಸಯ್ಯ, ನಿಯೋಗಿ ದಾಸಪ್ಪಯ್ಯ, ಸೀತಪ್ಪಯ್ಯ, ಬಿಳಿಗಿ ಕೃಷ್ಣಯ್ಯ, ನಿಸಾನಿ ಸಾಮರ್ಥಜಮವಜೀರರು(?) ದಳವಾಯಿಕಲ್ಲಪ್ಪ, ಸಿದ್ದಲಿಂಗಣ್ಣನಾಯಕ, ಯಲ್ಲಪ್ಪ, ತಮ್ಮರಸಯ್ಯ ಮುಂತಾದವರು. ( ಕ )

## ಷಷ್ಠಾಶ್ವಾಸಂ.



ವರ ಕೆಳದಿಯ ಚೌಡಮಹೀ
ಶ್ವರನ ಸುತಂ ವರಸದಾಶಿವೋರ್ವೀಪಾಲಂ ।
ಧುರಧೀರತತ್ಸದಾಶಿವ
ಧರಣೀಶ್ವರವರ್ಯಗೋತ್ರಸಂಭವರಿರ್ವರ್ ॥ ೧
ಪಿರಿಯಂ ಸಂಕಣಭೂಪಂ
ಕಿರಿಯಾತಂ ಚಿಕ್ಕಸಂಕಣೋರ್ವೀಪತಿಯಾ ।
* ಪಿರಿಯಸಂಕಣಧರಾಧೀ
ಶ್ವರಗಿರ್ವರ್ತನುಜರ್ಕಳಿಹಿಮಧಾಮನಿಭರ್ ॥ ೨
ಅವರಿರ್ವರೊಳಂ ಪಿರಿಯಂ
ಭುವನೈಕಪ್ರಥಿತರಾಮರಾಜನೃಪಾಲಂ ।
ಅವಿರಳವಿಕ್ರಮತತ್ಸಹ
ಭವನವನೀನಾಥತಿಲಕವೆಂಕಟಭೂಪಂ ॥ ೩
ಆ ವೆಂಕಟನೃಪನ ಸುತಂ
ಭೂವಿನುತಂ ಭದ್ರಭೂಪನಾತನ ತನುಜಂ ।
ಶ್ರೀವೀರಭದ್ರನೃಪನಿವ
ರಾ ವರಸಂಕಣನೃಪಾಲವಂಶಜರಾದರ್ ॥ ೪
ಅರಿವೆಂತಿಸ್ಫುರೆವೆಂ ನೃಪ
ವರನೆನಿಸುವ ಪಿರಿಯಸಂಕಣೋರ್ವೀಪನ ಸಹೋ ।
ದರನೆನಿಪ ಚಿಕ್ಕಸಂಕಣ
ಧರಣೀಶನ ವಿತತವಂಶಪಾರಂಪರೆಯಂ ॥ ೫

---

1 ಈ ವಂಶಾವಳಿಯನ್ನು ತಿಳಿಸತಕ್ಕ ಹದಿಮೂರು ಕಂದಪದ್ಯಗಳು ಓಲೆಯ ಪುಸ್ತಕದಲ್ಲಿಲ್ಲ.

ದೊರೆಚಿಕ್ಕಸಂಕಣೋರ್ವೀ
ಶ್ವರಪುತ್ರಂ ಸಿದ್ಧಪ್ಪೋರ್ವೀಪಂ ತತ್ತನುಜಂ ।
ಮೆರೆವ ಶಿವನೃಪತಿ ತತ್ಸೋ
ದರನುರುವೆಂಕಟನೃಪಾಲನರಿಕುಲಕಾಲಂ ॥ ೬

ಆ ಶಿವನೃಪನ ತನೂಜಂ
ಭಾಸುರಗುಣಭದ್ರಭೂಮಿಪಂ ತದನುಜನಾ ।
ಶ್ರೀಸೋಮಶೇಖರೇಂದ್ರನು
ಹೀಶಂ ತತ್ಪತ್ನಿ ಚನ್ನಮಾಂಬಿಕೆ ತಿಳಿಯಲ್ ॥ ೭

* ಅರಿವೊಡಾ ಸೋಮಶೇಖರ
ವರನೃಪತಿಯ ಪತ್ನಿ ಚನ್ನಮಾಂಬಿಕೆಯೊರ್ವಳ್ ।
ಧರೆಯರಿಯೆ ತದ್ಗೃಹೀತಂ
ಮರಿಯಪಕುವರಿಯೊಳುದಿಸಿದ ಬಸವಮಹೀಪಂ ॥ ೮

ಮೆರೆವಾ ಬಸವನೃಪಾಗ್ರೇ
ಶ್ವರಗಿರ್ವರ್ಪುತ್ರರವರೊಳಂ ಪಿರಿಯಾತಂ ।
ವರಸೋಮಶೇಖರೇಂದ್ರಂ
ಕಿರಿಯಮಗಂ ವೀರಭದ್ರನಾಯಕನೆನಿಪಂ ॥ ೯

ಆ ವೀರಭದ್ರಪಾಖ್ಯಮ
ಹೀವಿಭುವಿನ ಸೂನು ಬಸವಭೂಮಿಪನೆನಿಪಂ ।
ಆ ವರಬಸವೇಂದ್ರನ ಸತಿ
ಭಾವಿಸೆ ತಾಂ ಚನ್ನವೀರಮಾಂಬಿಕೆಯೆನಿಪಳ್ ॥ ೧೦

ಪರಿಕಿಪೊಡೆ ತದ್ಗೃಹೀತಂ
ಸುರುಚಿರಗೀರ್ವಾಣಮಂತ್ರಿಯಾತ್ಮಜನೆನಿಪಾ ।
ಗುರವೇಂದ್ರನ ಸುಕುಮಾರಂ
ಧರಣಿಪಮಣಿ ಚನ್ನಬಸವಭೂಮಿಪನೆನಿಪಂ ॥ ೧೧

ಆತನನಂತರವುತಿವಿ
ಖ್ಯಾತಶ್ರೀಚನ್ನವೀರಮ್ಮಾಂಬಿಕೆಯಿಂದಂ ।
ಭೂತಳವರಿಯಲ್ಕಾದಗ್ರ
ಹೀತನದಾರೆನಲು ಪೇಳ್ವೆನನುನಯದಿಂದಂ ॥ ೧೨

ಧರೆಯೊಳಗತಿಶಯಬಂಕಾ
ಪುರದುಜ್ಜ್ವಲಚನ್ನವೀರಪನ ಸುಕುಮಾರಂ ।
ಧುರಧೀರಸೋಮಶೇಖರ
ಧರಣೀಶ್ವರವರ್ಯನಮರಗಿರಿನಿಭಧೈರ್ಯಂ ॥ ೧೩

---

ಆ ಹಿರಿಯವೆಂಕಟಪ್ಪನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷ ೧೫೫೦ನೆಯ ಶುಕ್ಲ ಸಂವತ್ಸರದ ಮಾರ್ಗಶಿರ ಶುದ್ಧ ೧ಯಲ್ಲಿ ವೆಂಕಟಪ್ಪನಾಯಕರ ಪೌತ್ರರಾದ ವೀರಭದ್ರನಾಯಕರ್ಗೆ ಇಕ್ಕೇರಿಯ ಅರಮನೆಯಲ್ಲಿ ರಾಜಪಟ್ಟಂ [1]

ವರವೆಂಕಟಭೂಪನನಂ
ತರದೊಳ್ತತ್ಪೌತ್ರನಧಿಕಪುಣ್ಯಚರಿತ್ರಂ ।
ನೆರೆ ವೀರಭದ್ರನಾಯಕ
ನರಿಹಿಮಕರರಾಹು ರಾಜ್ಯರಮೆಗರಸಾದಂ ॥ ೧೪

---

1 ಈ ವೀರಭದ್ರನಾಯಕರು ತಮಗೆ ರಾಜಪಟ್ಟವಾದ ಮೇಲೆ ಶಕವರ್ಷ ೧೫೬೦ನೆಯ ಈಶ್ವರ ಸಂವತ್ಸರದ ಪುಷ್ಯ ಬಹುಳ ೧೧ ಯ ವರೆಗೆ ವರ್ಷ ೮ ದಿನ೨೫ ಪರ್ಯಂತಂ ಇಕ್ಕೇರಿಯಲ್ಲಿ ರಾಜ್ಯವಾಳಿದ ಮೇಲೆ ಇಕ್ಕೇರಿಯಿಂದ ತೆರಳಿ ಭುವನಗಿರಿಯ ದುರ್ಗಕ್ಕೆ ಬಂದು ನಿಂದು ಮತ್ತಮಾ ಭುವನಗಿರಿಯ ದುರ್ಗದಿಂ ತೆರಳ್ದು ಶಾಲಿವಾಹನ ಶಕ ೧೫೬೧ನೆಯ ಬಹುಧಾನ್ಯ ಸಂವತ್ಸರದ ವೈಶಾಖ ಶುದ್ಧದಲ್ಲಿ ವೇಣುಪುರದರಮನೆಗೆ ಬಂದು ನೆಲೆಯಾಗಿ ನಿಂದು ಆಮೇಲೆ ವರ್ಷ ೩ ತಿಂಗಳು ೩ ಪರ್ಯಂತಂ ರಾಜ್ಯವಾಳಿದರಿಂತು ತಮಗೆ ರಾಜಪಟ್ಟವಾದ ಶುಕ್ಲ ಸಂವತ್ಸರದ ಮಾರ್ಗಶಿರ ಶುದ್ಧ ೧ಯಾರಭ್ಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ೧೧ಯ ವರೆಗೆ ವರ್ಷ ೧೬ ದಿವಸ ೧೧ ಪರ್ಯಂತಂ ಸುಖದಿಂ ರಾಜ್ಯಪರಿಪಾಲನಂಗೈದರಾವಿವರಣಮಂ ಪದ್ಯರೂಪದಿಂ ಪೇಳ್ವೆನದೆಂತೆಂದೊಡೆ (ಕ, ಬ.)

ಮತ್ತಮಾ ವೀರಭದ್ರನಾಯಕಂ ತನ್ನ ತಂದೆ ಭದ್ರಪ್ಪನಾಯಕನ ಹಿರಿಯಪ್ಪ ರಾಮರಾಜನಾಯಕನ ಪುತ್ರರಾದ ವೀರಪ್ಪೊಡೆಯ ರ್ಬಸವಲಿಂಗನಾಯಕರಂ ಚಿಕ್ಕಸಂಕಣ್ಣನಾಯಕರ ಪೌತ್ರರಾದ, ಸಿದ್ದಪ್ಪನಾಯಕರ ಪುತ್ರರಾದ, ವಾವೆಯಿಂ ತಮಗೆ ಚಿಕ್ಕಪ್ಪಂದಿರಾದ ಶಿವಪ್ಪನಾಯಕ ವೆಂಕಟಪ್ಪನಾಯಕರುಮಂ, ಮೈದುನ ಸದಾಶಿವಯ್ಯನುಮಂ ತತ್ಪುತ್ರ ಭದ್ರಯ್ಯ ವೆಂಕಟಯ್ಯನುಮನತ್ಯಂತಪ್ರೀತಿಯಿಂ ನಡೆಸಿಕೊಳುತ್ತುಂ, [1] ರಾಜ್ಯಂಗೆಯ್ಯುತಿರ್ದವಸರದೊಳ್ ॥ ೧೫

* ಸ್ವಾರಿಮಾರ್ಗದೊಳ್ ತಾಸಿ
ಕ್ಕೇರಿಯ ಪೊಳಲಿಂ ತೆರಳ್ದು ಪೊಕ್ಕಾರಗವಂ ।
* ವೀರಭದ್ರಾವನೀಶ್ವರ
ನಾರಾಜಿಪ ತೀರ್ಥರಾಜಪುರಮಂ ಸಾರ್ದಂ ॥ ೧೬

ಮೆರೆವಾ ಪುಣ್ಯಕ್ಷೇತ್ರದೊ
ಳುರೆ ಶೋಭಿಸುತಿರ್ಪ ದಿವ್ಯತುಂಗಾತಟದೊ ।
ಳ್ಪರಮಾನಂದದೆ ವಿಹರಿಸು
ತಿರುತಿರೆ ತನ್ನ ಪ್ರತಿಯಿತ್ತಮಿಕ್ಕೇರಿಯೊಳಂ ॥ ೧೭

ಭಾವಿಸಲಾ ಮೃತ್ಯುಂಜಯ
ದೇವುಗಳಂ (?) ಪರಮಕುಹಕಿ ಲಕ್ಷ್ಮೀಪತಿಯುಂ ।
ಸೇವಕನಿಕರಾಧಮ ಗ
ರ್ವಾವಿಷ್ಕೃತ ಶಾಣದಾರತಿಮ್ಮಣನಿನಿಬರ್ ॥ ೧೮

ನೆನೆದುರುಕುಮಂತ್ರಮಂ ಕಾ
ಪಿನೊಳಿರುತಿಹ ರಾಮರಾಜಭೂಪನ ವರನಂ ।
ದನಗೆಸೆವ ರಾಜಪಟ್ಟವ
ನನುನಯದಿಂ ಕಟ್ಟಿ ನಡೆಸಿಕೊಳುತಿರಲಿತ್ತಂ ॥ ೧೯

---

1 ರಾಜ್ಯವುಂ ಗೈದು ಸದಾಶಿವಯ್ಯನುವುಂ ಆತನ ಮಕ್ಕಳು ತಮಗೆ ಸೋದರಳಿಯಂದಿರಾದ ವೆಂಕಟಯ್ಯ ಭದ್ರಯ್ಯನು ಸಹ ಅಂಕೆಯುವ್ವಾಲೆ ಇಟ್ಟುಕೊಂಡು ಇರ್ದವಸರದೊಳ್ (ಕ)

ಧರಣೀಶಾಗ್ರಣಿ ವೀರಭದ್ರನೃಪನನಂದೀವಾರ್ತೆಯಂ ಕೇಳ್ದು ತಾಂ
ಭರದಿಂ ಕೌಲಿಯದುರ್ಗಕೈದಿ ಗಡಮಂ ಸ್ವಾಧೀನಮಂ ಮಾಡಿಕೊಂ |
ಡಿರದಲ್ಲಿಂದೆ ತೆರಳ್ದನಂದಪುರಮಂ ಪೊಕ್ಕೊಪ್ಪುವಾ ಕೋಂಟೆಯು
ಳ್ಳಿರುತಿರ್ದಂ ನೃಪತಿತ್ವಮಿಂತುಭಯರೂಪಾಗಲ್ಕ್ವಚಿತ್ಕಾಲದೊಳ್ ||೨೦

ಇಂತು ದೊರೆತನಮೆರಡಾಗಿ ನಡೆಯುತ್ತುಮಿರಲ್, ತರುವಾಯ ತ್ರಿಮಾಸಂ ಸಲಲಿಕ್ಕೇರಿಯೊಳಾಳುತಿರ್ಪ ವಿರಪ್ರೊಡೆಯರ್ದೈವವಶದಿಂ ಶಿವಸಾಯುಜ್ಯಮಂ ಪಡೆಯಲೀವಾರ್ತೆಯಂ ಕೇಳ್ದು ವೀರಭದ್ರನಾಯಕನಾನಂದಪುರದಿಂದೆಳ್ತಪ್ಪನಿತರೊಳಾ ವೀರಭದ್ರನಾಯಕರ ಮೈದುನ ಸದಾಶಿವನಾಯಕಂ ತನಗೆ ರಾಜಪಟ್ಟಮಾಗಬೇಕೆಂಬಭಿಲಾಷೆಯಿಂ ಮುಂದುವರಿದು ವೀರಪ್ರೊಡೆಯರ ಸಹೋದರಬಸವಲಿಂಗನಾಯಕನನಂಗವಿಕಲನಂಮಾಡಿ ತಾಂ ಪಟ್ಟಕ್ಕೆ ಕುಳ್ಳಿರ್ಪನಿತರೊಳ್, ವೀರಭದ್ರನಾಯಕಂ ಸೈನ್ಯಂವೆರಸತಿಶೀಘ್ರದಿಂದೊದಗಿಬರಲತ್ಯಂತಭಯೋದ್ರೇಕದಿಂ ಮೈದುನ ಸದಾಶಿವಯ್ಯಂ ನಿತ್ತರಿಸಲಮ್ಮದಲ್ಲಿಂಪಲಾಯನಂಬಡೆದು ಸೋದೆಯುವರಂ ಸೇರ್ದಿರುತ್ತುಮಿರಲ್ವೀರಭದ್ರನಾಯಕನಾಸದಾಶಿವನಾಯಕನಂ ಕಳುಪಲೆಂದು ಪೇಳಿಕಳುಪಲ್, ಸೋದೆಬಿಳಿಗಿಯುವರೊಂದಾಗಿ ಸದಾಶಿವಯ್ಯನಂ ಕೊಡದಿರಲಾಗಳಾವೀರಭದ್ರನಾಯಕನತ್ಯಂತಕೋಪಾಟೋಪದಿಂ ಸೈನ್ಯಸಮೇತನಾಗಿ ತಾನೇ ತೆರಳಲ್ ಕ್ವಚಿತ್ಕಾಲದೊಳಾಸದಾಶಿವಯ್ಯಂ ವಿಧಿವಶದಿಂದಲ್ಲಿಯೆ ಶಿವಾಧೀನಮಾಗಲೊಡನಾವೀರಭದ್ರನಾಯಕಂ ||೨೧

ಸೋದೆಬಿಳಿಗಿಯ ನೃಪಾಲರ
ಮೇದಿನಿಯಂ ಕೊಂಡು ತತ್ಪರಿಸ್ತರಣಗಳಂ |
ಸ್ವಾಧೀನಂಗೈದು ಬಳಿ
ಕ್ಕಾದೊರೆಗಳನಾಜಿರಂಗದೊಳ್ನರೆ ಮುರಿದಂ || ೨೨
ವರವೀರಭದ್ರನೃಪಭಾ
ಸ್ಕರನತಿಶಯಶೌರ್ಯಪಾದಮೊದೆದೊದೆದು ವಿಜಾ |
ಪುರಕೆಬ್ಬಟ್ಟಿದುದು ಸುಧಾ
ಪುರಬಿಳಿಗಿಯ ದೊರೆಗಳೆಂಬ ತಿಮಿರೋತ್ಕರಮಂ || ೨೩

ಇಂತಾ ವೀರಭದ್ರನಾಯಕಂ ಸೋದೆಬಿಳಗಿಯ ದೊರೆಗಳದಟಂ ಮುರಿದವರ ರಾಜ್ಯಪರಿಸ್ತರಣಂಗಳಂ ಕಟ್ಟಿಕೊಳಲವರ್ ವಿಜಾಪುರಕ್ಕೈದಿ ಪಾತುಶಾಹನಂ ಸಂಧಿಸಿ ವೀರಭದ್ರನಾಯಕನ ಮೇಲಣ ಕೋಂಡೆಯಂಗಳಂ ಪೇಳ್ದು ಕುಮಂತ್ರಮಂ ಬೋಧಿಸಿ ಕಿಮಿಗೆಡಿಸಿ ದೂರುತ್ತು ಮಿಂತೆಂದರ್ ॥ ೨೦೪

ಅಳಿಯಸದಾಶಿವನಾಯಕ
ನಳವಂ ಮುರಿದೊಪ್ಪುವೆಮ್ಮ ಕೋಟೆಗಳಂ ಕೊಂ ।
ಡಿಳೆಯಂ ಕವರ್ದು ನಿಮ್ಮ
ಗ್ಗಳವಂ ಲೆಕ್ಕಿಸದೆ ಮೀರಿ ನಡೆಯುತ್ತಿರ್ಪಂ ॥ ೨೦೫

ಇಂತು ಬಹುವಿಧಕುಬೋಧೆಗಳಂ ತುಂಬಿ ವಿಜಾಪುರಾಧಿರಾಜನ ಮನವಂ ಸಂತಸಗೆಡಿಸಿ ಬಳಿಕ್ಕವನಂತಃಕರಣಕ್ಕೆ ಖತಿಯಂ ಪುಟ್ಟಿಸುತ್ತುಂ ॥ ೨೦೬

ಮರಳ್ದು ಸದಾಶಿವಯ್ಯನ
ತರುಣಂಗಿಕ್ಕೇರಿಯಲ್ಲಿ ಪಟ್ಟವನನುವಿಂ ।
ದಿರದಾಗಿಸಿ ತಮ್ಮ ಪರಿ
ಸ್ತರಣಗಳಂ ಕೊಡಿಸಬೇಹುದೆಂದೀತೆರದಿಂ ॥ ೨೦೭

ಅಡಿವಿಡಿದು ಪಾತುಶಾಹನ
ನೊಡವಡಿಸಿ ಸಹಾಯಕುರುತುರುಷ್ಕರ ಫೌಜಂ ।
ಬಡಗೊಂಡು ಬರ್ಪನಿತರೊ
ಳ್ಕಡುಗಲಿಭದ್ರೇಂದ್ರಸೂನುವರಿದೀಕಥೆಯಂ ॥ ೨೦೮

ಇಂತು ಸೋದೆಬಿಳಗಿಯವರ್ಪಾತುಶಾಹನಂ ಕಿಮಿಗೆಡಿಸಿ ಹೇರಳವಾದ ತುರುಷ್ಕಸೈನ್ಯವನೊಡಗೊಂಡು ಬರಲುದ್ಯುಕ್ತರಾಗಿರ್ಪರೆಂಬ ವಾರ್ತೆಯಂ ವೀರಭದ್ರನಾಯಕಂ ಕೇಳ್ದು ರಾಯಸದ ಶಂಕರನಾರಣಯ್ಯನೆಂಬ ನಿಯೋಗಿಯಂ ವಿಜಾಪುರಕ್ಕೆ ಕಳುಹಿ ಮುರಾರಿಪಂತ

ನೆಂಬ ಮಂತ್ರಿಯ ಮುಖದಿಂ ಪಾತುಶಾಹಂಗೆ ತಮ್ಮ ಸಂಸ್ಥಾನದ ಸಕಲಪೂರ್ವೋತ್ತರವೃತ್ತಾಂತಂಗಳಂ ತಿಳುಪಲ್ಕೇಳ್ದು ಪರಮಪರಿತೋಷಂಬಟ್ಟು ಸೈನ್ಯಮಂ ತೆರಳ್ಚುವ ಬುದ್ಧಿಯಂ ಮಾಣ್ದು ಸೋದೆಬಿಳಿಗಿಯವರ್ಕುಹಕಿಗಳ್ತಮ್ಮ ಪರಿಸ್ತರಣಂಗಳ್ಗೀದ ಸಂಕಟಕ್ಕೆಳ್ಕೆಸುಗಂ ದುರ್ಬೋಧೆಯಂ ಬೋಧಿಸುತಿರ್ಪರಿಕ್ಕೇರಿಯ ದೊರೆತನಕ್ಕೆ ವೀರಭದ್ರನಾಯಕನೆ ಸಲ್ವನೆಂಬುದಂ ದೃಢಮಾಗಿ ನಿರ್ಧರಿಸಿ ರಾಯಸದ ಶಂಕರನಾರಣಯ್ಯಂಗೆ ಶರಜಾರಾಯನೆಂದು ಪೆಸರಿತ್ತು ಚಿತ್ರಮಾದುಡುಗೊರೆವೀಳ್ಯಂಗಳನಿತ್ತು ತನ್ನೆಡೆಗೈದಿ ಬಹುಪ್ರಕಾರದೈನ್ಯೋಕ್ತಿಗಳಿಂ ಪೇಳಿಕೊಂಡರೆಂಬುದಕೆಳ್ಕೆಸುಗಂ ಸೋದೆಬಿಳಿಗಿಯವರ ರಾಜ್ಯಪರಿಸ್ತರಣಂಗಳನವರ್ಗೆ ಕೊಡಿಸುವುದೆಂದು ನಿಯಾಮಿಸಿ ವೀರಭದ್ರನಾಯಕನ ಪ್ರಾಮಾಣಿಕತ್ವಕ್ಕಂ ಭುಜಬಲಪ್ರತಾಪಾತಿಶಯಂಗಳ್ಗಂ ಮೆಚ್ಚಿ ಹಸುರುಸತ್ತಿಗೆನಿಶಾನಿ[1] ಮುಂತಾದ ಬಿರುದುಗಳುಮಂ ಮತ್ತಮನೇಕಮಾದಂಗೋಚಿತಾಭರಣಾಂಬರಂಮೊದಲಾದುಡುಗೊರೆಗಳುಮನಿತ್ತು ಕಳುಪಲ್, ವೀರಭದ್ರನಾಯಕನತ್ಯಂತಸಂತೋಷದಿಂದಾಬಿರುದುಗಳನಂಗೀಕರಿಸಿ ಸೋದೆಬಿಳಿಗಿಯವರ ರಾಜ್ಯಪರಿಸ್ತರಣಂಗಳನವರ್ಗಿತ್ತು ಬಳಿಕಂ ಬಿಳಿಗಿಯ ಘಂಟೆಯೊಡೆಯರ ಪುತ್ರಿ ಘಂಟೆಯಮ್ಮನಂ ಸದಾಶಿವಯ್ಯನಪುತ್ರನಾದಳಿಯಭದ್ರಯ್ಯಂಗತ್ಯಂತಸಂಭ್ರಮದಿಂ ವಿವಾಹಮಂ ರಚಿಯಿಸಿ ಸುಖದಿಂ ರಾಜ್ಯಂಗೆಯ್ಯುತ್ತುಮಿರಲ್ಕೆ ಮತ್ತಮೊಂದವಸರದೊಳ್ ॥ ೨೯

ಮೆರೆವ ತರೀಕೆರೆಯಾಣ್ಮಂ
ವರಬಾಣಾವರದ ದುಷ್ಟವೆಂಕಟಪತಿಪೇ ।
* ಳ್ದುರುಕುಮಂತ್ರಕ್ಕೆಯೊಡವ
ಟ್ಟುರದೈದಿಸಿ ಪಾತುಶಾಹಸೈನ್ಯೋತ್ಕರಮಂ ॥ ೩೦

ರಣದುಲಖಾನನ ಮುಖದಿಂ
ದಣಿಯರಮಿಕ್ಕೇರಿಮುಖ್ಯರಾಜ್ಯವನೆಲ್ಲಂ ।

---

1 ವಹಿಲೆ ಮಾಯಿ ಮಾರ್ತಬಿ ಮುಂತಾದ (ಕ)

ಕ್ಷಣದೆ ಪುಡಿಗೈಸೆ ತನ್ನೃಪ
ಮಣಿ ಕೌಲಿಯದುರ್ಗಮಂ ದಲಂದುರೆ ಸಾರ್ದಂ ॥ ೩೧

ಇಂತು ರಣದುಲ್ಲಾಖಾನನ ದಾಳಿಯಿಂ ಶಾಲಿವಾಹನ ಶಕ ವರ್ಷ ೧೫೬೦ನೆಯ ಈಶ್ವರ ಸಂವತ್ಸರದ ಪುಷ್ಯ ಬಹುಳ ದಶಮಿಯ ದಿವಸದೊಳಿಕ್ಕೇರಿಯ ಪತ್ತನಂ ವಿಸ್ಖಲಿತಮಾಗಲಲ್ಲಿ ನಿತ್ತರಿಸಲಮ್ಮದೆ ವೀರಭದ್ರನಾಯಕಂ ಸ್ವಕುಟುಂಬವೆರಸು ಭುವನಗಿರಿಯ ದುರ್ಗವನೈದಿ ಪೊಗಳೊಡನಾರಣದುಲ್ಲಾಖಾನಂ ಕೆಂಗೆಯ ಹನುಮನಾಯಕನ ಸೈನ್ಯಂವೆರಸು ತಾನೈತಂದು ಭುವನಗಿರಿಯ ದುರ್ಗಮಂ ವೇಷ್ಟೈಸಲ್ ದೈವವಶದಿಂದಪಾಯದೊಳ್ ಬಂದ ಬವರದೊಳ್ ಧೈರ್ಯಂಗುಂದದೆಂತಾದೊಡಂ ನಿತ್ತರಿಸಿ ನಿಂದು ತಾನುಳಿದು ಮುಂದೆ ಕಾಲಸಾಧನೆಯಂ ಮಾಡಿ ಶತ್ರುವಂ ಮುರಿದು ಮಹಾಕಾರ್ಯಮಂ ಸಾಧಿಸಬೇಕೆಂಬ ರಾಜನೀತಿಯಂ ನಿಶ್ಚಯಿಸಿಯುಚಿತರಪ್ಪ ನಿಯೋಗಿಗಳ ಮುಖದಿಂದಾರಣದುಲ್ಲಾಖಾನನಂ ತಿಳುಹಿ ಸಂಧಾನವನೊಡರ್ಚಿಸಿ ॥ ೩೨

ಆ ನರನಾಥಂ ರಣದುಲ
ಖಾನನ ಪಿಂದೆಗೆಸಿ ವೇಣುಪುರದೊಳ್ನಿಂದೀ ।
ಶಾನಪದಕಮಲಮಧುಕರ
ನಾನಂದದೊಳಖಿಲರಾಜ್ಯಮಂ ಪಾಲಿಸಿದಂ ॥ ೩೩

ಇಂತಾ ವೀರಭದ್ರನಾಯಕಂ ರಾಜನೀತಿಮಾರ್ಗಮಿಡಿದು ಸಂಧಾನಮುಖದಿಂ ರಣದುಲ್ಲಾಖಾನನಂ ಮುತ್ತಿಗೆದೆಗೆಸಿ ಕಳುಹಿ ರಾಜ್ಯರಾಷ್ಟ್ರವನುಳುಹಿಕೊಂಡು ಶಾಲಿವಾಹನ ಶಕ ವರ್ಷ ೧೫೬೧ನೆಯ ಬಹುಧಾನ್ಯ ಸಂವತ್ಸರದ ಮಾರ್ಗಶಿರ ಮಾಸದಲ್ಲಿ ಬಿದುರೂರ ಕೋಂಟೆಯರಮನೆಯೊಳ್ ನೆಲೆಯಾಗಿ ನಿಂದು ತರಿಕೆರೆಯವರೊಡರ್ಚಿದಪಕಾರಮಂ ಮನದೆಗೊಂಡು,ರಾಮಕೃಷ್ಣಪ್ಪನೆಂಬ ನಿಯೋಗಿಯಂ ವಿಜಾಪುರಕ್ಕೆ ಕಳುಪಿ ಪಾತುಶಾಹನಂ ಪ್ರಸನ್ನೀಕರಿಸಿಕೊಂಡು ಪಿಂತೈದಿದ ರಣದುಲಾಖಾನನ ಸಂಗಡಮಪರಿಮಿತತುರುಷ್ಕಸೈನ್ಯಮಂ ತೆರಳ್ಚಿಸಿ ತಂದಾ ವೀರಭದ್ರನಾ

ಯಕಂ ಹರಿಹರದೆಡೆಯೊಳ್ ಆ ರಣದುಲ್ಲಾಖಾನನಂ ಸಂಧಿಸಿ ಶಿವಪ್ಪ ನಾಯಕಂ ರಾಮಕೃಷ್ಣಪ್ಪಯ್ಯಸಿವರೊಡನಸಂಖ್ಯಾತಸೈನ್ಯಮಂ ಕೂಡಿಸಿ ರಣದುಲ್ಲಾಖಾನನ ಸಂಗಡಂ ಪ್ರಮಾಣವನೊಡರ್ಚಿಸಿ ಕಳುಹಿ ದಾಳಿವರಿಸಿ ತರಿಕೆರೆಯುವನ ರಾಜ್ಯರಾಷ್ಟ್ರಮಂ ನಿಪಾತಂಗೈಸಿ, ಬಳಿಕಾ ನೆವಳ್ಳಿಯಿಂದು ಪೂರ್ವನಾಮಾಂಕಿತವಾದ ಬಸವಾಪಟ್ಟಣದ ಕೋಂಟೆಗೆ ಮುತ್ತಿಗೆಯಿಕ್ಕಿಸಿಯಾಕೋಂಟೆಯುಂ ಕೊಂಡು, ಯುದ್ಧಮುಖದೊಳ್ಕಂಗೆ ಯುಹನುಮಪ್ಪನಾಯಕನ ಸಹೋದರರಂ ಕೈಸೆರೆವಿಡಿಸಿ ಪಾತುಶಾಹನೆಡೆಗೆ ಕಳುಪಿ ಬಳಿಕವಾರಣದುಲ್ಲಾಖಾನನೊಡನೆ ಶಿವಪ್ಪನಾಯಕ ರಾಮಕೃಷ್ಣಯ್ಯರಂ ಸೈನ್ಯಸಮೇತಮಾಗಿ ಮಾಯಾವಾದಿಗಳ ರಾಷ್ಟ್ರಮುಖಕ್ಕೆ ತೆರಳ್ಚಿ ಕಳುಹಿ, ಪಾತುಶಾಹಂಗಾಮುಖದೊಳಪ್ಪ ಕಜ್ಜಂಗಳನೆಲ್ಲಮನಿವರ್ಗಳ ಮುಖದಿಂ ನಿರ್ವಾಹಂಗೈಸಿ, ತತ್ಪಾತುಶಾಹಂ ಕಳುಪಿದನೇಕವಾದುಚಿತವುಡುಗೊರೆಗಳಂ ಪರಿಗ್ರಹಿಸಿ ಬಹಳಸನ್ಮಾನಂಬೆತ್ತು ಪೆರಮಪ್ರಖ್ಯಾತಿಯುಂ ಪಡೆದು ವಿರಾಜಿಸುತಿರ್ದನಂತುಮಲ್ಲದೆಯುಂ ॥ ೩೪

ಮೇದಿನಿಗತಿಬಲನೆನಿಸುವ
ಸೋದೆಯ ರಘುನಾಥರಾಜನಂ ಕೆಂಗೆರೆಯೊಳ್ ।
ಕಾದಿ ಪಿಂದೆಗೆಸಿ ಪೊಗಲಾ
ಮೋದದೆ ಸಂಧಿಯೊಳ್ ಮೈತ್ರಿಯಿಂ ಮನ್ನಿಸಿದಂ ॥ ೩೫

ಅಡಿಗಡಿಗಲೆವ ತುರುಷ್ಕರ
ಪಡೆಯುಂ ಮಗ್ಗಿಸುತೆ ಮಲೆತ ತಾಳವ ನೃಪರಂ ।
* ಜಡಿದು ಮಾರ್ಮಲೆತ ಕಾರ್ಕಳ
ದೊಡೆಯನ ನಿಗ್ರಹಿಸಿ ವಿತ್ತಮಂ ನೆರೆಕೊಂಡಂ ॥ ೩೬

ಮತ್ತಮಾ ವೀರಭದ್ರನಾಯಕಂ ತಮ್ಮ ಚಿಕ್ಕಪ್ಪನಾದ ವೆಂಕಟಪ್ಪನಾಯಕರ್ಗೆ ಬೊಕ್ಕಸದಧಿಕಾರವನಿತ್ತು ಶಿವಪ್ಪನಾಯಕರುಮಂ ಪ್ರೀತಿಯಿಂ ನಡೆಸಿಕೊಳುತ್ತುಮಿರಲ್ ಸೇನೆದಿವಾನ ಪುಟ್ಟಣ್ಣಂ ಮುಂತಾದ ಕುಹಕಿಜನರ್ದುರ್ಮಂತ್ರಮಂ ನೆನೆಯಲೆಚ್ಚತ್ತು ಶಿವಪ್ಪನಾಯಕಂ

ಶೀಘ್ರದಿಂ ಸಾಗರಕ್ಕೈದಲ್ಸೇನದಿವಾನ ಪುಟ್ಟಣ್ಣಂ ಪಟ್ಟಗುಪ್ಪೆಗೈದಿ ನಿಂದಿಕ್ಕೇರಿಯೊಳಿರ್ಪ ಪಾತುಶಾಹನ ವಕೀಲನಾಗಿರುತಿರ್ದ ಜನ್ನೋಪಂತಂಗೆ ಪರಿಧಾನಮನಿತ್ತು [1] ಒಳಗುಮಾಡಿಕೊಂಡು ಶಿವಪ್ಪನಾಯಕನಂ ಕೈವಶಮಂ ಮಾಡಿಕೊಳಬೇಕೆಂದು ಬಹುವಿಧಪ್ರಯತ್ನದಿಂ ಹುಡುಕುವನಿತರೊಳ್ ಆ ಸಾಗರದ ಮಹಾನಾಡು ಬಾದಾವಿ ಲಿಂಗಪ್ಪ ರುದ್ರಪ್ಪ ಸಹಿತಂ ಸುಂಕದ ಸೇನಭೋವ [2] ಕೋನಪ್ಪನ ಮನೆಯೊಳ್ ನೆಲಮಾಳಿಗೆಯೊಳಡಂಗಿಸಿ ಪೇಟೆಯೊಳಿಲ್ಲವೆಂಬುದಂ ಮಾಡಿ ಕಳುಪಲೊಡನಿಂತು ಮರೆಯಾಗಿರುತ್ತಿರಲ್, ಕತಿಪಯದಿನಂಗಳ್ಪೋಗಲೊಡನೆ ಸಮೀಪವರ್ತಿಗಳಾದ ಸೇನೆದಿವಾನ ಪುಟ್ಟಣ್ಣಂ ಮುಂತಾದಕುಹಕಿಗಳ್ ಮತ್ತಂ ಸದಾಶಿವನಾಯಕನಂ ಪಿಡಿದು ನಿಗ್ರಹಿಸಬೇಕೆಂದು ದುರಾಲೋಚನೆಯನೆಸಗುತ್ತಿರಲ್ವೀರಭದ್ರನಾಯಕಂ ತಿಳಿದಂತಪ್ಪುದುಚಿತಮಲ್ತೆಂದು ಬಗೆದು ॥ ೩೭

ಬರಿಸಿ ಶಿವಭೂಮಿಪತಿಯಂ
ವರಚಂದಾವರದ ಸೀಮೆಕೋಂಟೆಯುಮುಖದಾ ।
ಹೊರಪಾಳ್ಯದಾಧಿಪತ್ಯವ
ನುರುಕರುಣದೊಳಿತ್ತು ನೃಪವರಂ ಬೀಳ್ಕೊಟ್ಟಂ ॥ ೩೮

ಇಂತಾ ವೀರಭದ್ರನಾಯಕಂ ಚಿಕ್ಕಪ್ಪ ಶಿವಪ್ಪನಾಯಕಂಗೆ ಚಂದಾವರದ ಸೀಮೆ ಕೋಂಟೆಗಳ ಹೊರಪಾಳ್ಯದಧಿಕಾರವನಿತ್ತು ಕಳುಹಿ ಸುಖದಿಂ ರಾಜ್ಯಂಗೈಯುತ್ತುಮಿರಲ್, ತಮ್ಮ ಪತ್ನಿಯಾದ ವೀರಮ್ಮಾಜಿಯವರ್ ಶಿವಸಾಯುಜ್ಯಮನೈದಲೊಡನತ್ಯಂತವೈರಾಗ್ಯಪರನಾಗುತ್ತುಂ ತಮ್ಮ ಕನಿಷ್ಠಪತ್ನಿಯಾದ ಕೊಲ್ಲೂರಮ್ಮಾಜಿಯುಮರ್ವೆರಸು ॥ ೩೯

* ವೀರಭದ್ರಾವನೀಶಂ
ಚಾರು ಹೊಸಂಗಡಿಯೊಳಿರ್ದನಂತರಮಾಕೊ ।

---

1 ಪರಿಧಾನಮುಮನಿದು (ಬ.ಕ.) cf VII 46.

ಶ್ಯಾನುಭೋಗ (ಕ.)

ಲ್ಲೂರಂ ಪೊರ್ದಿ ಬಳಿಕ್ಕಾ
ಭೂರಿಯಶಂ ಕಂಡಲೂರನಂದುರೆ ಸಾರ್ದಂ ॥ ೪೦

ಇಂತಾವೀರಭದ್ರನಾಯಕಂ ಕಂಡಲೂರಂ ಸಾರ್ದಾಕೋಂಟೆಯೊಳ್ವರ್ತಿಸುತ್ತುವಿರಲಾಕಾಲದೊಳ್ ॥ ೪೧

ಬಿದುರೂರೊಳ್ಸಂಸ್ಥಾನದ
ಬದುಕಿಂಗರುಹರುಮೆನೊರ್ವರಂ ಕಾಣದೆಯು ।
ಲ್ಲಿದ ಪಳಬರೊಳಂ ಮಿಗೆ ಬ
ಲ್ಲಿದನೆನಿಸುವ ಬಾಲರಾವುತನ ಪರುವಪನಂ ॥ ೪೨

ಆ ಸಿದ್ದಪನುಂ ವಸುಧಾ
ಧೀಶಂಗಿರದರಿಕೆಗೈಸೆ ಚಂದಾವರದಿಂ ।
ಭಾಸುರಬಿದರೂರ್ಗೈತಂ
ದೋಸರಿಸದೆ ಸಬ್ಬಬರ್ದುಕನಾಗಿಪ್ಪುದೆನುತುಂ ॥ ೪೩

ಬರಿಸೆ ಶಿವಪ್ಪನಾಯಕರಿಗಟ್ಟೆ ನಿರೂಪವನಾಕ್ಷಣಾರ್ಧದೊ
ಳ್ತ್ವರಿತದೊಳಾಶಿವೇಂದ್ರನುರುವೇಣುಪುರಕ್ಕಣವೈದಿ ಸೋದರಂ ।
ವೆರಸು ಬರ್ದುಂಕನೊಲ್ದು ನಡೆಸುತ್ತಿರೆ ಸೇನೆದಿವಾನ ಪುಟ್ಟಣಂ
ಪರಿಕಿಸಿ ರಾಮಕೃಷ್ಣಪನುಮುನ್ನದಕಾಶಿಯವೀರಯಾಖ್ಯನುಂ ॥೪೪

ನೆರೆದಿನಿಬರ್ಕುಹಕಿಗಳಂ
ದುರೆ ಬಲ್ಲಿದ ಬಾಲರಾವುತನ ಪರುವಪನಂ ।
ವರಸಿದ್ದಪನಂ ಬೋಧಿಸು
ತಿರದವರುಮನೊಳಗುಮಾಡಿಕೊಂಡು ಬಳಿಕ್ಕಂ ॥ ೪೫

ಬಿಡದೆ ನೃಪಕಾರ್ಯಗಳುಮಂ
ನಡೆಯಿಸುವ ಶಿವೇಂದ್ರ ವೆಂಕಟಪನಾಯಕರಂ ।
* ಪಿಡಿದು ನಿಗ್ರಹಿಸಬೇಕೆಂ
ದೆಡೆವಿಡದುರೆ ತೋಹನಿಕ್ಕಿ ಸಾಧಿಸುತಿರ್ದರ್ ॥ ೪೬

ಇಂತು ಸಮಯಸಾಧನಂಗೈದೊಡಂ ಕೈಯೊಳಗಾಗದಿರಲೊಂದುದಿನವೆಂದಿನಂತೆ ಚಿಕ್ಕರಮನೆಯಿಂ ರಾಜಾಲಯಕ್ಕೈದಿದ ಶಿವಪ್ಪನಾಯಕ ವೆಂಕಟಪ್ಪನಾಯಕರಂ ಕಡಿತದ ಚಾವಡಿಯೊಳ್ ಕುಳ್ಳಿರಿಸಿ ಪೊರಗೈದದಂತೆ ಪರಿಸ್ಫುರಣಕವಾಟಂಗಳಂ ಬದ್ಧಂಗೈಸಲಾ ಶಿವಪ್ಪನಾಯಕಂ ಸಹೋದರ ವೆಂಕಟಪ್ಪನಾಯಕಂವೆರಸು ಮಹಾಧೈರ್ಯಪರನಾಗುತ್ತುಮಾಕಡಿತದ ಚಾವಡಿಯೊಳಚ್ಚರಿನೊಳಿರ್ದಾರಾತ್ರಿಯಂ ಕಳದರುಣೋದಯಮಾಗಲೊಡನೆ ತಮ್ಮ ಸಮೀಪದೊಳಿರ್ದ ಹೊನ್ನೆನಾಯಕನ ವೆಂಕಟಯ್ಯ ಮುಂತಾದ ಮಂದಿಮಕ್ಕಳಂ ಕೂಡಿಕೊಂಡತ್ಯಂತಶೌರ್ಯದಿಂ ತಡೆದವರ್ಕಳ ಶಿರಶ್ಛೇದನಂಗೆಯ್ಯುತ್ತೈದಿ ಕೋಂಟೆಯ ಬಾಗಿಲಂ ತೆಗೆಸಿಕೊಳುತ್ತುಂ ಪೊರಟು ದುರಾಲೋಚನೆಗೊಳಗಾದ ಪರುವಪಂ ಸಿದ್ದಪಂ ಮುಂತಾದ ಕುಹಕಿಗಳಂ ಪಿಡಿದು ನಿಗ್ರಹಂಗೈದಾವುದರಲ್ಲಿಯುಮತಿಸಾವಧಾನಚಿತ್ತನಾಗಿಂತುವರ್ತಿಸುತ್ತುಮಿರಲ್, ವೀರಭದ್ರನಾಯಕನಾ ಶಿವಪ್ಪನಾಯಕನ ಮುಖದೊಳಖಿಲಕಾರ್ಯಂಗಳಂ ನಡೆಸುತ್ತುಂ ಕಂಡಲೂರೊಳ್ನಿಶ್ಚಿಂತನಾಗಿರಲಾಪ್ರಸ್ತಾವದೊಳ್ ॥ ೪೭

ಮಿಸುಪ ವಿಜಾಪುರಾಧಿಪತಿಯಪ್ಪತಿಸಾಹಸಿ ಪಾತುಶಾಪನಂ
ದೆಸೆವ ವಜೀರರಂ ನೆರಹಿ ದಕ್ಷಿಣದತ್ತಣ ನಾಡನೈದೆ ಸಾ ।
ಧಿಸಿ ಮಲೆನಾಕೆವಾಳರೆನಿಸಿರ್ಪಿಳೆಯಾಣ್ಮರ ದರ್ಪಮಂ ನಿವಾ
ರಿಸಿ ಬಹುದೆಂದುಸಿರ್ದು ನಿಜಪುತ್ರನನೈದೆ ತೆರಳ್ಚೆ ಖಾತಿಯಿಂ ॥ ೪೮

ರುಸ್ತುಂಜಮಾನನೊಡನುರು
ಹಸ್ತ್ಯಶ್ವಪದಾತಿಸಹಿತಮಂಬರಖಾನಂ ।
ಶಸ್ತಮಹಮುದ್ದಖಾನಂ
ವಿಸ್ತರತನು ಕೂಬಖಾನನಂಕುಶಖಾನಂ ॥ ೪೯

ಮತ್ತಂ ಶಾಜೀಖಾನಂ
ಪತ್ತೇಖಾನಂ ಪರಾತಖಾನನೆನಿಪ್ಪ ।
ನ್ಮತ್ತರಹ ಖಾನಖಾನ
ರ್ಪತ್ತಿಚಯಂವೆರಸು ತೆರಳ್ದು ಕದನೋತ್ಸಹದಿಂ ॥ ೫೦

ಇಂತು ಪಾತುಶಾಹಂ ತಾನಾತ್ಮಪುತ್ರನೆನಿಪ ರುಸ್ತುಂಜಮಾನನೊಡನಪರಿಮಿತಸೈನ್ಯವಜೀರರ್ಕಳಂ ಕೂಡಿಸಿ ತೆರಳ್ಚಲವೆರ್ದಾಳವರಿಯುತ್ತೈದಿ ಸಿವೊಗ್ಗೆಯ ಕೋಂಟೆಯುಂ ವೇಢೈಸಲ್, ವೀರಭದ್ರನಾಯಕನಪರಿಮಿತಸೇನಾಸಮೂಹಮಂ ಕೂಡಿಸಿ ಶಿವಪ್ಪನಾಯಕನಂ ತೆರಳ್ಚಲಾತಂ ತನ್ನನುಜವೆಂಕಟಪ್ಪನಾಯಕಂವೆರಸತ್ಯಂತಾಟೋಪದಿಂ ತೆರಳ್ಚಿತಂದು ಯವನಸಮೂಹಕ್ಕಿದಿರ್ಚಿ ನಿಂದು ಕೈಗೈದು ಯುದ್ಧರಂಗದೊಳ್ ಅಂಬುರಖಾನನ ಡೊಂಬಿಯುಂ ನಿಲಿಸಿ ಮುಸಮುದ್ದಖಾನನ ಬಹುಮದಮಂ ಕೆಡಿಸಿ ಕೂಭಕಾನನಂ ಕ್ಷೋಭವಡಿಸಿ ಅಂಕುಶಖಾನನ ಬಿಂಕಮಂ ಕಳಲ್ಚಿಸಿ ಶಾಜೀಖಾನನ ಫೌಜಂ ಮುರಿದು ಪತ್ತೇಖಾನನ ಕತ್ತಿಯುಂ ನಿಲ್ಚಿಸಿ ಪರಾತಖಾನನಂ ಪರಿಭವಂಗೈದಿಂತು ತುರುಷ್ಕಸೈನ್ಯಮಂ ಸದೆದೋಡಿಸಿ ಕೋಂಟೆಗಳ ಮುತ್ತಿಗೆದೆಗೆಸಿ ರುಸ್ತುಂಜಮಾನನಂ ಪಿಂದೆಗೆಸಲ್ ಪಾತುಶಾಹಂ ಕೇಳ್ದು ಕೆರಳ್ದು ಬಂಕಾಪುರಕ್ಕೈದಿ ನಿಂದು ಮುಸ್ತಾಪಖಾನನ ಕೂಡಪರಿಮಿತಸೈನ್ಯಮಂ ಕೂಡಿಸಿ ತೆರಳ್ಚಲವಂ ಪಡೆವೆರಸೆಳ್ತಂದು ಕಳವೂರ ಬಯಲ್ಗೈತಂದು ಸಿಲಲ್ ಬಳಿಕ್ಕಂ ನಿಯೋಗಿ ಶರಜಾರಾಯನಂ ಪ್ರಯಾಣವನೊಡರ್ಚಿಸಿ ಕಳುಹಿ ಶಿವಪ್ಪನಾಯಕನ ಮುಖದಿಂ ಸಮರಸಂಧಾನವನೊಡರ್ಚಿಸಿ ಪಾತುಶಾಹನಂ ಪಿಂದೆಗೆಸಿ ರಾಜ್ಯಂಗೆಯ್ಯುತ್ತುಮಿರಲಾಪ್ರಸ್ತಾವದೊಳ್ ॥ ೫೧

ವರವೀರಭದ್ರಧರಣೀ
ಶ್ವರನಂ ಬಿದುರೂರ್ಗೆ ಬರಿಸಬೇಕೆಂದೆನುತುಂ ।
ಧುರಧೀರ ಶಿವನರೇಂದ್ರಂ
ತ್ವರಿತದೊಳಂ ಘಟ್ಟಮಿಳಿದು ಗುಳವಾಡಿಯೊಳಂ ॥ ೫೨

ನಿಂದಿರೆ ಕಾಶಿಯು ಭದ್ರಪ
ನಂದುರೆ ಸೇನಾದಿವಾನ ಪುಟ್ಟಣ ಮುಖ್ಯರ್ ।
ಮಂದಿಕುದುರೆಗಳ ಕೂಡಿಸಿ
ನಿಂದೊಡ್ಡಂಬಲಿಸಿ ದೂಪಗಟ್ಟೆಯ ಬಳಿಯೊಳ್ ॥ ೫೩

ಯುದ್ಧವನೊಡರ್ಚಲಲ್ಲಿಯು
ಬಿದ್ದಳಿಯಲ್ಕಳಿಯುಭದ್ರಪಂ ಕರ್ತರ್ಕೇ ।
ಳ್ದುದ್ವೃತ್ತರ ದುರ್ಮಂತ್ರದ
ಗದ್ದಲವುಂ ನಿಲಿಸಿ ತಾವೆತೆರಳ್ದೃತರುತುಂ ॥ ೫೪

ಗುಳವಾಡಿಗೈದಿಯಂತಃ
ಕಲಹವನುರೆ ಬಿಡಿಸಿ ಶಿವನರೇಂದ್ರನ ಮನಮಂ ।
* ತಿಳುಹಿ ತರ್ಕೈಸಿ ಯಲ್ಲಿಂ
ಘಳಿಲನೆ ತಾಂ ತೆರಳ್ದು ಕಂಡಲೂರಂ ಪೊಕ್ಕಂ ॥ ೫೫

ಇಂತು ವೀರಭದ್ರನಾಯಕರ್ಗುಳವಾಡಿಯಿಂ ತೆರಳ್ದು ಕಂಡಲೂರಂ ಪೊಗಲನಂತರಂ ॥ ೫೬

ಮರುದಿವಸಮನುಜಸಹಿತಂ
ಭರದಿಂದಲ್ಲಿಂ ತೆರಳ್ದು ಶಿವಭೂಪಾಲಂ ।
ವರಕಂಡಲೂರನುರೆ ಪೊ
ಕ್ಕರಸಿನ ಸಂದರ್ಶನವನಣಂ ವಿರಚಿಸಿದಂ ॥ ೫೭

ಇಂತಾ ಶಿವಪ್ಪನಾಯಕಂ ಸಹೋದರ ವೆಂಕಟಪ್ಪನಾಯಕಂವೆರಸು ಗುಳವಾಡಿಯು ಪಾಳ್ಯದಿಂ ತೆರಳ್ದು ಕಂಡಲೂರಂ ಪೊಕ್ಕು ಕರ್ತರ ಸಂದರ್ಶನಂಗೈದು ನೀಂ ಮುನ್ನಿನಂತೆ ವೇಣುಪುರಕ್ಕೆ ಬಿಜಯಂಗೈದು ಸಂಸ್ಥಾನದ ಸಕಲ ಕಾರ್ಯಂಗಳಂ ವಹಿಸಿ ನಡೆಸಲ್ವೇಳ್ಕೆಂದು ಪಲಬಗೆಯೊಳೊಡವಡಿಸಿ ಕರೆಯಲಾವಿಲ್ಲಿಯು ನಿಂದಿರ್ದುಂಟಾದ ಸಂಸ್ಥಾನಕಾರ್ಯಂಗಳನೆಲ್ಲಮಂ [1] ನಿನ್ನ ಮುಖದಲ್ಲಿಯು ನಡೆಸುವುದೆಮಗೆ ಭೂಷಣವಾಗಿರ್ಪುದೆಂದು ನೀತಿಶಾಸ್ತ್ರಂಗಳಂ ಪೇಳ್ದೊಡವಡಿಸಿಯಾ ಶಿವಪ್ಪನಾಯಕರಂ ವೆಂಕಟಪ್ಪನಾಯಕರಂ ವೇಣುಪುರಕ್ಕೆ ಬೀಳ್ಕೊಟ್ಟು ತಾಂ ನಿಶ್ಚಿಂತೆಯಿಂ ಶಿವಾರ್ಚನಾದಿ ಸತ್ಕೃತ್ಯ ನಿತ್ಯನಿಯಮಂಗಳಂ ಲೋಪವಾಗದಂತಾಚರಿಸಿ ನಡೆಸುತ್ತುಂ ॥ ೫೮

1 ನಿಂದಿರ್ದೇನುಂಟಾದ ಸಂಸ್ಥಾನದ ಕಾರ್ಯಂಗಳನೆಲ್ಲಮಂ (ಕ. ಬ.)

ಇಂತಾ ಭದ್ರಪಭೂಮೀ
ಕಾಂತನ ಸುತನೆನಿಪ ವೀರಭದ್ರಮಹೀಶಂ ।
ಕಂತುನಿಭರೂಪನತಿಬಲ
ವೆಂತಂ ಸದ್ಧರ್ಮದಿಂದಮಿಳೆಯುಂ ಪೊರೆದಂ ॥ ೫೯

ಇಂತು ವೀರಭದ್ರನಾಯಕಂ ತನಗೆ ಪಟ್ಟವಾದ ಶಾಲಿವಾಹನ ಶಕ ವರ್ಷ ೧೫೫೧ನೆಯ ಶುಕ್ಲನಾಮಸಂವತ್ಸರದ ಮಾರ್ಗಶಿರ ಶುದ್ಧ ೧೧ ಯುವರೆಗೆ ವರ್ಷ ೧೬ ದಿವಸ ೧೦ರ ಪರ್ಯ್ಯಂತಂ ಸುಖದಿಂ ರಾಜ್ಯಂಗೈದಂ ॥ *

ಷಷ್ಠಾಶ್ವಾಸಂ ಸಂಪೂರ್ಣಂ.



* ಈ ವೀರಭದ್ರನಾಯಕರ ಕಾಲದಲ್ಲು ಬದುಕುಗಳ ಮಾಡಿದವರು :—ಶಿವಪ್ಪನಾಯಕರು; ಅವರ ತಮ್ಮ ವೆಂಕಟಪ್ಪನಾಯಕರು; ಪ್ರಧಾನಿ ಹಾರೋ ವೆಂಕಟಯ್ಯ; ರಾಮಕೃಷ್ಣಯ್ಯ ; ಕರಣಿಕ ಬಿಳಿಗೀ ಕೋನಪ್ಪಯ್ಯ;ಕೋಳಾಲದ ಕೋನಪ್ಪಯ್ಯ; ರಾಯಸದ ವೆಂಕಟಪ್ಪಯ್ಯ; ನಾರಣಪ್ಪಯ್ಯ ; ಹೂವಯ್ಯ; ಶರಜಾ ವೆಂಕಟಪ್ಪಯ್ಯ; ನಿಯೋಗಿ ರಾಮಚಂದ್ರಯ್ಯ; ಶರಜಾರಾಯ; ಅಂಡಿಗೆ ರೇವಣ್ಣವೊಡೇರು; ದಳವಾಯಿ ಚಿಕ್ಕಲಿಂಗಣ್ಣ; ಶಾಂತಪ್ಪನಾಯಕ; ಗಿಂಡೀ ಲಿಂಗಯ್ಯ; ಬಾಲರಾವುತನ ಪರುವಪ್ಪ ; ಹೊನ್ನನಾಯಕನ ವೆಂಕಟಯ್ಯ ; ಸೇನೆದಿವಾಣಿ ಪುಟ್ಟಣ್ಣ, ಮುಂತಾದವರು.

ಈ ವೀರಭದ್ರನಾಯಕರು ಕಂಪಲೂರಲ್ಲೂ ಐಕ್ಯವಾದಲ್ಲಿ ಇವರ ಪತ್ನಿ ಕೊಲ್ಲೂರಮ್ಮಾಜಿಯವರಿಗೆ ಇವರ ಸಂಗಡಲೇ ಸಮಾಧಿಯಾಯಿತು. (ಕ)

# ಸಪ್ತಮಾಶ್ವಾಸಂ



ಆ ವೀರಭದ್ರನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೬೮ನೆಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ೧೦ಯಲ್ಲಿ ಚಿಕ್ಕಸಂಕಣ್ಣನಾಯಕರ ಮಗ ಸಿದ್ದಪ್ಪನಾಯಕರ ಜ್ಯೇಷ್ಠಕುಮಾರರಾದ ಶಿವಪ್ಪನಾಯಕರ್ಗೆ ವೇಣುಪುರದ ಅರಮನೆಯಲ್ಲಿ ರಾಜಪಟ್ಟಂ.

ಇಂತು ನೆಗಳ್ತೆವೆತ್ತ ಸಮುದಗ್ರಪರಾಕ್ರಮಿ ವೀರಭದ್ರಭೂ
ಕಾಂತನನಂತರಂ ರಿಪುಕನತ್ಕದಳೀವನಗಂಧಸಿಂಧುರಂ ।
ಪಿಂತಣ ರಾಯರಿಂ ಶತಗುಣಾಧಿಕಮಾದತಿಶೌರ್ಯದೇಳ್ಗೆಯಿಂ
ಸಂತರೊಡಂಬಡಲ್ಧರೆಯನಾಳ್ದನುದಾರಶಿವಾವನೀಶ್ವರಂ ॥೧

ಅದೆಂತೆನಲಾ ಶಿವಪ್ಪನಾಯಕರ್ ತಮ್ಮ ಪಿತಾಮಹನಾದ ಚಿಕ್ಕಸಂಕಣ್ಣನಾಯಕರ ಅಗ್ರಜರಾದ ದೊಡ್ಡ ಸಂಕಣ್ಣನಾಯಕರ ಪ್ರಪೌತ್ರರಾದ ವೀರಭದ್ರನಾಯಕರಾಳಿಬರುತಿರ್ದ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಪರಿಜನ ಪುರಜನ ಬಂಧುಜನ ಮಂತ್ರಿ ಸಾಮಾಜಿಕ ನಿಯೋಗಿ ಜನ ಸೇವಕಜನಮುಂತಾದ ಸಮಸ್ತಜನರಂ ಪಾಲಿಸುತ್ತುಂ, ತಮ್ಮನುಜ ವೆಂಕಟಪ್ಪನಾಯಕರಂ ಪ್ರೀತಿಯಿಂ ನಡೆಸಿಕೊಳುತ್ತುಂ, ತಮ್ಮ ಸಹೋದರಿ ಪರಮೇಶ್ವರಮ್ಮನನ್ನು ...... ವಿವಾಹಮಂ ರಚಿಸಿ ನಾಗಾಜಮ್ಮನೆಂಬನುಜೆಯುಂ ...... ಗಿತ್ತು ವಿವಾಹಮಂ ರಚಿಸಲಾಪೆಣ್ಮಣಿಯೊಳೊರ್ವ ಕುಮಾರನುದಿಸಲಾ ಕುಮಾರಂಗೆ ಅಳಿಯ ಶಿವಲಿಂಗ ನಾಯಕನೆಂದು ನಾಮಕರಣಮಂ ರಚಿಸಿ ಪ್ರೋಷಿಸುತ್ತುಂ, ಮತ್ತಂ ತಮ್ಮ ಕನಿಷ್ಠ ಸಹೋದರಿಯಾದ ಚನ್ನಮ್ಮನೆಂಬ ಪೆಣ್ಮಣಿಯುಂ ಮೈದುನಕೆಂಚಣ್ಣಂಗಿತ್ತು ವಿವಾಹಮಂ ರಚಿಸಲಾ ಚನ್ನಮ್ಮನ ಗರ್ಭದೊಳ್ ಸಿದ್ದಯ್ಯನೆಂಬ ಕುಮಾರನುಂ ಸಿದ್ದಮ್ಮ ಗೌರಮ್ಮ ನೆಂಬಿರ್ವರ್ಪೆಣ್ಮಣಿಗಳುಮುದಿಸಲವರುಮಂ ಸಂರಕ್ಷಿಸುತ್ತುಮಾಶಿವಪ್ಪನಾಯ

ಕರ್ ಮೊದಲ್ ವೆಂಕಟಪ್ಪನಾಯಕರ ಕಾಲದಲ್ಲಿ ತಾಂ ವಿವಾಹವಾದ ದುರ್ಗದ ಪಟ್ಟಣಸೆಟ್ಟರ ಮಗಳು ಲಿಂಗಮ್ಮಾಜಿಯವರ ಗರ್ಭದೊಳೊರ್ವ ಕುಮಾರಿಯೊಗೆಯಲಾ ಪೆಣ್ಮಣಿಗೆ ಸಿದ್ಧಮ್ಮಾಜಿಯೆಂದು ಪೆಸರಿಟ್ಟು, ಸಿದ್ಧಮ್ಮಾಜಿಯುಂ ಸರಭೆಲ ಮಲ್ಲಿಕಾರ್ಜುನಯ್ಯಂಗೆ ವಿವಾಹವನೊಡರ್ಚಿಸಿ, ಮತ್ತಂ ತಮ್ಮ ದ್ವಿತೀಯಪತ್ನಿ ಸೂರಿರಾಯನ ಬಸವಪ್ಪನ ಸಹೋದರಿಯರಾದ ಶಾಂತಮ್ಮಾಜಿಯವರ ಗರ್ಭದೊಳೊರ್ವ ಕುಮಾರನುದಿಸಲಾ ಕುಮಾರಂಗೆ ಭದ್ರಪನಾಯಕನೆಂದು ನಾಮಕರಣಮಂ ರಚಿಸಿ ಆ ಭದ್ರಪನಾಯಕಂಗೆ ಸೂರಿರಾಯನ ಕಲ್ಲಪ್ಪನ ಕುಮಾರಿ ಬೊಮ್ಮಮ್ಮಾಜಿ ಸೋದರಿಕೆಯಲ್ಲಿ ಮೈದುನ ಕೆಂಚಣ್ಣನಮಗಳು ಸಿದ್ಧಮ್ಮಾಜಿ ಇಂತಿರ್ವರ್ ಸ್ತ್ರೀಯರನತ್ಯಂತಸಂಭ್ರಮದಿಂ ವಿವಾಹಮಂ ರಚಿಯಿಸಿ, [1] ತಮಗೆ ಈ ರಾಜಪಟ್ಟವಾದಮೇಲೆ ತಾವು ನಂಬಿಯಣ್ಣಸೆಟ್ಟರ ಮಗ ಚನ್ನಪ್ಪಸೆಟ್ಟರ ಪತ್ನಿ ಚನ್ನಮ್ಮನ ಸಹೋದರಿಯಾದ ಬಸವೂರ ಸೋಮಯ್ಯನ ಕುಮಾರಿ ಭದ್ರಮ್ಮಾಜಿ, ಬಾದಾಮಿಲಿಂಗಪ್ಪಸೆಟ್ಟರ ಕುಮಾರಿ ಬಸವಲಿಂಗಮ್ಮಾಜಿ ಇಂತುಭಯಸ್ತ್ರೀಯರಂ ವಿವಾಹವಾದರ್. [2] ಬಸವಲಿಂಗಮ್ಮಾಜಿಯೆಂಬ ಪತ್ನಿಯೊಳೊರ್ವ ಕುಮಾರನುದ್ಭವಿಸಲಾ ಕುಮಾರಂಗೆ ಸೋಮಶೇಖರನಾಯಕನೆಂದು ನಾಮಕರಣಮಂ ರಚಿಯಿಸಿ, ಇಂತಾ ಶಿವಪ್ಪನಾಯಕರ್

---

1 ಈ ಸಿದ್ಧಮ್ಮಾಜಿಯ ಸಹೋದರಿಯಾದ ಗೌರಮ್ಮನೆಂಬ ಪೆಣ್ಮಣಿಯುಂ ಮುಂದುಸಿರ್ವ ಕಥಾಸಂಗತಿಯಲ್ಲೂ ಪರದೇಸಿಸೆಟ್ಟರ ಚನ್ನಪ್ಪಸೆಟ್ಟರ ಪುತ್ರನಾದ ನಿರ್ವಾಣಯ್ಯನ ತಂದೆ ಮೋನಪ್ಪಸೆಟ್ಟರ ಭಾವನಾದ ಮರಿಯಪ್ಪಸೆಟ್ಟರಿಗೆ ಕೊಟ್ಟು ವಿವಾಹವಂ ರಚಿಸಿದ. ಕಾರಣದಿಂದೀ ಶಿವಪ್ಪನಾಯಕರ ಕುಮಾರ ಭದ್ರಪ್ಪನಾಯಕರು ಈ ಚನ್ನಪ್ಪಸೆಟ್ಟರ ಕುಮಾರರಾದ ಮರಿಯಪ್ಪಸೆಟ್ಟರು ಇಂತಿರ್ವರು ಸಡ್ಡಕರಾಗಬೇಕೆಂದು ಗ್ರಹಿಸಿಕೊಂಬುದು. (ಕ)

2 ಮತ್ತಮಾತರುವಾಯ ಗುಡುವೆ ಚನ್ನಪ್ಪನ ತಂಗಿ ನಾಗಾಜಮ್ಮಾಜಿಯೆಂಬ ಪೆಣ್ಮಣಿಯುಂ ವಿವಾಹವಾದರ್. ಆ ನಾಗಾಜಮ್ಮಾಜಿಯುವರ ಗರ್ಭದೊಳ್ ಸಂತಾನವಿಲ್ಲಂ; ಇಂತಾ ಶಿವಪ್ಪನಾಯಕರ್ ತಾವು ಸ್ವತಂತ್ರರಾಗಿ ವಿವಾಹವಾದ ಸ್ತ್ರೀಯು

ಸೋಮಶೇಖರನಾಯಕರ್ವೆರಸು ಸುಖಮಿರುತುಂ ನಾಲ್ದೆಸೆಯೊಳಿರ್ಪ ವರ್ತಕ ಪ್ರೈರುದಾರ ಗಂದಿಗ ಕೊಂಕಣಿಗರ್ಮೊದಲಾದ ಮಹಾನಾಡವರಂ ಬರಿಸಿ ವೇಣುಪುರವರದೊಳ್ ಸ್ಥಳನಿವೇಶನಪೇಟೆಸಾಲು ಕ್ಲುಪ್ತಿಗಳಂ ಮಾಡಿಸಿ ಸ್ಥಿರಲೇಖನಂಗಳಂ ಬರೆಸಿತ್ತು ಮತ್ತಮದಲ್ಲದೆ, ಚಿತ್ರಕ ಶಿಲ್ಪಕ ವರ್ಣಕ ಕಾಂಸ್ಯಕಾರ ತೈಲಯಂತ್ರಿಕ ಕುಂಭಕಾರ ಸ್ವರ್ಣಕಾರ ವರ್ಧಕಿ ಕಾರುಕ ವಸ್ತ್ರಶೋಧಕ [1] ದಿವಾಕೀರ್ತಿಕ (ಮುಂತಾದ) ನಾನಾ ಕೈವಾಡ ಕರಣಚಮತ್ಕಾರವಿಶಾರದರಾದ ನಾನಾವಿಧಜಾತಿಜನ ಗೃಹಾಸ್ಪದನಿವೇಶನಂಗಳಂ ಕಲ್ಪಿಸಿ ಯುವರ್ಗಳಂ ಸ್ಥಾಯಿಗಳಾಗಿ ನಿಲಿಸಿ, ಈ ಪ್ರಕಾರದಿಂ ವೇಣುಪುರಮಂ ಬಹುವಿಧರಚನೆಗಳಿಂ ವಿಸ್ತಾರಂಗೈಸಿ, ಬ್ರಹ್ಮಕ್ಷತ್ರಿಯಾದಿ ವರ್ಣಾಶ್ರಮಾಚಾರ ಧರ್ಮಕರ್ಮಂಗಳಂ ಶ್ರುತಿಸ್ಮೃತ್ಯುಕ್ತಮಾರ್ಗೋಲ್ಲಂಘನಮಾಗದಂತು ನಡೆಯಿಸಿ, ಶೈವವೈಷ್ಣವಾದಿ ಷಡ್ದರ್ಶನವರ್ತಿಗಳಂ ತತ್ತದುಕ್ತಮಾರ್ಗದೊಳ್ನಡೆವಂತು ನಿಯಾಮಕಂಗೈಸಿ, ಸ್ವರಾಷ್ಟ್ರಸ್ಥಿತ ಸಮಸ್ತಜನರೊಳ್ ಜಾತಿಸಂಕರಮಾಗಿ ನಡೆಯದಂತಾಜ್ಞಾಪಿಸಿ ತಾಂ ಧರ್ಮದಿಂ ರಾಜ್ಯಭಾರವಿಚಾರತತ್ಪರರಾಗಿ ರಾಜಧರ್ಮದಿಂ ವರ್ತಿಸುತ್ತುಮಿರ್ದು ಕತಿಪಯದಿನಂಗಳ್ಪೋಗಲೊಡನೆ ॥ ೧

ವಸುಧಾರೆಯ ಕೋಂಟೆಯನಾ
ವಸುಧೀಶಂ ಕೊಂಡು [2] ಸಕ್ಕರೆಯಪಟ್ಟಣಮಂ ।

---

ಮೂರ್ವರೊಳ್ ಬಸವೂರ ಸೋಮಯ್ಯನ ಕುಮಾರಿ ಭದ್ರಮ್ಮಾಜಿಯವರ ಗರ್ಭದೊಳೊರ್ವ ಕುಮಾರಿಯುದಿಸಲಾ ಕುಮಾರಿಗೆ ಬಸವಲಿಂಗಮ್ಮಾಜಿಯೆಂದು ಪೆಸರಿಟ್ಟು ಆ ಬಸವಲಿಂಗಮ್ಮಾಜಿಯುಂ ಕೇರಾನ್ನದ ಶಿವಲಿಂಗದೇವರ ಶಿಷ್ಯ ಬಸವಲಿಂಗಯ್ಯಂಗೆ ವಿವಾಹಮಂ ರಚಿಸಲಾ ಬಸವಲಿಂಗಮ್ಮಾಜಿಯು ಬಸಿರೊಳೊರ್ವ ಕುಮಾರಿಯುದಿಸಲಾ ಕುಮಾರಿಗೆ ಸೋಮಮ್ಮನೆಂದು ಪೆಸರಿಟ್ಟು, ಸೋಮಮ್ಮನಂ ಗರಜಿನ ಚನ್ನವೀರವೊಡೆಯರ್ಗೆ ವಿವಾಹಮಂ ರಚಿಯಿಸಿದರ್. (ಕ)

1 ವಸ್ತ್ರಚ್ಛೇದಕ [ಕ.ಬ]

2 ಸರ್ವಜಿತ್ಸಂವತ್ಸರದಿಂ ಸಾಹಸಂಗೈದು ಖರಸಂವತ್ಸರದಿ (ಕ)

ಮಿಸುಗುವ ಹಾಸನಬೇಲೂ[1]
ರಸದೃಶಕೋಂಟೆಗಳನಾನೃಪಂ ವಶಗೈದಂ ॥ ೩

ಮಾಯಾಪಾದಿಗಳಧಿಕಸ
ಹಾಯದೆ ಬಹುಸೈನ್ಯಸಹಿತಿದಿರ್ಚಿದ ರಣಾಗ್ರಾಂ ।
* ಗೇಯ ಬೇಲೂರಕೃಷ್ಣಪ
ನಾಯಕನಂ ಯುದ್ಧರಂಗದೊಳ್ಸೋಲಿಸಿದಂ ॥ ೪

ಮಗುಳಾ ಕೃಷ್ಣಪನಾಯಕನ
ಮಗನೆನಿಸುವ ವೆಂಕಟಾದ್ರಿನಾಯಕನುರ್ವಿಂ ।
ಮಿಗೆ ಕೈಗೈಯಲ್ಕಂ ಪಿಡಿ
ದಗಣಿತತತ್ಸೈನ್ಯಜಾಲಮಂ ನೋಯಿಸಿದಂ ॥ ೫

ಇಂತರ್ಕಲಿಗೋಡ ಕೃಷ್ಣಪ್ಪನಾಯಕನದಟಂ ಮುರಿದಾತನ ತನೂಜ ವೆಂಕಟಾದ್ರಿನಾಯಕನಂ ಯುದ್ಧರಂಗದೊಳ್ಪಿಡಿದು ಕೈಗಾಯ್ದು ಕಳುಹಿದನಂತುಮಲ್ಲದೆಯುಂ ॥ ೬

ಕರೆಯನ್ನನಿಗೆ ಬಾಧಕರಾ
ಗಿರುವ ಪರಂಗಿಗಳ ಬಲವನುಡುಗಿಸಿ [2] ಕುಂದಾ ।
ಪುರ ಗಂಗುವಳ್ಳಿ ಹೊನ್ನಾ
ವರಗಳ ಕೋಂಟೆಗಳನಾ ನೃಪಂವಶಗೈದಂ ॥ ೭

ಕಂಗೊಳಿಪ ಮಂಗಲೂರು
ತ್ತುಂಗಪರಿಸ್ಫುರಣಮಂ ವಶಂಗೈದು ಬಳಿ ।
* ಕ್ಕಿಂಗರೀಜಾದ್ಯರಾಗಮ
ನಂಗಳುಮಂ ತವಿಸಿ ರಾಜ್ಯಮಂ ಬಾಳಿಸಿದಂ ॥ ೮

ಇಂತುಮಂಗಲೂರ ಕೋಂಟೆಯುಂ ಕೊಂಡನಂತರಮುಳಿಯೆಯುಂ ಕಟ್ಟೆಕೀಳೂರಂ ಸಾಧಿಸಿ, ಬೇಕಲ ಚಿತ್ತಾರಿಗಳೆಂಬ ಕೋಂಟೆಗಳುಮಂ ಮತ್ತಂ ಚಂದ್ರಗಿರಿ ಮುಂತಾದ ಕೋಂಟೆಗಳುಮಂ ಬಪ್ಪುಗೈಸಿದನಂತು ಮಲ್ಲದೆಯುಂ ॥ ೯

1 ಹೇವಿಳಂಬಿ ಸಂವತ್ಸರದೊಳ್ 2 ನಂದನಸಂವತ್ಸರದೊಳ್. (ಕ)

ಬಳಿಕುರುನೀಲೇಶ್ವರದು
ಜ್ಜ್ವಳಿಪಿಳೆಯುಂ ಕೊಂಡು ನಾಯಿಮಾರರ ನೆಲದೊಳ್ ।
ತೊಲಗದ ಕಂಬವನನುವಿಂ
ನಿಲಿಸಿ ಮಹಾದ್ಭುತಪರಾಕ್ರಮವನುರೆ ಮೆರೆದಂ ॥ ೧೦

ಇಂತು ನೀಲೇಶ್ವರದ ಗಡಿಮುಖದೊಳ್ ತೊಲಗದ ಕಂಬಮಂ ನಿಲಿಸಿ ನಾಯಿಮಾರರಂ ವಶಗೈದು ಪಣಮಣಿಹಂಗಳಂ ಕೊಂಡನಂತರಂ ಕೊಲ್ಲಂತಮೊಪಳಮೆರ್ಗಂತಾದ ಕೇರಳಮಂಡಲದ ಮನ್ನೆಯರ್ಕಳನೆರ್ದೆಗೆಡಿಸಿ ಮರಳ್ದನಂತುಮಲ್ಲದೆಯುಂ ॥ ೧೧

ರಂಜಿಸುವಲತ್ತನಾಡಂ
ಮಂಜುಳಮೆನಿಸಿರ್ಪ ಪಡುವನಾಡನಿಳಾಭೃ ।
ತ್ಕುಂಜರನುನ್ಮೂಲಿತರಿಪು
ಪುಂಜಂ ಶಿವನೃಪತಿ ಶೌರ್ಯದಿಂ ಸಾಧಿಸಿದಂ ॥ ೧೨

ಮತ್ತಮಾ ಶಿವಪ್ಪನಾಯಕಂ ದುರ್ಮುಖಿಸಂವತ್ಸರದಲ್ಲಿ ವಿಜಾಪುರದ ಪಾತುಶಾಹಂ ಮೃತನಾದನೆಂಬ ವರ್ತಮಾನಂಕೇಳ್ದು ತಾಮ್ರಮುಖರ್ಕಟ್ಟಿಕೊಂಡ ಇಕ್ಕೇರಿ ಸೊರಬ ವುಡುಗಣಿ ಮಹಾದೇವಪುರ ಅಂಬಲಿಗೊಳ್ಳ ಮುಂತಾದ ಕೋಂಟೆಗಳಂ ಸಾಧಿಸಿ ಬಳಿಕ್ಕಂ ಸೋದೆಯುವರ್ಮಾರ್ಮಲೆತಿದಿರ್ಚಿ ನಿಲಲವರಾಳ್ವ ನಾಡೊಳಗಣ ಸಿರಸೆ ಹೇರೂರ್ ಬೋಳೂರ್ ಪುಲಿಯುಕಣ ಕರುವೂರ್ ಬನವಸೆ ಬದನಗೋಡು ಮುಂತಾದಸೀಮೆಗಳಂ ಸ್ವಾಧೀನಂಗೈದನಂತುಮಲ್ಲದೆಯುಂ ॥ ೧೩

ಸಿರಸೆಯ ಕೋಂಟೆಯುಮಂ ಸಂ
ಗರದೊಳ್ಕೊಂಡುರುಸುಧಾಪುರಾಧಿಪನೆನಿಪಾ ।
ಗರುವಮಧುಲಿಂಗನಾಯಕ
ನುರೆಪುಗೆ ಕೊಂಡಖಿಳರಾಜ್ಯಮಂ ಮಗುಳಿತ್ತಂ ॥ ೧೪

ಇಂತಾ ಶಿವಪ್ಪನಾಯಕಂ ಸೋದೆಯರಾಳ್ವರಾಜ್ಯರಾಷ್ಟ್ರಪರಿಸ್ತರಣಂಗಳಂ ಸ್ವಾಧೀನಂಗೈದನಂತರಂ, ಸಂಧಿಮುಖದೊಳಾ ಸೋದೆಯ ಮಧುಲಿಂಗನಾಯಕಂ ಬೇಡಿಕೊಳಲ್ ತದ್ದ್ಯನ್ಯೋಕ್ತಿಗಳಂ ಲಾಲಿಸಿ ಮ

ಗುಳ್ದವರ ರಾಜ್ಯಪರಿಸ್ತರಣಗಳನವರ್ಗಿತ್ತು ಮನ್ನಿಸಿ ಬೀಳ್ಕೊಟ್ಟತ್ಯಂತ ಭುಜಬಲಪರಾಕ್ರಮದಿಂ ರಾಜ್ಯಂಗೆಯ್ಯುತಿರ್ದನಂತುಮಲ್ಲದೆಯುಂ ॥ ೧೫

ಭೀಕರಬಲಶಿವಭೂಪನ
ಡಾಕಿಂಗಗಿದಖಿಳರಾಜರಗಣಿತಧನಮಂ ।
ಬೇಕಾದ ವಸ್ತುಚಯವನ
ನೇಕವನಿತ್ತೆರಗಿ ತದನುಚರರಾಗಿರ್ದರ್ ॥ ೧೬

ಇಂತು ವರ್ತಿಸುತ್ತುಮಿರಲ್ ॥ ೧೭

ಸಸಿಯುಂ ಶಿವಮೌಳಿಯುನ್ನ
ದಿಸಿ ಕಡಲಂ ಪುಗಿಸಿ ಬಾಂಬೊಳೆಯುನಹಿಪತಿಯುಂ ।
ರಸೆಯುಡಿಗಳ್ದಿಶಿವೇಂದ್ರನ
ಜಸಮೆಸಕದಿನುರ್ವಿ ಪರ್ವಿದುದು ಮೂಜಗಮಂ ॥ ೧೮

ಮತ್ತಮದಲ್ಲದೆ ॥ ೧೯

ಆಗಸಕೆಸಂಜೆಗೆಂಪೀ
ಭೂಗೆಳವಿಸಿಲಾರಸಾತಳಕ್ಕಹಿಪಫಣಾ ।
* ರಾಗರತ್ನಪ್ರಭಾಮಯ
ಮಾಗೆಸೆದುದು ಸತ್ಪ್ರತಾಪಮಾಶಿವನೃಪನಾ ॥ ೨೦

ಇಂತೆಸೆವ ಕೀರ್ತಿಪ್ರತಾಪಂಗಳ್ಜಗಮಂ ಮುಸುಂಕಲ್ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತಿರ್ದನಂತಮಲ್ಲದೆಯುಂ ॥ ೨೧

ವರವೆಂಕಟಾವನೀಶಂ
ಧುರದೊಳ್ಸಾಧಿಸಿದ ಸರ್ವಪೃಥ್ವೀತಳಮಂ ।
ಸ್ಥಿರವಾಗಿ ಬಾಳ್ವ ಪರಿಯಂ
ವಿರಚಿಸಿದಂ ಶಿವನೃಪಾಲನರಿಹೃಚ್ಛೂಲಂ ॥ ೨೨

ಮತ್ತಮದಲ್ಲದಾ ಶಿವಪ್ಪನಾಯಕಂ ತೀರ್ಥರಾಜಪುರೀಕ್ಷೇತ್ರದೊಳ್ ತುಂಗಭದ್ರಾನದೀತೀರದೊಳ್ ಶ್ರೋತ್ರಿಯಬ್ರಾಹ್ಮಣರ್ಗೆ ಕಾಲಪುರುಷ ದಾನ ತುಲಾಪುರುಷದಾನ ಸಹಸ್ರಗೋಪ್ರದಾನಂಗಳಂ ರಚಿಸಿ ಕಾಶೀಕ್ಷೇ

ತ್ರದೊಳನೇಕದಾನಧರ್ಮಪೂಜೆಗಳ್ ನಡೆವಂತು ನಿಯಾಮಕಂಗೈಸಿ ತಾಂ
ಸೋಮವಾರವ್ರತನಿರತನೆನಿಸಿ ರಾಜಮುದ್ರಾಜ್ಞಾಶಕ್ತಿಯಿಂ ಸದ್ಧರ್ಮದಿಂ
ರಾಜ್ಯಪ್ರತಿಪಾಲನಂಗೈದನಂತುಮಲ್ಲದೆಯುಂ ॥ ೧೩

ಪ್ರಜೆಗಳುಸಿರ್ವ ಬಿನ್ನಪವನಾಲಿಸಿಯೊಳ್ಗರೆಕಾಳ್ಪುರಂಗಳಂ
ಸೃಜಿಯಿಸಿ ಮೇಣವರ್ಗೆ ಕರಮೂಲಧನಂಗಳನಿತ್ತು ಬಿತ್ತುಮಂ ।
ನಿಜಮೆನಲಿತ್ತು [1] ಗೋಷ್ಪದದಸಿತ್ತಿಳೆಯುಂ ಮಿಗೆ ಬೀಳಲೀಯದಾ
ದ್ವಿಜಸುರಪಾದಪಂ ಶಿವನೃಪಂ ಮಿಗೆ ಗೈಮೆಗೆ ತಂದನಳ್ತಿಯಿಂ ॥ ೧೪

ಅಂತುಮಲ್ಲದೆ ॥ ೧೫

ಕಡುಗಿ ದುರಾಸೆಯಿಂ ಪ್ರಜೆಗಳಂ ನೆರೆನೋಯಿಸದಾನೃಪಾರ್ಥಮಂ
ಬಿಡದೆ ತದೀಯಸೌಮ್ಯಸುಪದಾರ್ಥಗಳಂ ಲವಮಾತ್ರಮಾದೊಡಂ ।
ಪೊಡವಿಯನ್ನೈದೆ ಪಾಳ್ಗಡಪಲೀಯದೆ ಬಲ್ಪಿಡಿದಂಕೆಯ್ಝುಂಕೆಯಿಂ
ನಡೆಯಿಪನಿಂತು ನಾಡಿನಧಿಕಾರವನೇಳ್ಗೆಗೆ ತಂದನುರ್ವಿಯುಂ ॥ ೧೬

ಕಂಡು ಪಣವಿತ್ತು ನಡೆಯದೆ
ಚಂಡಿಸಿ ಪುಂಡೆದ್ದು ಪರಿವ ದುಷ್ಪ್ರಜೆಗಳುಮಂ ।
ದಂಡಿಸಿಯುಳ್ಳರ್ಥವನೀ
ಳ್ಗುಂಡಿಗೆಗೆಡೆಗೈಸಿ ತೆತ್ತರಂ ರಕ್ಷಿಸಿದಂ ॥ ೧೭

ಕೂಟವನೊಡರಿಪರಂ ಬ
ಲ್ಗೋಟೆಗಳೊಳ್ಬಂದಿಗಿಕ್ಕಿ ತುಂಟರ್ಕಳ ಕಾ ।
ಲಾಟವನುಡುಗಿಸಿ ಧೂರ್ತರ
ಗೋಟುಗಳಂ ಕೊಂಡು ರಾಜ್ಯಮಂ ಪಾಲಿಸಿದಂ ॥ ೧೮

ನೆರೆವರಿ ವರಾಡ ಕಡ ಮಸ
ವರಿ ವಂಚನೆ ವಟ್ಟ ಲಂಚ ಹೊರನಿಲ ಹಸ್ತಾಂ ।
ತರಸಂಜಾಯಿತನಿಲಗಳ
ಪರಿವಿಡಿಯಂ ನಿಲಿಸಿ ಸೀಮೆಯುಂ ರಕ್ಷಿಸಿದಂ ॥ ೧೯

---

[1] ಗೊಪ್ಪವದನಿತ್ತಿ (ಕ.ಬ.)

ಕಳದುಳದ ಲೆಕ್ಕಗುತ್ತಿಗೆ
ಗಳ ನಿಲಹದ ನಾಮಿಯಡ್ಡವಂತಿಕೆ ನಾನಾ |
* ಸುಲಿಗೆ ಲಾವಣಿಗೆಯೆಂಬೀ
ಗಳಬಳಮಂ ನಿಲಿಸಿ ಸುಂಕಮಂ ಬಾಳಿಸಿದಂ ‖ ೩೦

* ಕಟ್ಟು ಕೈವಾಲೆ ಸಮೆಯುಂ
ತಟ್ಟನ ಮರೆವಣಿಗೆ ಪೊಮ್ಮು ಕೈದುಡುಕುಗಳಂ |
ಪುಟ್ಟಿಸಿ ಪೊಣರ್ವ ಸೆಟ್ಟಿಗ
ಳಟ್ಟುಳಿಯುಂ ನಿಲಿಸಿ ಸುಂಕಮಂ ಬಾಳಿಸಿದಂ ‖ ೩೧

ಪುಸಿ ಠಕ್ಕು ಠೌಳಿ ಚೌರ್ಯಂ
ಪಿಸುಣನ್ಯಾಯಂ ವಿರೋಧಮಪಹೃತಿ ಭಯಮುಂ |
ಬ್ಬಸ ಮೋಸ ಪಾದರಂಗಳ
ಪೆಸರುಸಿರಲ್ಕಿಲ್ಲಮೆನಿಸಿ ಪೊರೆದಂ ಧರೆಯಂ ‖ ೩೨

ಕರಣಿಕೆಯುನಿತ್ತು ಸಿಸ್ತಿನ
ಬರಹಗಳಿಂದಾಯಬೀಯಮಂ ಬಣಿತೆಗೆ ತಂ |
ದುರುದುರ್ವ್ಯಯಂಗಳಂ ತಾಂ
ವಿರಚಿಸದರ್ಜಿಸಿದನೊಪ್ಪುವಗಣಿತಧನಮಂ ‖ ೩೩

ದುಷ್ಟಜನರ್ಕಳ ಶಿಕ್ಷಿಸಿ
ಶಿಷ್ಟರನುರೆ ಪೊರೆದು ಸಂತತಂ ಶಿವಪೂಜಾ |
* ನಿಷ್ಠನೆಂದೆನಿಸಿ ಲೋಗರ
ರಿಷ್ಟಗಳಂ ತವಿಸಿ ಪೊಡವಿಯಂ ಪಾಲಿಸಿದಂ ‖ ೩೪

ಪರಿವಹಿಯುಂ ನಿಲಿಸಿದನಾ
ದೊರೆ ತನ್ನಯ ಮೇಲಣಾಣೆ ಘೋಷಣೆಯಿಂದಂ |
ಪರವಸ್ತುವನೊಯ್ದಡಗಿದ
ನರಿಯಂ ಪಿಡಿತರಿಸಿ ಶಾಸ್ತಿಯಂ ಮಾಡಿಸಿದಂ ‖ ೩೫

ಪಲವುಕ್ತಿಗಳಿಂದೇಂ ರಿಪು
ಕುಲಭೈರವಶಿವನೃಪಾಲಗೆಣೆಯಹ ನೃಪರೀ ।
ಕಲಿಯುಗದೊಳಿಲ್ಲಮವನಿಪ
ಕುಲಕಂ ತಾಂ ತಿಲಕನೆನಿಸಿ ರಾರಾಜಿಸಿದಂ ॥ ೩೬

ಇಂತು ನೆಗಳ್ತೆವೆತ್ತ ಭುಜಬಲಪ್ರತಾಪಾತಿಶಯದಿಂ ಸದ್ಧರ್ಮದಿಂ ರಾಜ್ಯವನಾಳುತಿರ್ದಾ ಶಿವಪ್ಪನಾಯಕಂ ವಿಕಾರಿಸಂವತ್ಸರದಲ್ಲಿ ರಾಯಸಂಸ್ಥಾನವನುದ್ಧರಿಸಲ್ವೇಳ್ಕೆಂದು ಮನಂದಂದು ಸೋದೆ ಬಿಳಗೆ ತರಿಕೆರೆ ಹರಪುರ ಮುಂತಾದ ನಾಡ ದೊರೆಗಳ ಸೈನ್ಯಸ್ವಸೈನ್ಯಂವೆರಸು ತೆರಳ್ದು ಬೇಲೂರಂ ತೆಗೆದುಕೊಂಡು ಶ್ರೀರಂಗರಾಯರ್ಗಿತ್ತು ರಾಯಸಂಸ್ಥಾನಮಂ ನೆಲೆಗೊಳಿಸಿ ನಿಲಿಸಿ ತದ್ರಾಯರಿಂ ಶಂಖ ಚಕ್ರ ಸ್ಥೂಲನೀಲಪರಿಶೋಭಿತವಜ್ರಖಚಿತಕರ್ಣಾಭರಣಂ ಮುಂತಾದ ಬಿರುದುಗಳಂ ಪಡೆದು ರಾಮಬಾಣನೆಂಬಾನೆಯುಂ ಕೊಡಲದಂ ಪರಿಗ್ರಹಿಸಿ ನಿಲಿಸಿ ಪಟ್ಟಣದ ಮುಖಕ್ಕೆ ವಂಡಂ ತೆರಳ್ದೈದಿ ಗ್ರಾಮದ ಸಮೀಪಮಂ ಸಾರ್ದು ಪಾಳೆಯಮನಿಳಿದಿರಲಾ ಪ್ರಸ್ತಾವದೊಳ್ ॥ ೩೭

ಘನತರದುರ್ಮದಾಂಧಮಹಿಸೂರಮಹೀಪನ ನೇಮದಿಂ ಮಹಾ
ವನಧಿ ಯುಗಾಂತದೊಳ್ಕವಿವವೊಲ್ಬಹುಸೈನ್ಯಸಮೇತನಾಗಿ ಭೋಂ ।
ಕನೊದವಿ ತನ್ನುವಂ ಪಿಡಿಯಲ್ಕೈದಿದ ತದ್ದಳವಾಯಿ ಹಂಪವ
ರ್ಯನನೆಸೆವಾಜಿಯೊಳ್ಪಿಡಿದು ತಾಂ ಜಯಲಕ್ಷ್ಮಿಯನಾಂತನಾನೃಪಂ ॥ ೩೮

ಆ ರಣದೊಳೊದವಿದುರುಮದ
ವಾರಣಗಳನಶ್ವಚಯುವ ಷೋಡಶಸಂಖ್ಯಾ ।
ಧೀರಗುರಿಕಾರರಂ ಬಹು
ವೀರರ್ಕಳನಾಕ್ಷಣದೊಳ್ ಕೈಸೆರೆವಿಡಿದಂ ॥ ೩೯

ಜವನ ಗಡಾವಣೆ ಲಯಮೃ
ತ್ಯುವಿನುರವಣೆ ಕಾಲರುದ್ರನತ್ಯಾಟೋಪಂ ।
ಶಿವಭೂಪನ ಕೋಪದ ಪವ
ಣೆವರಿಂಬಲ್ಪಂಕದೆಡೆಯೊಳನ್ನೇನುಸಿರ್ವೆಂ ॥ ೪೦

ಮಿಗವಿಂಡುಗಳಂ ಪೆರ್ಬುಲಿ
ಯುಗಿವೆಂತಿಭಚಯುವನಲೆವ ಕೇಸರಿಯೆನೆ ಪೊ।
ಕ್ಕುಗಿಬಗಿದರಿಗಳ ಶಿರಗಳ
ಜಗತಿಯನೊಟ್ಟಿಸಿದನಾಜಿಯೊಳ್ ಶಿವಭೂಪಂ ॥ ೪೧

ಇಂತವರೀ ಜಗತಿಯಗ್ರದೊಳಸೆವ ಸಿಂಹಾಸನದೊಳ್ಕುಳ್ಳಿರ್ದು ಸೇನಾಸಮೂಹಂಗಳಂ ಸಲಾಮುಗಳಂ ಕೈಕೊಂಡು ಧರ್ಮಗಹಳೆಯುಂ ಪಿಡಿಸಿಯನಂತರಂ ॥ ೪೨

ಗ್ರಾಮದ ಮಸಲತಿಯೊಳ್ನು
ಸ್ಸೀಮಪ್ರತಿಭಟರನಲೆದು ತತ್ಕೋಂಟೆಯುಮಂ।
ಭೂಮಿಪತಿಲಕಂ ರಿಪುಕುಲ
ಭೀಮಂ ಶಿವಭೂಪನಾಜಿಯೊಳ್ಸಾಧಿಸಿದಂ ॥ ೪೩

ಮತ್ತಮದಲ್ಲದೆ ॥ ೪೪

ಧಾರಿಣಿಗಪ್ರತಿಯುಹ ಕಾ
ವೇರಿಯ ಪೆರ್ಬೊಳಗೆ ಸೇತುವಂ ವಿರಚಿಸಿ ತ।
ದ್ಧೀರಶಿವಾವನಿಪಂ ಮೈ
ಸೂರರಸನ ಗಾಢಗರ್ವಮಂ ಮುಗ್ಗಿಸಿದಂ ॥ ೪೫

ಇಂತಾ ಶಿವಪ್ಪನಾಯಕಂ ಕಾವೇರೀನದಿಗೆ ಸೇತುವಂ ಕಟ್ಟಿಸಿ ನಿಜಸೈನ್ಯಸಮೂಹಮಂ ತೆರಳ್ಚಿ ಪಾಳೆಯುವನಿಳಿದು ಪಟ್ಟಣದ ಕೋಂಟೆಯಂ ವೇಷ್ಟೈಸಲವೆಯುರ್ದ್ಧಮುಖದೊಳ್ ನಿತ್ತರಿಸಲಮ್ಮದೆ ತಮ್ಮ ಸಹಾಯಕ್ಕೆ ವಿಜಾಪುರದಿಂ ಸೈನ್ಯಂವೆರಸು ಬಲೂಲಖಾನನಂ ತೆರಳ್ಚೆ ತಲ್ಲಂತ್ರಮುಖದಿಂದಾಬಲೂಲಖಾನನಂ ಪಿಂದೆಗೆಸಿ ಕೋಂಟೆಯಂ ವಶಂಗೈವ ನಿತರೊಳವರ್ಕಂಗೆಟ್ಟು ಕೋಂಟೆಯಂ ವೇಷ್ಟೈಸಿದ ಗುರಿಮಾನಿಸರ್ಗಂ ಮತ್ತಂ ಕೆಲಂಬರ್ನಿರ್ಯೋಗಿಗಳ್ಗಂ ಪರಿಧಾನವನಿತ್ತಂತುಮಲ್ಲದಾಭಿಚಾರ ಹೋಮ ಮುಂತಾದ ದುಷ್ಕೃತ್ಯಂಗಳನೊಡರ್ಚಲ್ ದೇಹದೊಳಾಯಾಸಂ ಪುಟ್ಟಲಿಂತಪ್ಪ ಕಾಲದೊಳ್ ಶತ್ರುಸೀಮಾಸನ್ನಿವೇಶದೊಳಾವಿಲ್ಲಿರ್ಪುದನುಚಿತಮೆಂದು ಬಗೆದಾಶಿವಪ್ಪನಾಯಕಂ ಮುತ್ತಿಗೆದೆಗೆಸಿ ಮರಳ್ದು ಸ್ವಸೈನ್ಯಂವೆರಸು ವೇಣುಪುರವರಮಂ ಸಾರ್ದಿರುತ್ತುಮಿರ್ದಂ ॥ ೪೬

ರಾಜಾಧಿರಾಜನಾಶಿವ
ರಾಜಂ ಸದಸತ್ಪ್ರಪಾಲನಾಜ್ಞಾಬಲದಿಂ ।
* ರಾಜಮುದ್ರಾಧಿಕಾರದ
ತೇಜವನುಡುಗಿಸದೆ ಪೊರೆದನವನೀತಳಮಂ ॥ ೪೭

ಇಂತಾ ಶಿವಪ್ಪನಾಯಕಂ ತನಗೆ ರಾಜಪಟ್ಟವಾದ ಶಾಲಿವಾಹನ ಶಕ ವರ್ಷ ೧೫೬೭ನೆಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ದ್ವಾದಶಿಯಾರಭ್ಯ ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ೧೦ರ ವರೆಗೆ ವರ್ಷ೧೪ ತಿಂಗಳ್೯ ದಿನ೨೮ ಪರ್ಯಂತಂ ಸದ್ಧರ್ಮದಿಂ ರಾಜ್ಯಪರಿಪಾಲನಂಗೈದು ಶಿವಸಾಯುಜ್ಯಮಂ ಪಡೆದನಂತರಂ, [1]

---

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೮೨ನೆಯ ಶಾರ್ವರಿಸಂವತ್ಸರದ ಆಶ್ವಯುಜ ಶುದ್ಧ ೧೧ಯಲ್ಲಿ ಆ ಶಿವಪ್ಪನಾಯಕರನುಜರಾದ ವೆಂಕಟಪ್ಪನಾಯಕರ್ಗೆ ವೇಣುಪುರದರಮನೆಯೊಳ್ ರಾಜಪಟ್ಟಂ.

ಅರಿಭೀಕರಶಿವಭೂಪನ
ತರುವಾಯಿಯೊಳಾತನನುಜವೆಂಕಟಭೂಭೃ ।
ದ್ವರನಾಳ್ದಂ ಧರೆಯಂ ಸು
ಸ್ಥಿರೆಯಂ ವಿಬುಧಾಳಿ ಮೆಚ್ಚೆ ಕತಿಪಯದಿವಸಂ ॥ ೪೮

ಆ ಚಿಕ್ಕವೆಂಕಟಪ್ಪನಾಯಕಂ ತನ್ನಗ್ರಜನಾದ ಶಿವಪ್ಪನಾಯಕರಾಳ್ದ ದೇಶ ಕೋಶ ಪ್ರಜೆ ಪರಿವಾರಂಗಳಂ ಪ್ರತಿಪಾಲಿಸುತ್ತುಂ ಶಿವ

---

[1] ಈ ಶಿವಪ್ಪನಾಯಕರ ಕಾಲದಲ್ಲು ಬದುಕುಮಾಡಿದವರು :—ಪ್ರಧಾನಿದೊಡ್ಡ ತಮ್ಮರಸಯ್ಯ, ಗರಿತು (?) ಬಸಪ್ಪದೇವರು, ಚೌಡಪ್ಪಯ್ಯ, ಕರಣಿಕಅಪ್ಪಣ್ಣಯ್ಯ, ತಿರುಮಲಯ್ಯ, ಬಿಳಿಗಿ ಕೋನಪ್ಪಯ್ಯ, ವೆಂಕಟಯ್ಯ, ಬಿಳಿಗಿ ವೆಂಕಪ್ಪಯ್ಯ, ಸರಜಾಶಂಕರನಾರಾಯಣಯ್ಯ, ಹಾರೋ ಮಾಬರಸಯ್ಯ, ನಿಯೋಗಿ ರಾಮಚಂದ್ರಯ್ಯ, ಹೂವಯ್ಯ, ಚಿಕ್ಕವೆಂಕಟಪ್ಪನಾಯಕರು, ಶರಜಾರಾಯ, ಶರಜಾ ವೆಂಕಟಪ್ಪಯ್ಯ, ಕೋಳಾಲದ ವೆಂಕಪ್ಪಯ್ಯ, ಕೃಷ್ಣಪ್ಪಯ್ಯ, ಸಬ್ನಿಸ ದೊಡ್ಡಕೃಷ್ಣಪ್ಪಯ್ಯ, ಚಿಟನಿಸ ಕರೆವೆಂಕಪ್ಪಯ್ಯ, ಜೋಯಿಸರ ವೆಂಕಪ್ಪಯ್ಯ, ಪಟ್ಟೆ ಗಂಗಾಧರಯ್ಯ, ರಾಯಸದ ಮೃತ್ಯುಂಜಯದೇವರು, ಗರಜಿನ ಮಲ್ಲಪೊಡೆಯರು, ಸೋಮಪ್ಪದೇವರು, ಹೊನ್ನೇನಾಯಕನ ವೆಂಕಟಯ್ಯ, ಪಟ್ಟಣಸೆಟ್ಟಿ, ಲಿಂಗಪ್ಪಸೆಟ್ಟರು ಮುಂತಾದವರು, (ಕ)

ಪ್ಪನಾಯಕರ ಕುಮಾರರಾದ ಭದ್ರಪ್ಪನಾಯಕರಂ ಪ್ರೀತಿಯಿಂ ಪೋಷಿಸುತ್ತುಂ ತಮ್ಮ ಸಹೋದರಿಯರಾದ ಪರಮೇಶ್ವರಮ್ಮ ನಾಗಾಜಮ್ಮ ಚನ್ನಾಜಮ್ಮನವರನತ್ಯಂತ ಪ್ರೇಮಾತಿಶಯದಿಂ ನಡೆಸಿಕೊಳುತ್ತುಂ, ಪಟ್ಟಣದವರ್ಮೇರೆವರಿದೆಡೆಯಾಪದಂತು [1]ಶ್ರೀರಂಗರಾಯರಸಮೀಪದೊಳ್ಗಡಿಮುಖದೊಳ್ಸೈನ್ಯಸಹಿತಮಳಿಯಶಿವಲಿಂಗನಾಯಕನಂ ನಿಲಿಸಿ ಪರಾಕ್ರಮಾತಿಶಯದಿಂ ರಾಜ್ಯಂಗೆಯ್ಯುತಿರ್ದನಂತುಮಲ್ಲದೆಯುಂ ॥ ೫೦

ಗಡಿಗಳೊಳ್ಳೈದೆ ಬಾಧಿಪ ತುರುಷ್ಕರ ಸೈನ್ಯವನ್ಯೈದೆ ಮಗ್ಗಿಸು
ತ್ತ್ರಿಡವೆಲದುರ್ವಿಪಾಲಕರೊಳುನ್ನತತೇಜವನಾಂತು ದುಷ್ಟರಿಂ ।
ಗೆಡೆಗುಡದುತ್ತಮೋತ್ತಮರನೋವುತಧರ್ಮವನೊತ್ತಿ ಧರ್ಮದಿಂ
ಪೊಡವಿಯನಾಳ್ದನಾ ಶಿವನೃಪಾಲಸಹೋದರನರ್ಕಭಾಸುರಂ ॥ ೫೧

ಇಂತೀ ಚಿಕ್ಕವೆಂಕಟಪ್ಪನಾಯಕಂ ತನಗೆ ರಾಜಪಟ್ಟವಾದ ಶಾಲಿವಾಹನ ಶಕ ವರ್ಷ ೧೫೯೪ನೆಯ ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ೧ಯಾರಭ್ಯ ಪ್ಲವ ಸಂವತ್ಸರದ ಭಾದ್ರಪದ ಶುದ್ಧ ೧೪ವರೆಗೆ ವರ್ಷ ೦ ತಿಂಗಳು ೧೧ ದಿವಸ೧೪ ಪರ್ಯಂತಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈದಂ ॥ [2]

ಸಪ್ತಮಾಶ್ವಾಸಂ ಸಂಪೂರ್ಣಂ.

---

[1] ಶ್ರೀ ಸೋಮಶೇಖರನಾಯಕನ (ಕ)

[2] ಈ ಚಿಕ್ಕವೆಂಕಟಪ್ಪನವರ ಕಾಲದಲ್ಲಿ ಬದುಕುಮಾಡಿದವರು:—ಪ್ರಾಕು ಶಿವಪ್ಪನಾಯಕರ ಕಾಲದಲ್ಲಿ ಬದುಕುಗಳ ಮಾಡಿದವರೆ; ಹೊಸತಾಗಿ ಬಾಳಪ್ಪ ಗೂಳಪ್ಪ.

ಈ ಶಿವಪ್ಪನಾಯಕರಿಗೆ ಇವರ ಪತ್ನಿಯರು ಲಿಂಗಮ್ಮಾಜಿ ನಾಗಮ್ಮಾಜಿ ಯುವರಿಗೆ ಸಹ ಶಿವಪ್ಪನಾಯಕರ ಸಂಗಡಲೆ ಬಿದುರೂರ ಹಳೆಯ ಮಠದಲ್ಲಿ ಸಮಾಧಿಯಾಯಿತು. ಅನಂತರಮಾಶಿವಪ್ಪನಾಯಕರ ಸಹೋದರ ವೆಂಕಟಪ್ಪನಾಯಕರಿಗೆ ಅವರ ಪತ್ನಿ ಮಲ್ಲಮ್ಮಾಜಿಯುವರಿಗೆ ಸಹ ಆ ವೆಂಕಟಪ್ಪನಾಯಕರ ಸಂಗಡಲೆ ಬಿದುರೂರು ಹಳೆಯಮಠದ ಸ್ಥಳದಲ್ಲು ಸಮಾಧಿ ಆಯಿತು.

ಈ ವೆಂಕಟಪ್ಪನಾಯಕರು ತಮ್ಮ ಅಗ್ರಜರಾದ ಶಿವಪ್ಪನಾಯಕರ ಮಗ ಭದ್ರಪ್ಪನಾಯಕರ ಅಳಿಯ ಶಿವಲಿಂಗನಾಯಕರ ಹುಕುಮಿನ ಮೇಲೆ ಚಿಟ್ಟಿ ಜಟ್ಟಿ ಯೆಂಬವನ ಕೈಯಿಂದ ಘಾತವಾಗಿ ಹೋದರು (ಕ)

# ಅಷ್ಟಮಾಶ್ವಾಸಂ



ಆ ಚಿಕ್ಕವೆಂಕಟಪ್ಪನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೮೩ ನೆಯ ಪ್ಲವ ಸಂವತ್ಸರದ ಭಾದ್ರಪದ ಶುದ್ಧ ೧೫ ಯಲ್ಲಿ ಶಿವಪ್ಪನಾಯಕರ ಜ್ಯೇಷ್ಠಪುತ್ರರಾದ ಭದ್ರಪ್ಪನಾಯಕರ್ಗೆ ವೇಣುಪುರದ ಅರಮನೆಯಲ್ಲಿ ರಾಜಪಟ್ಟಂ.

ಭಾವಿಸಲಾ ವೆಂಕಟಧರ
ಣೀವಿಭುವಿನನಂತರಂ ತದಗ್ರಜನಹ ಶೋ ।
ಭಾವಹಶಿವನೃಪನಾತ್ಮಜ
ನೀವಸುಧೆಯನಾಳ್ದನೆಸೆವ ಭದ್ರಪಭೂಪಂ ॥ ೧

ಅದೆಂತೆಂದೊಡಾಭದ್ರಪನಾಯಕಂ ತಮ್ಮ ತಂದೆ ಶಿವಪ್ಪನಾಯಕ ರಾಳಿಬರುತ್ತಿರ್ದ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಪರಿಜನ ಪುರಜನ ಸೇವಕರ್ಗಳಂ ಸಂರಕ್ಷಿಸುತ್ತುಂ, ತಮ್ಮನುಜ ಸೋಮಶೇಖರ ನಾಯಕರುಮಂ ಸೋದರತ್ತೆಯರಾದ ಪರಮೇಶ್ವರಮ್ಮ ನಾಗಾಜಮ್ಮ ನವರುಮಂ ಅಕ್ಕ ಸಿದ್ದಮ್ಮನುಮಂ ಪರಮಪ್ರೀತಿಯಿಂ ನಡೆಸಿಕೊಳುತ್ತುಂ ಸದ್ಧರ್ಮದಿಂ ರಾಜ್ಯಪರಿಪಾಲನಂಗೆಯ್ಯುತುಂ ವರ್ತಿಸುತ್ತುಮಿರ್ದಾಕಾಲ ದೊಳ್ ಮಾಯಾವಿಗಳ ಮೇಲಣ ರಾಜಕಾರ್ಯಾರ್ಥಂ ಅಳಿಯ ಶಿವಲಿಂ ಗಯ್ಯನಂ ಸೈನ್ಯಸಹಿತಂ ಪ್ರಯಾಣವನೊಡರ್ಚಿಸಲಾತಂ ತೆರಳ್ದು ಬೇಲೂರ್ಗೈದಿ ರಾಯರಂ ಸಂಧಿಸಿ ತತ್ಸೈನ್ಯಂವೆರಸು ಮುಂತೆರಳ್ದು ಮಾಯಾವಿಗಳ್ವೇಢೈಸಿದ ಹೆಬ್ಬಾಳಕೋಂಟೆಯಂ ಮುತ್ತಿಗೆದೆಗೆಸಿ ಮುಂ ತೈದಿ ನರಸಿಂಹಪುರಕ್ಕೆ ಮುತ್ತಿಗೆಯಿಕ್ಕಲವರ್ಕೈತಂದು ಕೋಣನೂರು ಕೋಂಟೆಯಂ ತೆಗೆದುಕೊಳಲಿವರತಿತ್ವರಿತದಿಂದಲ್ಲಿಗೈದಿ ತಳಸುರಂಗ

ಗಳಂ ನಡೆಸುತ್ತುಮಿರಲಾವೇಳೆಯೊಳ್ತ್ರೈಸೂರ ಮಹೀಪತಿಯನು
ಜ್ಞೆಯಿಂ ॥ ೨

ತಳತಂತ್ರಸಹಿತಮಲ್ಲಿಗೆ
ಕಳಲೆಯಕಾಂತಯ್ಯನೆಂಬ ಸೇನಾಧೀಶಂ ।
* ಘಳಿಲನ್ನೈತಂದು ಕಣಾಗಾ
ಲಿಳೆಯೊಳ್ಪೊಳೆಯುವನಿಳಿಯಲಂದವರ್ಗಿರ್ವರ್ಗಂ ॥ ೩

ಯುದ್ಧಂ ಪಣ್ಣಲ್ಶೌರ್ಯಸ
ಮುದ್ರಂ ಶಿವಲಿಂಗನಾಯಕಂ ಕೈಗೈದ ।
ತ್ಯುದ್ಧತರಿಪುಸುಭಟಾಸೃ
ಗ್ಬದ್ಧಾಸಿಕರಾಬ್ಜನೆನಿಸಿ ರಾರಾಜಿಸಿದಂ ॥ ೪

ಕೊಳುಗುಳದೊಳಾಂತ ಸುಭಟರ
ತಲೆಗಳನುರೆ ಕೇಣಗೊಂಡಿದಿರ್ಚಿದ ಬಲವ ।
ತ್ಕಳಲೆಯಕಾಂತಯ್ಯನ ಕೈ
ಚಳಕವನುರೆ ನಿಲಿಸಿ ಧುರದೆ ಮುರಿದೋಡಿಸಿದಂ ॥ ೫

ಇಂತು ಪಣ್ಣಿದ ಯುದ್ಧರಂಗದೊಳಾ ಶಿವಲಿಂಗನಾಯಕಂ ಕಳಲೆಯಕಾಂತಯ್ಯನದಟಂ ಮುರಿದು ಪಲಾಯನಂಗೊಳಿಸಲಾ ವೇಳೆಯೊಳ್ ವಿಧಿವಶದಿಂ ಶತ್ರುಸೈನ್ಯದ ಬಾಣಮುಪಾಯಸ್ಥಳಕಂ ತಾಗಿ ಶಿವಲಿಂಗನಾಯಕನಲ್ಲಿಯೇ ಶಿವಲೋಕಮಂ ಪಡೆಯಲಾವಾರ್ತೆಯಂ ಕೇಳ್ದು ಭದ್ರಪ್ಪನಾಯಕಂ ಪಡೆವೆರಸತಿತ್ವರೆಯಿಂ ದಾಳಿವರಿದಾ ಮಾಯಾವಿಗಳ ನಾಡೊಳಗಣ ಹೊನ್ನವಳ್ಳಿ ಚಿಕ್ಕನಾಯಕನಹಳ್ಳಿ ಕಂದುಗೆರೆ ಬೂದಿವಾಳ ಮುಂತಾದ ಸೀಮೆಗಳಂ ಕೊಂಡವರ ರಾಜ್ಯರಾಷ್ಟ್ರಮಂ ಪುಡಿಗೈಸಿ ಮರಳ್ದೈತಂದು ಸುಧಾಪುರದವರ ಗರ್ವೋದ್ರೇಕಮಂ ಮಗ್ಗಿಸಿ ತದ್ರಾಜ್ಯರಾಷ್ಟ್ರಂಗಳನೀಳ್ದು ಸೈನ್ಯಂವೆರಸು ಸಬ್ಬನೀಸಕೂಸಪ್ಪಯ್ಯನಂ ತೆರಳ್ಚಿ ದಿವಾಣದ ವಕೀಲಿತಿಯಾದ ಸೀರೆಡೆಕೋಂಟೆಗೆ ಮುತ್ತಿಗೆಗೈಸಲಾ ಪ್ರಸ್ತಾವದೊಳ್ ॥ ೬

ಸೋದೆಯುವರ್ಕಳುಸಿರ್ದಪಿ
ರ್‍ಯಾದಿಯನುರೆ ಕೇಳ್ದು ವಿಜಯಪುರದಧಿನಾಥಂ ।
ಏದುಲಶಾಹಂ ಪಡೆವೆರ
ಸೈದಿ ಕರಂ ತಾನೆ ನಿಂದು ಗಡಿಯೊಳ್ಧೃತಿಯಿಂ ॥ ೭

ಕರಿತುರಗಪತ್ತಿಸಹಿತಂ
ವರಶಾಜೆ ಬಲೂಲಖಾನ ಸೈದವಿಲಾಸಂ ।
ವೆರಸಿದ ಶರಜಾಖಾನನ
ನಿರದಲ್ಲಿಂದಂ ತೆರಳ್ಚಿ ಕೇಳ್ದೀಹದನಂ ॥ ೮

ಶಿವಭೂಪತಿಯ ತನೂಜಂ
ಸುವಿವೇಕಿಯೆನಿಪ್ಪ ಜಾತಪನ ಭದ್ರಪನಂ ।
ಜವದೆ ತೆರಳ್ಚಿಯುವನೊಡ
ನವಿರಳಸೇನಾಸಮೂಹವಂ ಬೀಳ್ಕೊಟ್ಟಂ ॥ ೯

ಇಂತಾ ಭದ್ರಪ್ಪನಾಯಕಂ ಜಾತಪನ ಭದ್ರಪನೊಡನಗಣಿತಸೇನಾಸಮೂಹವಂ ತೆರಳ್ಚಿ ಬೀಳ್ಕೊಟ್ಟು, ತಾಂ ಭುವನಗಿರಿಯ ದುರ್ಗದೊಳ್ನಲಲಂಬಲಿಗೊಳ್ಳದ ಬಳಿಯೊಳುಭಯಸೈನ್ಯಕ್ಕಂ ಕೈಗಲಸಿ ಮಹಾದ್ಭುತಮಾದ ಯುದ್ಧಂ ಪಣ್ಣಲಾವೇಳೆಯೊಳ್ ಜಾತಪನ ಭದ್ರಪನಂ ಮುರಿದಾತುರುಷ್ಕಸೈನ್ಯಮತಿತೀವ್ರಗತಿಯಿಂ ನಾಳವರಿಯುತ್ತೈದಿ ಬಿಲುಸಾಗರದ ಕಣಿವೆಯ ಮಾರ್ಗವಿಡಿದೈತಂದೊಳಪೊಕ್ಕು ತೊಡಸಿಹೊಳೆ ಪ್ರಾಂತದೊಳ್ಪಾಳೆಯವನಿಳದು ಬಳಿಕಂ ವೇಣುಪುರದ ಪರಿಸ್ತರಣಕ್ಕೆ ಮುತ್ತಿಗೆಯನಿಕ್ಕಿ ತತ್ಪರಿಸ್ತರಣಮಂ ಕೊಳಲ್, ಪಿಂತಣಿಂ ಪಾತುಶಾಹನೈತಂದು ಶೋಭಕೃತ್ಸಂವತ್ಸರದ ಕಾರ್ತಿಕ ಬಹುಳದಲ್ಲಿ ವೇಣುಪುರದ ಕೋಂಟೆಯರಮನೆಯೊಳಿಳದು ಬಳಿಕ್ಕಂ ಶಾಜೆ ಸೈದವಿಲಾಸ ಶರ್ಜಾಖಾನ ಮುಂತಾದ ವಜೀರರಂ ಸೈನ್ಯಂವೆರಸು ತೆರಳ್ಚಲವರ್ಗಳೈತಂದು ಭುವನಗಿರಿಯ ದುರ್ಗಮಂ ವೇಢೈಸಲ್, ಭದ್ರಪ್ಪನಾಯಕಂ ಧೈರ್ಯಂಗುಂದದೆ ನಿತ್ತರಿಸಿ ನಿಂದು ಹೇರಳಮಾದ ಸೇನಾಸಮೂಹಮಂ ನೆರಹಿ ಪಥ ಪೈಕ ಕಂಡಿ ಕಣಿವೆಗಳಂ ಕಟ್ಟಿಕೈಗೆಯ್ದು ಮಹಾದ್ಭುತಮಾದ ಯುದ್ಧಮಂ ರಚಿಸಿ ಯುವ

ನಸೈನ್ಯಮಂಪುಡಿಗೈಸಿ, ಮತ್ತಂ ತೋಪುಖಾನಿ ಸನ್ನಾಹತಂತ್ರಪ್ರಯೋಗಮುಖದಿಂ ಫೌಜಂ ಪುದೆಗೆಡೆಹಿ ಪೆಣಂಗಳಂ ಹರಹಿ ತಚ್ಛರಜಾಖಾನ ಸೈದವಿಲಾಸಖಾಜಿ ಮುಂತಾದವರಂ ಪಿಂದೆಗೆಸಿ ಪಲಾಯನಂಗೊಳಿಸಿ ಬಳಿಕ್ಕಂ ಹೂವಯ್ಯ ಮುಂತಾದ ನಿಯೋಗಿಗಳಂ ಕಳುಹಿ ಸಂಧಾನವನೊಡರ್ಚಿಸಿ ಇಂತು ಸಮರಸಂಧಾನಮುಖದಿಂ ಪಾತುಶಾಹನಂ ಪಿಂದೆಗೆಸಿ ಪರಮಪ್ರಖ್ಯಾತಿಯಂ ಪಡೆದು ಬಳಿಕ್ಕಂ ಭುವನಗಿರಿಯ ದುರ್ಗದಿಂದೆಳ್ತಂದು ವೇಣುಪುರವರಮಂ ಸಾರ್ದು ಭುಜಬಲಪರಾಕ್ರಮಾತಿಶಯದಿಂ ರಾಜ್ಯಂಗೆಯ್ಯುತಿರ್ದನಂತುಮಲ್ಲದೆಯುಂ ॥ ೧೧

ವರತೀರ್ಥವಳ್ಳಿಯೊಳ್ಭಾ
ಸುರತುಂಗಾತಟದೊಳೆಸೆವ ಭದ್ರಪಭೂಪೇ ।
ಶ್ವರನುರೆ ಸದ್ಬ್ರಾಹ್ಮಣ್ಯ
ಕ್ಕುರುತರಬಹುದಾನಧರ್ಮಮಂ ವಿರಚಿಸಿದಂ ॥ ೧೧

ಅವಿರಳತುಲಾಪುರುಷದಾ
ನವನೆಸೆಪ ಹಿರಣ್ಯಗರ್ಭದಾನವನೊಲವಿಂ ।
ಶಿವಭೂಪನ ಸುಕುಮಾರಂ
ತವೆ ವಿರಚಿಸಿ ಪರಮಸುಕೃತಗಳನಾರ್ಜಿಸಿದಂ ॥ ೧೨

ಕರಿತುರಗಗೋಹಿರಣ್ಯಾಂ
ಬರರಜತಸುರತ್ನಧಾನ್ಯಭೂಕನ್ಯಾಮಂ ।
ದಿರಮುಖ್ಯಮಾದ ನಾನಾ
ಸುರುಚಿರದಾನಗಳನಾನ್ನೃಪಂ ವಿರಚಿಸಿದಂ ॥ ೧೩

ಉಪನಯನಾದಿಸುದಾನಪ
ನಪರಿಮಿತಾನ್ನಪ್ರದಾನಮಂ ಸಂತಸದಿಂ ।
ದುಪಮಾತೀತಂ ಶಿವಭೂ
ಮಿಪನ ಸುತಂ ರಚಿಸಿ ಪಡೆದನತಿಶಯಯಶಮಂ ॥ ೧೪

ಅವನೀಶ್ವರಕುಲತಿಲಕಂ
ಶಿವಭೂಪನ ಪುಣ್ಯಪುತ್ರಭದ್ರಪಭೂಪಂ ।
ತವೆ ದೇಶಕೋಶದರ್ಥಂ
ಸವೆವನ್ನಂ ದಾನಧರ್ಮವಂ ವಿರಚಿಸಿದಂ ॥ ೧೫

ತರಣಿಜನಿಂ ಶಿಬಿ ಶಿಬಿಯಿಂ
ದುರುಬಲಿ ಬಲಿಯಿಂ ದಧೀಚಿಮುನಿಯಾಮುನಿಯಿಂ ।
ಕರಮಿಾವರೊಳಂ ಭದ್ರಪ
ಧರಣೀಶ್ವರನಧಿಕನೆನಿಸಿ ರಾರಾಜಿಸಿದಂ ॥ ೧೬

ಮತ್ತಮದಲ್ಲದೆ ॥ ೧೭

ಪರಮಶ್ರೋತ್ರಿಯರಹ ಭೂ
ಸುರರ್ಗಂ ಸುಕ್ಷೇತ್ರವೃತ್ತಿಗಳನಿತ್ತತಿಭಾ ।
ಸುರಭದ್ರರಾಜಪುರಮಂ
ಬುರುತರವಿತತಾಗ್ರಹಾರಮಂ ವಿರಚಿಸಿದಂ ॥ ೧೮

ಮತ್ತಮದಲ್ಲದಾ ಭದ್ರಪ್ಪನಾಯಕಂ ಸ್ವಪಿತೃ ಶಿವಪ್ಪನಾಯಕನ ಪೆಸರೊಳ್ ಶಿವರಾಜಪುರಮೆಂಬಗ್ರಹಾರಮುಮಂ ಕನಿಷ್ಠ ಪಿತೃವೆಂಕಟಪ್ಪನಾಯಕನ ಪೆಸರೊಳ್ ವೆಂಕಟಪುರಮೆಂಬಗ್ರಹಾರಮುಮಂ ವಿರಚಿಸಿ ವೃತ್ತಿಕ್ಷೇತ್ರಂಗಳಂ ಕಲ್ಪಿಸಿ ಭೂಸುರರ್ಗೆ ಶಿವಾರ್ಪಿತವಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ಮತ್ತಂ ಮುಳುವಾಗಿಲ ಕೃಷ್ಣಾನಂದಸ್ವಾಮಿಗಳ ಮಠಕ್ಕಂ ಹೇರಳವಾದ ಭೂಸ್ವಾಸ್ಥ್ಯಮಂ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತತಿಶಯಸುಕೃತವಿಶೇಷಂಗಳನುಪಾರ್ಜಿಸಿದನಂತುಮಲ್ಲದೆಯುಂ ॥ ೧೯

ನಾಶಂ ಬೊಂದದವೊಲ್ವ
ಷಾಶನಮಂ ಬ್ರಾಹ್ಮಣೋತ್ತಮರ್ಗಾಗಿಸಿ ಮೇ ।
ಣಾಶಿವನೃಪನ ತನೂಜಂ
ಕಾಶೀಧರ್ಮವ ಸುಸಾಂಗಮೆನೆ ವಿರಚಿಸಿದಂ ॥ ೨೦

ಮತ್ತಮದಲ್ಲದಾ ಭದ್ರಪ್ಪನಾಯಕನುಚಿತಮಾದ ಸ್ಥಳಂಗಳೊಳ್ ಮುಹತ್ತಿನ ಮಠಂಗಳಂ ಕಟ್ಟಿಸಿ ಶಿವಜಂಗಮಧರ್ಮಾರ್ಥಂ ಭೂಸ್ವಾಸ್ಥಗಳಂ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮುಂ ಬರೆಸಿತ್ತು ವಿಶೇಷಮಾಗಿ ಕಾಶೀಧರ್ಮಂಗಳ್ನಡೆವಂತು ಕಟ್ಟಳೆಯುಂ ರಚಿಸಿ ಪೂರ್ವಧರ್ಮಂಗಳಂ ಸಾಂಗಮಾಗಿ ನಡೆಸಿ ಕೊಲ್ಲೂರ ಮೂಕಾಂಬಿಕೆಯಮ್ಮನವರ ಪೂಜಾರ್ಥಂ ಹೇರಳಮಾದ ಭೂಸ್ವಾಸ್ಥೆಯುಂ ಬಿಡಿಸಿ ಶಾಶ್ವತಮಾದ ಧರ್ಮಕೀರ್ತಿಸುಕೃತಂಗಳನುಪಾರ್ಜಿಸಿ, ಮತ್ತಂ ದೇವತಾಯಾತ್ರೆಯುಂರಚಿಸಲ್ವೇಳ್ಕಂದು ಮನಂದಂದು ॥ ೨೧

ವೇಣುಪುರದಿಂ ತೆರಳ್ದು
ಕ್ಷೀಣಬಲಂ ಭದ್ರಭೂಮಿಪಂ ಕೊಲ್ಲೂರಂ ।
ಮಾಣದೆ ಪೊರ್ದಿ ಬಳಿಕ್ಕಾ
ಕ್ಷೋಣೀಶ್ವರನೆಸೆವ ವಸುಪುರವನುರೆ ಸಾರ್ದಂ ॥ ೨೨

ಕ್ರೋಡಪುರವರಮನಾನೃಪ
ಚೂಡಾಮಣಿಯೆಯ್ದಿ ಸಾರ್ದು ಕೋಟೀಶ್ವರಮುಂ ।
* ನೀಡುಮಲ್ಲಿಂ ತೆರಳ್ದು
ಳ್ನಾಡೊಳಧಿಕಮೆನಿಪ ಶೃಂಗಪುರಮಂ ಪೊಕ್ಕಂ ॥ ೨೩

ಮತ್ತಮದಲ್ಲದಾ ಭದ್ರಪ್ಪನಾಯಕಂ ಶೃಂಗಪುರದಿಂ ತೆರಳ್ದು ಕಿಗ್ಗಮುಂ ಸಾರ್ದು ಶೃಂಗೇಶ್ವರಸ್ವಾಮಿಯು ಸಂದರ್ಶನಂಗೈದಿಂತು ದೇವತಾಯಾತ್ರೆಯುಂ ವಿರಚಿಸುತ್ತುಂ ತತ್ತದ್ದೇವತಾಸಂದರ್ಶನಂಗೈದು ತತ್ತತ್ಪೂಜಾರ್ಥಂ ಭೂಸ್ವಾಸ್ಥಗಳಂ ಬಿಡಿಸಿ ಲೋಪಮಾಗದಂತು ಪೂಜಾವಿಭವಗಳ್ನಡೆವಂತು ನಿಯಾಮಕಂಗೈದು ಮರಳ್ದು ವೇಣುಪುರವರಮುಂ ಸಾರ್ದನಂತರಂ ॥ ೨೪

ಪಲಬಗೆಯ ದಾನಧರ್ಮಂ
ಗಳನನುವಿಂ ರಚಿಸಿ ಖಳರನಲೆದುತ್ತಮರಂ ।
ಸಲಹುತ್ತೆಡಬಲದ ನೃಪತಿ
ಗಳೊಳಗ್ಗಳನೆನಿಸಿ ಮೆರೆದನಾನೃಪತಿಲಕಂ ॥ ೨೫

ಈಪರಿಯೊಳ್ವೀರಭದ್ರಪ
ಭೂಪಂ ಭೂಪರ್ಗಧೀಶನೆಂದೆನಿಸಿ ಕರಂ ।
ವ್ಯಾಪಿಸೆ ಕೀರ್ತಿ ದಿಗಂತವ
ನಾಪುಣ್ಯಶ್ಲೋಕನಾಳ್ದನುರ್ವೀತಳವಂ ॥ ೨೬

ಈ ಭದ್ರಪ್ಪನಾಯಕರ್ ತಮಗೆ ಪಟ್ಟವಾದ ಶಾಲಿವಾಹನ ಶಕ ವರ್ಷ ೧೫೮೪ನೆಯ ಪ್ಲವ ಸಂವತ್ಸರದ ಭಾದ್ರಪದ ಶುದ್ಧ ೧೫ ಯಾರಭ್ಯ ಶೋಭಕೃತ್ಸಂವತ್ಸರದ ಫಾಲ್ಗುಣ ಶುದ್ಧ ೯ ವರೆಗೆ ವರ್ಷ ೨ ತಿಂಗಳು ೫ ದಿನ ೨೪ ಪರ್ಯಂತಂ ರಾಜ್ಯವಾಳಿ ಐಕ್ಯವಾದರ್ ॥ [1]

---

ಭದ್ರಪ್ಪನಾಯಕಂ ರಾಜ್ಯವಾಳ್ದ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೮೬ನೆಯ ಶೋಭಕೃತ್ಸಂವತ್ಸರದ ಫಾಲ್ಗುಣ ಶುದ್ಧ ೧೦ ಯಲ್ಲಿ ಶಿವಪ್ಪನಾಯಕರ ಕನಿಷ್ಠ ಪುತ್ರರಾದ ಭದ್ರಪ್ಪನಾಯಕರ ಸಹೋದರರಾದ ಹಿರಿಯಸೋಮಶೇಖರನಾಯಕರ್ಗೆ ವೇಣುಪುರದರಮನೆಯಲ್ಲಿ ರಾಜಪಟ್ಟಂ. ಆ ಸೋಮಶೇಖರನಾಯಕರ್ತಮಗೆ ಪಟ್ಟವಾದ ಶೋಭಕೃನ್ನಾಮ ಸಂವತ್ಸರದ ಫಾಲ್ಗುಣ ಶುದ್ಧ ೧೦ ಯಾರಭ್ಯ ವಿರೋಧಿಕೃತ್ಸಂವತ್ಸರದ ಮಾರ್ಗಶಿರ ಶುದ್ಧ ೧೧ ಯವರೆಗೆ ವರ್ಷ ೭ ತಿಂಗಳು ೯ ಪರ್ಯಂತಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈದ ರಾವಿವರಣಮಂ ಪದ್ಯರೂಪದಿಂ ಪೇಳ್ವನದೆಂತೆಂದೊಡೆ :—

ನಿರುಪಮಭದ್ರಪಭೂಪನ
ತರುವಾಯಿಯೊಳಾತನನುಜನತಿಶಯತೇಜಂ ।

---

[1] ಈ ಭದ್ರಪ್ಪನಾಯಕರ ಇಬ್ಬರು ಸ್ತ್ರೀಯರಿಗೂ ಈ ಭದ್ರಪ್ಪನಾಯಕರ ಸಂಗಡಲೆ ಬಿದರೂರ ಹಳೆಯಮಠದ ಕೊಪ್ಪಲ ಸ್ಥಳದಲ್ಲೂ ಸಮಾಧಿಯಾಯಿತು, (ಕ)

ಈ ಭದ್ರಪ್ಪನಾಯಕರ ಕಾಲದಲ್ಲು ಬದುಕು ಮಾಡಿದವರು :—ಪ್ರಧಾನಿ ಚೌಡಪ್ಪಯ್ಯ, ಜೋಯಿಸರ ವೆಂಕಪ್ಪಯ್ಯ, ಕರಣಿಕ ಬಿಳಿಗಿ ಕೋನಪ್ಪಯ್ಯ, ಲಕ್ಷ್ಮೀಪತಿಯಯ್ಯ, ಸಬ್ಬನೀಸ ಕೃಷ್ಣಪ್ಪಯ್ಯ, ಚಿಟನೀಸ ಕರೆವೆಂಕಪ್ಪಯ್ಯ, ಪುರುಷೋತ್ತಮಯ್ಯ, ರಾಮಚಂದ್ರಯ್ಯ, ಗರಜೆನ ಮಲ್ಲಪ್ಪೊಡೇರು, ಅಳಿಯಶಿವಲಿಂಗನಾಯಕ, ಪಟ್ಟಣಶೆಟ್ಟಿ ಬ(ಸವ) ಸೆಟ್ಟರು, ಲಿಂಗಾಪಂಡಿತ ಮುಂತಾದವರು, (ಕ)

ಮೆರಸೋಮಶೇಖರೇಂದ್ರಂ
ಸುರುಚಿರಗುಣಸಾಂದ್ರನಾಳ್ದ ನವಸೀತಳಮಂ ॥ ೨೩

ತತ್ಸೋಮಶೇಖರನಾಯಕಂ ತನ್ನಗ್ರಜಭದ್ರಪ್ಪನಾಳಿಬರುತಿರ್ದ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಪರಿಜನ ಸೇವಕಜನರಂ ಪ್ರತಿಪಾಲನಂಗೆಯ್ಯುತ್ತುಂ ಕೊಟ್ಟೆಪುರದ ಸಿದ್ಧಪ್ಪಶೆಟ್ಟರ ಕುಮಾರಿ ಚನ್ನಮ್ಮಾಜಿಯೆಂಬ ಪೆಣ್ಮಣಿಯನತ್ಯಂತಸಂಭ್ರಮದಿಂ ವಿವಾಹಮಾಗಿ ತಮ್ಮ ಸೋದರತ್ತಿಗಳಾದ ಪರಮೇಶ್ವರಮ್ಮ ನಾಗಾಜಮ್ಮ ಭಗಿನಿ ಸಿದ್ಧಮ್ಮ ದಾದಿ ಚನ್ನಮ್ಮನವರನತ್ಯಂತಪ್ರೀತಿಯಿಂ ನಡೆಸಿಕೊಳುತ್ತುಂ, [1] ಸುಖದಿಂ ರಾಜ್ಯಂಗೆಯ್ಯುತ್ತುಮಿರ್ದು ಮೈಸೂರವರ ಮದೋದ್ರೇಕಮಂ ಮುಗ್ಗಿಸಲ್ವೇಳ್ಕೆಂದು ಮನಂದಂದು ಸೈನ್ಯಂವೆರಸು ತೆರಳ್ದವರ ರಾಜ್ಯಮಂ ನಿಪಾತಮಂ ಗೈದನಂತರಂ ॥ ೨೪

ಬೆಕ್ಕೋಡಂ ಬೆಳಗೋಡಂ
ಮಿಕ್ಕ ಕಣತೂರನಬ್ಬಿಣವ [2] ಬೇಲೂರಂ ।
ಚಕ್ಕನೆ ಕೊಂಡಾ ಶಿವನೃಪ
ನಕ್ಕರಿನಣುಗಂ ಬಲಾತಿಶಯಮಂ ಮೆರೆದಂ ॥ ೨೫

ಇಂತಾ ಸೋಮಶೇಖರ ನಾಯಕಂ ಮಾಯಾವಿಗಳ ಮದೋದ್ರೇಕಮಂ ನಿವಾರಿಸಿ ಮರಳ್ದು ವೇಣುಪುರವರಮಂ ಸಾರ್ದನಂತರಂ ತರಿಕೆರೆಯ ಹನುಮಪ್ಪನಾಯಕಂ ಸ್ವಪತ್ನಿಯುಂ ಮಡಿಗೈದು ಉನ್ಮದಾವಸ್ಥೆಯಿಂ ಭ್ರಾಂತನಾಗಿ ಅವ್ಯವಸ್ಥಿತವ್ಯಾಪಾರದಿಂ ವರ್ತಿಸುತ್ತಿರ್ಪ ವಾರ್ತೆಯುಂ ಕೇಳ್ದು ಸಬ್ಬುನೀಸ ಕೃಷ್ಣಪ್ಪಯ್ಯನಂ ಸೈನ್ಯಂಗೂಡಿಸಿ ತೆರಳ್ಚಿಸಿ ಕಳುಪಿ ಕಾಮನದುರ್ಗಮಂ ತೆಗೆದುಕೊಂಡಾತನ ಕುಮಾರ

[1] ಹೂವಯ್ಯನ ಪುರುಷೋತ್ತಮಯ್ಯ, ದೇವುಗಳ ವೆಂಕಟಯ್ಯ, ರಾಯಸದ ರಾಮಯ್ಯ, ಸೀತಪ್ಪ, ಕೋಳಾಲದ ವೆಂಕಪ್ಪಯ್ಯ ಮುಂತಾದ ನಿಯೋಗಿ ಜನವರ್ಗಂಸು (ಕ)

[2] ನಬ್ಬಣತ (ಕ)

ಸೀತಾರಾಮಪ್ಪಯ್ಯನಾಯಕಂಗಿತ್ತು ತದ್ರಾಜ್ಯವಮಂ ನೆಲೆಗೊಳಿಸಿ ನಿಲಿಸಿ ಹನುಮಪ್ಪನಾಯಕನಂ ವೇಣುಪುರಕ್ಕೈದಿಸಿ ಪೂರ್ವದೀಪ್ರಕಾರದಿಂ ತರಿಕೆರೆಸಂಸ್ಥಾನಮನುದ್ಧರಿಸಿ ಪರಮಪ್ರಖ್ಯಾತಿಯುಂ ಪಡೆದು ವಿರಾಜಿಸು ತ್ತಿರ್ದನಂತುಮಲ್ಲದೆಯುಂ ॥ ೩೦

ಉರುತರಗರ್ವೋದ್ರೇಕದ
ಭರದಿಂ ಬೆರೆತಿರ್ಪ ತುಳುವಮನ್ನೆಯರದಟಂ ।
ಮುರಿದು ಪಣಗೊಂಡು ಮಾರ್ಮಲೆ
ತರಿಗಳ ನಿಗ್ರಹಿಸಿ ಬಾಹುಬಲಮಂ ಮೆರೆದಂ ॥ ೩೧

ವರರಾಜನೀತಿಮಾರ್ಗದ
ನಿರುಗೆಯುನತಿಗಳೆಯದಿಂತು ತೇಜೋಬಲದಿಂ ।
ಧುರಧೀರಸೋಮಶೇಖರ
ಧರಣೀಶಂ ಧರ್ಮದಿಂದಮಿಳೆಯಂ ಪೊರೆದಂ ॥ ೩೨

ಇಂತಾ ಸೋಮಶೇಖರನಾಯಕಂ ಸದ್ಧರ್ಮದಿಂ ರಾಜ್ಯಪ್ರತಿಪಾ ಲನಂಗೆಯ್ಯುತ್ತುಂ ಸುಖಮಿರ್ಪ ಕಾಲದೊಳ್, ಬರಮೆನಿಪ್ಪುತನೆಂ ಬೊರ್ವ ಕ್ಷುಲ್ಲಕಂ ನೀಮಾನೆಯುಮದಮಂ ಸೇವಿಸಲ್ ಶರೀರದೊಳಾವು ದರಲ್ಲಿಯುಂ ಬಲಕರಮಾಗಿರ್ಪುದೆಂದೊಡಂಬಡಿಸಲ್, ದೈವವಶದಿಂದಾ ದುಬೋಧೆಗೊಡಂಬಟ್ಟು ಸೋಮಶೇಖರನಾಯಕನಾನೆಯ ಮದಮಂ ಸೇವಿಸಿ ತನ್ಮೂಲದಿಂದೊಗೆದುನ್ಮಾದಾವಸ್ಥೆಯಿಂ ಭ್ರಮಿತನುಂ ನಿತ್ಯಮ ವ್ಯವಸ್ಥಿತಚಿತ್ತನುಮಾಗಿ ಕ್ಷುದ್ರಜನರೊಡನೆ ಖೇಳಮೇಳದಿಂ ಸ್ವೇಚ್ಛಾ ವ್ಯಾಪಾರದಿಂ ಮನಂಬಂದಂತೆ ವರ್ತಿಸುತ್ತುಮಿರಲಾ ಪ್ರಸ್ತಾವದೊಳ್ ನಿಜಸಂಸ್ಥಾನದೊಳಿರ್ಪ ಕುಹಕಿನಿಯೋಗಿಗಳೊಡರ್ಚಿದ ಪಿತೂರಿ ಯಿಂ [1] ॥ ೩೩

ವಿಜಯಪುರವರ್ತಿಯೆನಿಸುವ
ಮುಜಬರಖಾನಂ ತೆರಳ್ದು ಬೆನ್ನೋಲೆಪಂತಂ ।

1 ಪಿತುಮೆಯಿಂ (ಬಕ)

ನಿಜಸೈನ್ಯಂವೆರಸ್ಯೆತಂ
ದು ಜವದೆ ಮಹನವಮಿಯುಲೊಳಂ ತಾನಿರುತ್ತುಂ ॥ ೩೪

ಖಳರ ಕುಮಂತ್ರಕ್ಕೊಡವೆ
ಟ್ಟಳವಿಂ ತತ್ಸೋಮಶೇಖರೇಂದ್ರನನಿರಿದಂ ।
ದುಳದಿರೆ ತನ್ನೃಪನಂಗನೆ
ಲಲನಾಮಣಿ ಚನ್ನಮಾಂಬೆ ಕೇಳ್ದೀಕಥೆಯಂ ॥ ೩೫

ಆ ಜಿನ್ನೋಪಂತನ ಭಟ
ರಾಜಿಯನಾಭಟರೊಳಧಿಕರಂ ಬಹುಮುಖದಿಂ ।
ದಾಜಿಯೊಳ ಕೊಲಿಸಿ ಚನ್ನ
ವ್ವಾಜಿ ಕೃತಾಂತನ ಭಟರ್ಗೆ ಕೈವರ್ತಿಸಿದಳ್ ॥ ೩೬

ಮತ್ತಮದಲ್ಲದೆ ॥ ೩೭

[1] ಕಂಗೆಯುಹನುಮಹನಸಿಯಿಂ
ಕಂಗೊಳಿಪ ತದೀಯಶೇಖಬಾಬನೆನಿಪ್ಪ ।
ತ್ತುಂಗಪಟುಭಟನ ಶಿರಮಂ
ಸಂಗರದೊಳ್ತಾಯ್ನಿ ಮರೆದಳತಿವಿಕ್ರಮವಂ ॥ ೩೮

ಕುಹಕಕೊಳಗಾದ ಜನರಂ
ಬಹುಮುಖದೊಳ್ಶಿಕ್ಷೆಗೈಸಿ ಕೊಪಸಿಯು ಬಯಲ ।
ಲ್ಲಿಹ ಜಿನ್ನೋಪಂತನುಮಂ
ಸಹಸದಿನೆಬ್ಬಟ್ಟಿ ಕೋಂಟೆಯುರಲೂಟಿಸಿದಳ್ ॥ ೩೯

* ಬರಮೊಮಾವುತ ಮಸೂದರ
ನಿರದೋಡಿಸಿ ಪರಮಧೂರ್ತ ಪೊಳೆಯುಹನದಟಂ ।
ಮುರಿದು ಕೆಲಂಬರ ದುಷ್ಟರ
ನಿರವಿಯನಾಕ್ಷಣದೆ ಶಾಸ್ತಿಯಂ ಮಾಡಿಸಿದಳ್ ॥ ೪೦

---

1 ಈ ಪದ್ಯವು ಓಲೆಯ ಪುಸ್ತಕದಲ್ಲಿಲ್ಲ.

ತತ್ಸೋಮಶೇಖರನಾಯಕರ ಪಟ್ಟದರಸಿ ಚನ್ನಮ್ಮಾಜಿ ತನ್ನ ಪತಿಗೆ ವಿಘಾತಿಯಂ ನೆನೆದ ಕುಹಕಿಜನರ್ಕಳನೀಪರಿಯಿಂ ಶಿಕ್ಷೆಗೈಸಿ ವರ್ತಿಸುತ್ತುಮಿರಲ್ತದನಂತರಂ ರಾಜ್ಯಾಧಿಕಾರವನಪೇಕ್ಷಿಸಿ ಕುಹಕಿಗಳ ದುರ್ಬೋಧೆಗೊಳಗಾದ ಮೈದುನ ಬಸವಲಿಂಗನಾಯಕನಂ ಸ್ಥಳಾಂತರಕ್ಕೆ ಕಳುಹಿ ಅಂಗವಿಕಲನಂ ಮಾಡಿಸಿ ರಾಜ್ಯಂಗೆಯ್ಯುತ್ತುಮಿರಲ್, ಮತ್ತಂ ಕ್ವಚಿತ್ಕಾಲದೊಳ್ ಮರೆಬೋವ ಕಂದಾಚಾರದ ಲಕ್ಷ್ಮಯ್ಯ, ವೀರಭದ್ರಯ್ಯ ಮುಂತಾದ ಕೆಲಂಬರ್ಕೂಡಿ ಚನ್ನಮ್ಮಾಜಿಯಂ ಮಾಣ್ದು ರಾಜತ್ವಕ್ಕೆ ಬೇರೊರ್ವನನಧಿಕಾರಿಯಂ ಮಾಡಿ ನಡೆಸಬೇಕೆಂದು ದುರಾಲೋಚನೆಯಂ ರಚಿಸಿ ಪ್ರಾಕು ಹೊಸಂಗಡಿ ಪರಿಸ್ತರಣದೊಳಂಕೆಯೊಳಿರುತಿರ್ದ ಅಂಧಕವೆಂಕಟಯ್ಯಂಗೆ ಪರಿಚರ್ಯವಂ ರಚಿಸುತಿರ್ದ ಹೊರಹೆಣ್ಣಿನೊಳೊರ್ವ ಪುತ್ರನುದಿಸಿರಲಾತನಂ ಬರಿಸಿ, ಆ ಅಂಧಕವೆಂಕಟಯ್ಯನೆಂಬಾತಂಗುದ್ಭವಿಸಿದ ಕುಮಾರಂ ಹಿರಿಯವೆಂಕಟಪ್ಪನಾಯಕರ ಮಗಳು ಹಿರಿಯಮ್ಮನ ಮಗ ಸದಾಶಿವಯ್ಯಂಗೆ ಮೊಮ್ಮಗನಾದುದರಿಂದ ಮಾಅಂಧಕವೆಂಕಟಯ್ಯನ ಮಗಂಗೆ ಶಿವಪ್ಪನಾಯಕನೆಂದು ನಾಮಾಂಕಿತಮಂ ಮಾಡಿ ಆತನ ತಂದೆ ಅಂಧಕವೆಂಕಟಯ್ಯನೆಂಬಾತನುಮಂ ಸಮೀಪದೊಳಿಟ್ಟುಕೊಂಡು ಅವರ ಮುಖದಲ್ಲಿಯು ಸಂಸ್ಥಾನದ ಆರಭಾರವಂ ನಡೆಸುತ್ತುಮಿರಲಾ ಕಾಲದೊಳ್ ॥ ೪೧

ಆ ಸೋಮಶೇಖರೋರ್ವೀ
ವಾಸವ [1] ನಂತರದೆ ಸಾರ್ಧಮಾಸ ತ್ರಯಮಾ ।
ಭಾಸಂ ಶಿವನೃಪನೆಂದೆನಿ
ಪಾ ಸಮುಚಿತರಹಿತನಾತನರಸೆನಿಸಿರ್ದಂ ೪೨

ಇಂತು ಕುತ್ಸಿತ ಶಿವಪ್ಪನಾಯಕನೆಂಬಾತನಂ ಕರ್ತೃವಂ ಮಾಡಿಕೊಂಡು ವರ್ತಿಸುತ್ತುಮಿರುತಿರಲ್, ಬರಮುಮಾವುತ ಮುಂತಾದ ಕುಹಕಿಗಳ್ ರಚಿಸಿದ ಘರಿಯಾದಿನಿಂ ನಿತ್ತರಿಸಲಮ್ಮದೆ ಸ್ಥಳದಿಂ ಮುನ್ನಮ

[1] ನಂತರ; III [1], IX [1] ಪದ್ಯಗಳನ್ನು ನೋಡಿ.

ತೊಲಗಿ ಪೋಗಿ ಬಿಳಿಗಿ ಸೀಮೆಯ ಪ್ರಾಂತದೊಳಿರುತ್ತಿರ್ದ ಕಾಸರಗೋಡ ತಿಮ್ಮಣ್ಣನೆಂಬಾತನುಂ ಸಬ್ಬನೀಸ ಕೃಷ್ಣಪ್ಪಯ್ಯನುಮೀವೃತ್ತಾಂತಮಂ ಕೇಳ್ದು ಜಾತಪ್ಪನ ಮಗ ಭದ್ರಯ್ಯನ ಮಗನಂ ರಾಜಾಧಿಕಾರಕ್ಕೆ ಸಿಲಿಸಬೇಕೆಂದು ಆಲೋಚನೆಯುಂ ಮಾಡಿಕೊಂಡು ಮೊದಲೈತಂದಿರ್ದ ಜನ್ನೋಸಂತನಂ ಸಹಾಯಕ್ಕೆ ಬರಿಸಿಕೊಂಡು ಬಿಳಿಗಿಯವರ ಸೈನ್ಯಮಂ ಕೂಡಿಕೊಂಡು ಬಂದು ನಿಲಲಾಕಾಲದೊಳ್, ಅಂಧಕವೆಂಕಟಯ್ಯನ ಮುಖದಿಂ ರಾಜ್ಯಾಧಿಕಾರಮಂ ನಡೆಸುತ್ತಿರ್ಪ ಮರೆಬೋವಿ ಕಂದಾಚಾರದ ಲಕ್ಷ್ಮಯ್ಯ ವೀರಭದ್ರಯ್ಯ ಮುಂತಾದವರೊಂದಾಗಿ ಯುದ್ಧಮಂ ರಚಿಸವೇಳ್ಕೆಂದು ಯೋಚಿಸಿ ಮಂದಿಯುಂ ಕೂಡಿಸಿ ಚಿಟನೀಸ ಗಿರಿಯಪ್ಪನಂ ಕಳುಹಲವರಿರ್ವರ್ಗೆ ಕೈಗಲಸಿ ತತ್ಸಂಗ್ರಾಮದೊಳಾಗಿರಿಯಪ್ಪನಮರಲೋಕಮಂ ಪಡೆಯಲೊಡನುಳಿದವರ್ನಿತ್ತರಿಸಲಮ್ಮದೆ ಮುರಿದು ಹಳೆಪೈಕದ ಹೆಮ್ಮ ವೀರಭದ್ರಣ್ಣಸಹಿತಂ ತಿರುಗಿ ಬರಲೊಡನೆ ಮರೆಬೋವಿಯು ಶಿರಚ್ಛೇದನಮಂ ಮಾಡಿಸಿ, ಇಕ್ಕಟ್ಟಿನೊಳಿಂತಿರ್ಪ ವಿಷಮಕಾಲದೊಳಾವಿಲ್ಲಿರ್ಪುದನುಚಿತಮೆಂದು ಯೋಚಿಸಿ ಚನ್ನಮ್ಮಾಜಿ ವೇಣುಪುರದರಮನೆಯಿಂ ತೆರಳ್ದು ಭುವನಗಿರಿಯ ದುರ್ಗದರಮನೆಯಂ ಸಾರ್ದು, ಕಾಸರಗೋಡು ತಿಮ್ಮಣ್ಣನಾಯಕ ಸಬ್ಬನೀಸ ಕೃಷ್ಣಪ್ಪಯ್ಯರಂ ಸಂಬುಗೆಯ ಮೇಲೆ ಬರಿಸಿಕೊಳಲೊಡನೆ, ಅವರೆಲ್ಲರುಂ ಭುವನಗಿರಿಯ ದುರ್ಗದ ಪರಿವಾರದವರ್ಸಹಿತಮೊಂದಾಗಿ ತಮ್ಮ ತಮ್ಮ ರಾಗದ್ವೇಷಮಂ ಪೋಣ್ದು ಏಕಮತದಿಂ ಮಂತ್ರಾಲೋಚನೆಯುಂ ರಚಿಸಿ ಜಾತಪ್ಪನ ಭದ್ರಯ್ಯನ ಮಗಂಗೆ ರಾಜ್ಯಾಧಿಕಾರಕ್ಕೆ ಸಂಬಂಧವಿಲ್ಲವೆಂಬುದಂ ನಿಶ್ಚಯಂಮಾಡಿ ಚನ್ನಮ್ಮಾಜಿಯುವರ ಸಮ್ಮತಿವಿಡಿದು ಅಂಧಕವೆಂಕಟಯ್ಯನುಮಂ ತತ್ಪುತ್ರನುಮಂ ಮುನ್ನಿನಂತೆ ಪೊಸಂಗಡಿಯ ಪರಿಸ್ಕರಣಕ್ಕೆ ಕಳುಹಿ, ತದ್ವೆಂಕಟಯ್ಯನ ಮಗ ಕುತ್ಸಿತಶಿವಪ್ಪನಾಯಕನೆಂಬಾತನನಂಗವಿಕಲನಂ ಮಾಡಿಸಿ ರಾಜತ್ವಕ್ಕೆ ಚನ್ನಮ್ಮಾಜಿಯನೆ ಅರ್ಹಳಂ ಮಾಡಿಕೊಂಡಿಂತು ಸಂಸ್ಥಾನದ ಕಾರ್ಯಂಗಳನೆಲ್ಲಮಂ ಚನ್ನಮ್ಮಾಜಿಯ ಮುಖದಲ್ಲಿಯೆ

ನಡೆಸುತ್ತುಮಿರಲ್, ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೯೪ ನೆಯ ವಿರೋಧಿಕೃತ್ಸಂವತ್ಸರದ ಫಾಲ್ಗುಣ ಬಹುಳ ೧೦ ಯಲ್ಲಿ ಭುವನಗಿರಿಯ ದುರ್ಗದರಮನೆಯಲ್ಲಿ ಸೋಮಶೇಖರನಾಯಕರ ಪತ್ನಿ ಚನ್ನಮ್ಮಾಜಿಗೆ ರಾಜಪಟ್ಟಮಾಗಲೊಡನೆ ಚನ್ನಮ್ಮಾಜಿ ಸಕಲಸೈನ್ಯಸಮೇತಳಾಗಿ ಭುವನಗಿರಿದುರ್ಗದರಮನೆಯಿಂ ತೆರಳ್ದು ವೇಣುಪುರದ ಕೋಂಟೆಯಂ ಪೊಕ್ಕು ರಾಜಾಲಯಮಂ ಸಾರ್ದಳ್ ॥ ೪೩

ನೆರೆ ರಾಜಧರ್ಮಮಾರ್ಗದ
ಪರಿಯಂ ಬಲ್ಲವನಿಪಾಲರೊಳ್ಮಿಗಿಲೆನಿಪಾ ।
ತರುಣೀನಿಕರಶಿರೋಮಣಿ
ವರಚನ್ನಮ್ಮಾಜಿ ಕೆಳದಿಯೊಳಗರಸಾದಳ್ ॥ [1] ೪೪

ಅಷ್ಟಮಾಶ್ವಾಸಂ ಸಂಪೂರ್ಣಂ.



[1] ಈ ಸೋಮಶೇಖರನಾಯಕರ ಕಾಲದೊಳ್ ಬದುಕು ಮಾಡಿದ ಮುಖ್ಯಸ್ಥರು:—ಪ್ರಧಾನಿ ಆವಿನಹಳ್ಳಿ ನರಸಪ್ಪಯ್ಯ, ಕರಣಿಕ ಬಿಳಿಗಿ ಸುಬ್ಬಯ್ಯ, ಕೋಳಾಲದ ಕೋನಪ್ಪಯ್ಯ, ಸಬ್ಬನೀಸ ಕೃಷ್ಣಪ್ಪಯ್ಯ, ಕೂಸಯ್ಯ, ಕಂದಾಚಾರದ ಲಕ್ಷ್ಮಯ್ಯ, ಚಿಟನೀಸ ಕೃಷ್ಣಪ್ಪಯ್ಯ, ಕೋಳಾಲದ ವೆಂಕಪ್ಪಯ್ಯ, ಗಿರಿಯಪ್ಪಯ್ಯ, ಪಟ್ಟೇಗಂಗಾಧರಯ್ಯ, ಸಂಕಪ್ಪಯ್ಯ, ವೆಂಕಟಪ್ಪಯ್ಯ, ರಾಯಸದ ಮಲ್ಲಪ್ಪಯ್ಯ, ಶರಜಾ ಶಂಕರನಾರಾಯಣಯ್ಯ, ಬಿಳಿಗಿ ಗಂಗಪ್ಪಯ್ಯ, ಯೋಗಪ್ಪಯ್ಯ, ಸೀತಪ್ಪಯ್ಯ, ಬೆಳವಂದೂರು ಗುರುವಪ್ಪನಾಯಕ, ಕಾಸರಗೋಡು ತಿಮ್ಮಣ್ಣನಾಯಕ, ಬರಮೆರಾವುತ, ಪೊಳೆಯಪ್ಪ, ಮರೆಬೋವ, ಮಸೂದ, ಗರಜಿನಮಲ್ಲಪ್ಪೊಡೆಯರು, ಸರಭೆಲ ಮಲ್ಲಿಕಾರ್ಜುನಯ್ಯ, ಮೈದುನ ಕೆಂಚಣ್ಣನ ಮಗ ಸಿದ್ದಪ್ಪ, ಹುದಾರ ಶಾಂತಯ್ಯ, ಪಟ್ಟಣಶೆಟ್ಟಿ, ಬಸೆಟ್ಟರು, ಮುಂತಾದವರು. (ಕ)

# ನವಮಾಶ್ವಾಸಂ.

ವರ ಸೋಮಶೇಖರೇಂದ್ರನ
ತರುವಾಯಿಯೊಳಾಳ್ದ ಕುಶಿವನೃಪ [1] ನಂತರಮಾ।
ದೊರೆ ಸೋಮಶೇಖರಾಂಗನೆ
ಸುರುಚಿರ ಚನ್ನಾಂಬೆಯೊಳ್ದಳುರ್ವೀತಳವಂ ॥ ೧ ॥

ತಮಗೆ ರಾಜಪಟ್ಟವಾದ ತರುವಾಯುಮಾ ಚನ್ನಮ್ಮಾಜಿಯುವರ್ತಮ್ಮರಸ ಸೋಮಶೇಖರನಾಯಕರಾಳಬರುತ್ತಿರ್ದ ರಾಜ್ಯ ರಾಷ್ಟ್ರ ಕೋಶ ಪ್ರಜೆ ಪರಿವಾರ ಪರಿಜನ ಪುರಜನ ನಿಯೋಗಿಜನ ಮಂತ್ರಿಜನ ದೇಶಸೇವಾಜನಮುಂತಾದ ಸಮಸ್ತ ಜನರಂ ಸಂರಕ್ಷಿಸುತುಂ ರಾಜ್ಯವಾಳುತಿರ್ದು, ಮುಂದೆ ಕೆಳದಿ ಧರ್ಮಸಂಸ್ಥಾನದ ರಾಜತ್ವಕರ್ಹನಾದೊರ್ವಕುಮಾರನಾಗಲ್ವೇಳ್ಕುಂದು ಮಂತ್ರಿಜನ ನಿಯೋಗಿಜನ ಬಂಧುಜನರೊಳಾಲೋಚಿಸಿ ಶಿವಪ್ಪನಾಯಕರ ಜ್ಯೇಷ್ಠ ಪುತ್ರರಾದ ಭದ್ರಪ್ಪನಾಯಕರುಂ ತಮ್ಮರಸ ಸೋಮಶೇಖರ ನಾಯಕರುಂ ಸಹೋದರರಾದುದರಿಂದೆಯುಂ, ಆ ಭದ್ರಪ್ಪನಾಯಕರ ಪತ್ನಿ ಸಿದ್ಧಮ್ಮಾಜಿಯುವರ್ ನಂಬೆಣ್ಣೆಶೆಟ್ಟರಮಗ ಮರಿಯಪ್ಪಶೆಟ್ಟರ ಪತ್ನಿಯಾದ ಗೌರಮ್ಮನವರ್ ಈಯಿರ್ವರುಮೇಕೋದರಿಯರಾದುದರಿಂದೆಯುಂ, ಆ ಮರಿಯಪ್ಪಶೆಟ್ಟರಪತ್ನಿ ಗೌರಮ್ಮನ ಕುಮಾರರಾದ ಬಸವಪ್ಪನವರ್ ಶಿವಪ್ಪನಾಯಕರ ಜ್ಯೇಷ್ಠ ಕುಮಾರ ಭದ್ರಪ್ಪನಾಯಕರ್ಗೆ ಪುತ್ರಾವಾಪೆಯಾದ ಕಾರಣಮಾ ಭದ್ರಪ್ಪನಾಯಕರನುಜನಾದ ತಮಗೆ ವಲ್ಲಭನಾದ ಸೋಮಶೇಖರನಾಯಕರ್ಗಂ ಪುತ್ರಾವಾಪೆಯೇ ಆದುದರಿಂದಮಾ ಮರಿಯಪ್ಪಶೆಟ್ಟರ ಕುಮಾರ ಬಸವಪ್ಪನವರ್ಕೆಳದಿಧರ್ಮಸಂಸ್ಥಾನದ ರಾಜತ್ವಕ್ಕರ್ಹರಪುದೆಂದು ಬಸವಪ್ಪನವರಂ ರಾಜತ್ವಕ್ಕೆ ನಿಲಿಸಬೇಕೆಂದು ನಿಶ್ಚಯಂಗೈದು, ಸರ್ವಜನ

---

1 ನಂತರ. cf III 1, VIII 42

ಸಮ್ಮತಿಯಿಂದಮಾಬಸವಪ್ಪನವರ್ಗೆ ಕೆಳದಿನೃಪಾಲ ಬಸವಪ್ಪನಾಯಕರೆಂದು ನಾಮಕರಣಮುಂ ರಚಿಸಿ, ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೫೪ನೆಯ ಪರೀಧಾವಿ ನಾಮ ಸಂವತ್ಸರದ ಶ್ರಾವಣ ಶುದ್ಧ ೧೪ಯ ಓವಸಮಾ ಬಸವಪ್ಪನಾಯಕರಂ ಗೃಹೀತ ಪುತ್ರನಂ ಮಾಡಿಕೊಂಡು ಸರ್ವಸಂಭ್ರಮದಿಂದಮರಮನೆಗೆ ಬಿಜಯಂಗೈಸಿ ತಂದಾ ಕುಮಾರಬಸವಪ್ಪನಾಯಕರಂ ಓದು ಸಾಧನೆ ಗಜತುರಗವೈಹಾಳಿ ಮುಂತಾದ ರಾಜೋಪಯುಕ್ತಮಾದ ಸಮಸ್ತ ವಿದ್ಯಂಗಳಲ್ಲಿಯುಂ ಪರಿಣತರಂ ಮಾಡಿಸಿ, ಕುಮಾರ ಬಸವಪ್ಪನಾಯಕರಂ ಮುಂದಿಟ್ಟುಕೊಂಡು ಸದ್ಧರ್ಮದಿಂ ರಾಜ್ಯಂಗೆಯ್ಯುತ್ತುಮಿರ್ದು ಕಾಸರಗೋಡು ತಿಮ್ಮಣ್ಣನಾಯಕನೊಡನೆ ಸೇನಾಸಮೂಹಮಂ ತೆರಳ್ಚಿಸಿ ಕಳುಹಿ ॥ ೨

ಯುವನರ್ಬಿಡದಾಕ್ರಮಿಸಿದ
ತವನಿಧಿ ಹೊನ್ನಾಳಿ ಜಡೆಯುಮುರುಕೋಂಟೆಗಳಂ ।
* ಬವರದೊಳ್ಕೊಂಡವಿದ್ವ
ಶ್ರವಣರ ಕಾಲ್ದೆಗೆಸಿ ಬಾಹುಬಲಮಂ ಮೆರೆದಳ್ ॥ ೩

ಮತ್ತಮದಲ್ಲದೆ ಸರಪನಮಲುಕನೆಂಬ ತಾಮ್ರಮುಖಂ ತಾಂ ದಿವಾಣದ ವಕೀಲಿಯಾಗಿ ವರ್ತಿಸುತ್ತುಮಿರ್ದು ಅವಂ ಮುನ್ನಾಳ್ದ ಪಂಚಮಹಲೊಳಗಣ ಮಿಡಿಜೆಯೆಂಬ ಪರಿಸ್ತರಣಮಂ ಸೋದೆಯವರಾಕ್ರಮಿಸಿ ಹನುಮನಾಯಕನೆಂಬಧಿಕಾರಿಯುಸಿಟ್ಟು ತಮ್ಮಧೀನಮಂ ಮಾಡಿಕೊಂಡು ವರ್ತಿಸುತ್ತುಮಿರಲಾಕಾಲದೊಳ್ ಕಾಸರಗೋಡು ತಿಮ್ಮಣ್ಣನಾಯಕನೊಡನೆ ಸೇನಾಸಮೂಹಮಂ ತೆರಳ್ಚಿಸಿ ಕಳುಹಿ ॥ ೪

*ಹನುಮನಾಯಕನ ದರ್ಪದ
ಮೊನೆಯಂ ಮುರಿದಾ ಸುಧಾಪುರಾಧಿಪರೊಳಗಿ ।
ರ್ದನುಪಮ ಮಿಡಿಜೆಯ ಕೋಂಟೆಯ
ನನುವರದೊಳ್ಕೊಂಡು ಮೆರೆದಳತಿಸಾಹಸಮಂ ॥ ೫

ಮತ್ತಮದಲ್ಲದೊಂದವಸರದೊಳಿತ್ತಂ ಕಡೆಯುಮಸಿಯೊಳ್ ಕಲ್ಯಾಣಪುರದ ಪರಿಸ್ತರಣದೊಳ್ ಸದಾಶಿವಯ್ಯನೆಂಬ ಕುಮಾರಸಹಿತಮುಂಕೆ

ಯೊಳಿರುತಿರ್ಪ ಜಾತಪ್ಪನ ಭದ್ರಪನಂ ಘಟ್ಟದ ಕೆಳಗಣ ರಾಜ್ಯಕ್ಕೆ ತಾನಧಿಕಾರಿಯಾಗಬೇಕೆಂಬಪೇಕ್ಷೆಯಿಂ ಚೌಟ ಬಂಗಾಜಲ ಸಾವಂತ ಮುಂತಾದ ತುಳುವ ಮನ್ನೆಯರ್ಕಳಂ ಬೋಧಿಸಿ ಕಾರಕಳ ಮಲ್ಲಿಕಾರ್ಜುನಗಿರಿ ಮುಂತಾದ ಕೋಂಟೆಗಳಂ ಸ್ವಾಧೀನಮಂ ಮಾಡಿಕೊಂಡಿದಿರ್ಚಿ ಗರ್ವೋದ್ರೇಕದಿಂ ವರ್ತಿಸುತ್ತುಮಿರಲಲ್ಲಿಗೆ ದಳವಾಯಿ ಭದ್ರಪ್ಪನೊಡನೆ ಸೈನ್ಯಮಂ ತೆರಳ್ಚಿಸಿ ಕಳುಹಿ ॥ ೬

ಆ ತುಳವ ನೃಪರ ಕುಮತದ
ರೀತಿಯನುರೆ ನಿಲಿಸಿ ಕೊಂಡು ನಿಜಕೋಂಟೆಗಳಂ ।
ಜಾತಪನ ಭದ್ರಪನ ತ
ಜ್ಜಾತನುಮಂ ಪಿಡಿಸಿ ಶಾಸ್ತಿಯುಂ ಮಾಡಿಸಿದಳ್ ॥ ೭

ಮತ್ತಮದಲ್ಲದೆ ಸಬ್ಬುನೀಸಕೃಷ್ಣಪ್ಪಯ್ಯ ಕಾಸರಗೋಡುತಿಮ್ಮಣ್ಣನಾಯಕರೊಡನಸಂಖ್ಯಾತಮಪ್ಪ ಸೇನಾಸಮೂಹಮಂ ತೆರಳ್ಚಿಸಿ ಕಳುಹಿ ॥ ೮

ಮಾಯಾವಾದಿಗಳುರುವ
ವಾಯಿಕುಮಾರಯ್ಯನಪಟನುಡುಗಿಸಿ ಬಲಮಂ[1] ।
ನೋಯಿಸಿ ವಸುಧಾರೆಯ ಕಮ
ನೀಯಪರಿಸ್ಫುರಣಮಂ ಕರಂ ವಶಗೈದಳ್ ॥ ೯

ಇಂತು ಮೈಸೂರಮಹೀಪನ ದಳವಾಯಿ ಕುಮಾರಯ್ಯನಂ ಪಲಾಯನಂಗೊಳಿಸಿ ವಸುಧಾರೆಯ ಕೋಂಟೆ ಸೀಮೆಗಳಂ ಸ್ವಾಧೀನಂಗೈದು ಸುಖದಿಂ ರಾಜ್ಯಂಗೆಯ್ಯುತ್ತುಮಿರಲಿತ್ತಮತ್ಯಂತಗರ್ವೋದ್ರೇಕದಿಂ ಸೋದೆಯ ರಾಮಚಂದ್ರನಾಯಕಂ ಪಿಡಿಜೆಯ ಕೋಂಟೆಯುಂ ತೆಗೆದುಕೊಳಲ್ಕೆಳ್ದು ಸಬ್ಬುನೀಸಕೃಷ್ಣಪ್ಪಯ್ಯನೊಡನೆ ಸೈನ್ಯಮಂ ತೆರಳ್ಚಿಸಿ ಕಳುಹಿ ಯುದ್ಧರಂಗದೊಳಾ ಪಿಡಿಜೆಯ ಕೋಂಟೆಯುಂ ಮಗುಳ್ದು ಸ್ವಾಧೀನಂಗೈದಳಂತುಮಲ್ಲದೆಯುಂ ॥ ೧೦

1 ಆನಂದಸಂವತ್ಸರದೊಳ್ (ಕ)

ಸಿರಸೆಯು ಸೋದೆಯು ಸುಪರಿ
ಸ್ತರಣಗಳಂ ಕೊಂಡು ತತ್ಸುಧಾಪುರದವನೀ ।
ಶ್ವರನ ಬಿರುದಗಳನೀಳ್ದಾ
ದೊರೆ ಚನ್ನಮ್ಮಾಜಿ ಮೆರೆದಳತಿವಿಕ್ರಮಮಂ ॥ ೧೧

ಇಂತು ಸಿರಸೆ ಸೋದೆಗಳ ಪರಿಸ್ತರಣಂಗಳಂ ಕೊಂಡಾ ಸುಧಾಪುರಾಧಿಪನಂ ಪಲಾಯನಂಗೊಳಿಸಿ ತತ್ಸುಧಾಪುರದೊಳ್ ಸ್ವಸೈನ್ಯಮಂ ನಿಲಿಸಿ ಅವರಾಳ್ವ ನಾಡೊಳಗಣ ಬನವಸೆ ಬದನಗೋಡು ಬಾಳೂರ್ಪುಲಿಯಕಣ್ಣ ಕರುವೂರ್ಮುಂತಾದ ಸೀಮೆಗಳಂ ಸ್ವಾಧೀನಮಂ ಮಾಡಿಕೊಂಡವರ ಬಿರುದಿನ ಸೀಲಚ್ಛತ್ರಮುಂ ಕೆಳದಿವೀರಭದ್ರದೇವರ್ಗೆಕಾಣ್ಕೆಯುಂ ಕಳುಪಲವರ್ನಿಸ್ತೇಜಸ್ಕರಾಗಿ ಸಂಧಿಯನಪೇಕ್ಷಿಸಿ ದೈನ್ಯಭಾವದಿಂ ಪೊಕ್ಕು ಪೇಳಿಸಲತ್ಯಂತಕಾರುಣ್ಯದಿಂದಾಗಲವರ್ಗೆ ಸೋದೆಮುಂತಾದ ಕೆಲವು ಸೀಮೆಗಳನಿತ್ತು ಬನವಸೆ ಮುಂತಾದ ಕೆಲವು ಸೀಮೆಯಂ ಸ್ವಾಧೀನಮಂ ಮಾಡಿಕೊಂಡಿಂತೀ ಪ್ರಕಾರದಿಂ ಸುಧಾಪುರದರಸರ ಗರ್ವಮಂ ಮುರಿದು ಮಗುಳ್ದವರಂ ಸಂಸ್ಥಾನದೊಳ್ನಿಲಿಸಿ ಪರಮಪ್ರಖ್ಯಾತಿಯುಂ ಪಡೆದತ್ಯಂತಸಂತೋಷದಿಂ ರಾಜ್ಯವಾಳುತ್ತುಂ ಕುಮಾರ ಬಸವಪ್ಪನಾಯಕರ್ಗೆ [1] ಕಾಳಯುಕ್ತಿ ಸಂವತ್ಸರದ ಮಾರ್ಗಶಿರಮಾಸದಲ್ಲಿ ಹೆಬ್ಬೆ ಮಹಂತಯ್ಯನ ಕುಮಾರಿ ಚನ್ನಮ್ಮಾಜಿಯುವರ್ಮಳಿಗೆ ಚನ್ನ ವೀರಪ್ಪನ ಕುಮಾರಿ ಬಸವಮ್ಮಾಜಿಯುವರ್ ಇಂತಿರ್ವರ್ಕನ್ಯಾರತ್ನಂಗಳನತ್ಯಂತ ಸಂಭ್ರಮದಿಂ ವಿವಾಹಮಂ ರಚಿಸಿಯನಂತರಂ ಸಬ್ಬುಸೀಸಕೃಷ್ಣಪ್ಪಯ್ಯನೊಡನೆ ಸೈನ್ಯಮಂ ಕೂಡಿಸಿ ಕಳುಹಿ ದಿವಾಣದ ವಕೀಲಿಯೊಳಿರುತಿರ್ದ ಬಸವಾಪಟ್ಟಣಮಂ ಸ್ವಾಧೀನಂಗೈದು ಮತ್ತಮಾ ಸಬ್ಬುಸೀಸಕೃಷ್ಣಪ್ಪಯ್ಯನಂ ತೆರಳ್ಚಿ ಕಳುಹಿ ॥ ೧೨

[1] ಧುರದೊಳ್ಕಡವೂರ್ಬಾಣಾ
ವರ [2] ಶಾಸನಮಂ ಸುರಮ್ಯಚೀಲೂರ ಪರಿ ।

1 ರೌದ್ರಿಸಂವತ್ಸರದಲ್ಲು (ಕ). 2 ದುರ್ಮತಿಸಂವತ್ಸರದಿ (ಕ).

ಸ್ತುರಣಮುಮಂ ಕೊಂಡು ಮಹ
ತ್ತರವೈಸೂರವರ ಮದವನುರೆ ಮಗ್ಗಿಸಿದಳ್ ‖ ೧೩

ಇಂತು ಮಾಯಾವಿಗಳ ಮದಮಂ ಮಗ್ಗಿಸಿಯುವರ ನಾಡೊಳಗಣ ಕಡವೂರ್ಬಾಣಾವರ ಹಾಸನ ಬೇಲೂರ ಪರಿಸ್ತರಣ ರಾಜ್ಯಂಗಳಂ ಸ್ವಾಧೀನಂಗೈದನಂತರಂ, ಗೋಕರ್ಣಯಾತ್ರೆಯುಂ ರಚಿಸಿ ಮಹಾಬಲೇಶ್ವರಾದಿಲಿಂಗಸಂದರ್ಶನಪೂಜಾದಿಗಳಂಸಿಮಿರ್ಚಿ ಮಗುಳ್ದುಂದು ವೇಣುಪುರವರಮಂ ಸಾರ್ದು ಸುಖದಿಂ ರಾಜ್ಯಂಗೆಯ್ಯುತ್ತು ಮಾಚಣ್ಣಮ್ಮಾಜಿ ತಾಂ ಪೋಷಿಸುತಿರ್ದ ಕುಮಾರಿ ಮರಿಚಣ್ಣಮ್ಮಾಜಿಯುನಕ್ಷಯ ಸಂವತ್ಸರದ ವೈಶಾಖ ಮಾಸದಲ್ಲಿ ಸಿದ್ದಮ್ಮಾಜಿಯುವರ ಮಗ ಮಲ್ಲಿಕಾರ್ಜುನ ನಾಯಕಂಗತ್ಯಂತಸಂಭ್ರಮದಿಂ ವಿವಾಹಮಂ ರಚಿಸಿ, ತದ್ವಿವಾಹಮಹೋತ್ಸವಕಾಲದೊಳ್ಗೈದಿದ ಸೋದೆಯ ಅರಸಪ್ಪನಾಯಕ ರಾಮಚಂದ್ರನಾಯಕರನುಜನೆನಿಪ ಸದಾಶಿವನಾಯಕಂ ತಮ್ಮ ಸೀಮೆಯುನೀಯ ಲ್ವೇಳ್ಕೆಂದು ಪೇಳಿಸಲ್ದುಯಿಂ ಮುನ್ನಮಧೀನಂಗೈದ ಬನವಸೆ ಮುಂತಾದ ಸೀಮೆಗಳನಿತ್ತು ಬೀಳ್ಕೊಟ್ಟು ಭಾಗಾನಗರದವರ ಬಗೆಯ( ? ) ಪೆದೂರಲಿಂಗಪ್ಪಂ ಬಿಗಡಿಸಿ ಬಂದಿರಲಾತನಂ ಬಸವಾಪಟ್ಟಣದೊಳಟ್ಟಿ ಸಂತಸಂಬಡಿಸಿಯುನಂತರಂ ಜರಿಮಲೆಯುರಸನ ಪ್ರತಾಪಾತಿಶಯುಮಂ ಕೇಳ್ದು ಸಬ್ಬುನೀಸಶರಜಾಶಂಕರನಾರಾಯಣಯ್ಯನಂ ತೆರಳ್ಚಿ ಕಳುಹಿ ‖

ಮೆರೆವ ಪೊಳಕಾಲ ಬಾಸಿಗ
ದುರುಬಿರುದಂ ಧರಿಸಿ ಶೌರ್ಯದಿಂ ಮಾರ್ಮಲೆವಾ ।
ಜರಿಮಲೆಯುರಸನುಮಂ ಸಂ
ಗರದೊಳ್ ಸೆರೆವಿಡಿದು ಬಾಹುಬಲಮಂ ಮೆರೆದಳ್ ‖ ೧೫

ಇಂತತ್ಯಂತಪರಾಕ್ರಮಶಾಲಿಯುಪ್ಪ ಜರಿಮಲೆಯುರಸನಂ ಕ್ಕೆಸೆರೆ ವಿಡಿದು ಪೊಳಕಾಲ ಬಾಸಿಗದ ಬಿರುದಂ ಕಳಲ್ಚಿಸಿ ಕೈಗಾಯ್ದುಳುಹಿ ಕಳುಹಿದಳಂತುಮಲ್ಲದೆಯುಂ ‖ ೧೬

ಭೂಮಹಿತಯುವನರೊಳ್ಸಂ
ಗ್ರಾಮದೆ ಮುರಿದೈದಿ ಪೊಕ್ಕ ಮನ್ನೆಯ ರಾಜೇ ।

ರಾಮನನುರೆಕಾಯ್ದು ನೃಪ
ಸ್ತೋಮದೊಳತ್ಯಧಿಕಕೀರ್ತಿಯಂ ಮಿಗೆ ಪಡೆದಳ್ ॥ ೧೭

ಆ ವಿವರಣಮೆಂತೆಂದೊಡಾರೆಯರ ಮೂಲಮುಮನಾರಾಮರಾಜನಂ ಪಿಡಿಯಲ್ಕೈದಿದ ತುರುಷ್ಕರ ಮೂಲಮುಮನಾತುರುಷ್ಕರಾಮರಾಯರ್ಗಂ ವಿರೋಧಂ ಪುಟ್ಟಿದ ಕಾರಣಮುಮನುಸಿರ್ವೆನದಕ್ಕೋಸುಗಂ ಮೊದಲೊಳಾರೆಯರ ಮೂಲವೃತ್ತಾಂತಮಂ ಬಿತ್ತರಿಪೆನದೆಂತೆಂದೊಡೆ:—ಕುರುಕ್ಷೇತ್ರಸಮೀಪದೊಳ್ ಕಾಶಿಯ ಡಿಳ್ಳಿಯ ವಾಯುವ್ಯದಿಕ್ಕಿನ ತಾಣದೊಳ್ ಕ್ಷತ್ರಿಯರ್ಗೆ ಮೂಲಸಂಸ್ಥಾನಮೆಂದ ಚಿತ್ತೋಡೆಂಬಗಡಮೊಪ್ಪುತಿರ್ಪುದು; ಚಿತ್ತಕ್ಕೆ ಭಯಮಂ ಪುಟ್ಟಿಸುತ್ತಿರ್ದುದರಿಂ ಚಿತ್ತೋಡೆಂಬ ನಾಮಮಾದುದಾಚಿತ್ತೋಡೆಂಬ ಗಡಂ ಸುತ್ತುಮೈದುಯೋಜನ ವಿಸ್ತೀರ್ಣದಿಂ ಸಮಸ್ತಧನಧಾನ್ಯಪುಷ್ಪಫಲಸಮೃದ್ಧಿಯಿಂ ಸತತಂ ವಿರಾಜಿಸುತ್ತುಮಿರ್ಪುದಾಚಿತ್ತೋಡ ಸಂಸ್ಥಾನಾಧಿಪತಿಗಳಾದ ಭಾರದ್ವಾಜಗೋತ್ರಜರೆನಿಪ ಕ್ಷತ್ರಿಯರಾಜರ್ಪರಂಪರೆಯಿಂ ರಾಣರೆಂಬಭಿಧಾನಮನಾಂತು ರಾಜ್ಯಪ್ರತಿಪಾಲನಂಗೆಯ್ಯುತಿರ್ದರಾಕ್ಷತ್ರಿಯಕುಲಪರಂಪರೆಯೊಳುದ್ಭವಿಸಿದ ರಾಣನೆಂಬ ರಾಜನಾಚಿತ್ತೋಡ ಸಂಸ್ಥಾನದೊಳೊಪ್ಪುತಿರ್ದನಾರಾಣನೆಂಬಾತಂಗೆ ರೂಪವತಿಯಾದ ಪದ್ಮಿನೀಜಾತಿಯಕುಮಾರಿಯುದಿಸಲಾ ಕುಮಾರಿಯಂ ಪೋಷಿಸುತ್ತುಮಾರಾಣಂ ರಾಜ್ಯವಾಳುತ್ತಿರಲಾ ಪದ್ಮಿನೀಜಾತಿಯ ಕುಮಾರಿಯ ರೂಪಲಾವಣ್ಯಗುಣಗಣಶೀಲಮಂ ಡಿಳ್ಳಿಯನಾಳುತಿರ್ದ ಕಬರಪಾತುಶಾಹಂ ಕೇಳ್ದು ಸೈನ್ಯಸಮೇತನಾಗಿ ತಾನೇ ತೆರಳ್ದುತಂದಾ ಚಿತ್ತೋಡೆಂಬ ಗಡಮಂ ವೇಷ್ಟೈಸಿ ನೆಲದಂಡಿಳಿದು ಆ ಸಂಸ್ಥಾನಮಂ ಸಾಧಿಸವೇಳ್ಕೆಂದು ಪನ್ನೆರಡು ವರುಷಂಬರಂ ಬಹುವಿಧಪ್ರಯತ್ನಂಬಟ್ಟೊಡಮಾಗಡಂ ಸಾಧ್ಯವಾಗದಿರ್ಪುದಂ ಕಂಡು ಪ್ರಚ್ಛನ್ನವೇಷದಿಂದಕಬರಪಾತುಶಾಹನಾಗಡಮನೊಳಪೊಕ್ಕು ವಸಿಷ್ಠಗೊತ್ರಜನಾದ ರಾಣನ ಅಳಿಯ ರಾಮಸಿಂಗನ ಬಳಿಯೊಳ್ ಮುಖ್ಯಸೇವಕನಾಗಿವರ್ತಿಸುತ್ತಿರ್ದೊಂದವಸರದೊಳ್ ರಾಮಸಿಂಗನೆಂಬವನ ಸಂಗಡಮೇ ಶಾನರಮನೆಯನೊಳಪೊಕ್ಕು ಆರಾಣನ ಸಮೀ

ಪಕ್ಕೈದಲಾರಾಣಂ ಸಿಂಹಾಸನದಿಂದಿಳಿದು ನಿಂದಿರಲದಂ ರಾಮಸಿಂಗಂ ಕಂಡು ಭಯದಿನ್ನೈದುತ್ತಿನ್ನಂ ಕಂಡೇಂ ಕಾರಣಂ ಸಿಂಹಾಸನವನಿಳಿದಿರೆಂದು ಬೆಸಗೊಳಲಾಂ ನಿನ್ನಂ ಕಂಡು ಸಿಂಹಾಸನದಿಂದಿಳಿದವನಲ್ಲಂ, ನಿನ್ನ ಸಂಗಡಮೈದಿದವನಂ ಕಂಡಾಂ ಸಿಂಹಾಸನವನಿಳಿದೆನೆಂದಾ ಅಕಬರಪಾತುಶಾಹನಂ ರಾಣಾರಾಯಂ ಕೈವಿಡಿದು ಸಿಂಹಾಸನದೊಳ್ಕುಳ್ಳಿರಿಸಿ ಆ ಚಿತ್ತೋಡಗಡಮಂ ನಜರುಗಾಣಿಕೆಯುಂ ಮಾಡಿ ನೀವಿಲ್ಲಿಗೆಯ್ದಿದ ಹದನೇನೆನ್ನಿಂದಪ್ಪ ಕಜ್ಜಮೇನೆಂದು ಬೆಸಗೊಳಲ್, ನಿನ್ನ ಕುಮಾರಿಯಾದ ಪದ್ಮಿನಿಯುಂ ನೋಡಲೆಳ್ತಂದೆನೆನಲಂತಾದೊಡೊಳ್ಳಿತೆಂದು ಪದ್ಮಿನಿಯುಂ ಬರಿಸಿ ಕಾಣಿಸಲಾಗಳಾ ಅಕಬರಪಾತುಶಾಹನಾ ಪದ್ಮಿನಿ ತನ್ನ ಮಗಳೆಂದು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಾಡಿ ರಾಣನಂ ಕರೆದು ನೀನೆನಗಿತ್ತ ಚಿತ್ತೋಡಗಡಮಂ ಭಾಷಾಪೂರ್ವಕಮಾಗಿ ನಿನ್ನ ಮಗಳಾದ ಪದ್ಮಿನಿಗಿತ್ತೆನೆಂದುಸಿರಲಾ ಮಾತಂ ಪದ್ಮಿನಿ ಕೇಳ್ದು ತನ್ನ ತಂದೆಯ ಮೇಲೆ ಪ್ರತ್ಯರ್ಥಿಯಾಗಿ ದಂಡೆತ್ತಿ ಬಂದಾತನಿತ್ತ ಗಡಮಂ ತಾಂ ಸರ್ವಥಾ ಅಂಗೀಕರಿಸುವವಳಲ್ಲವೆಂದು ತನ್ನ ತಂದೆ ರಾಣನೊಡನುಸಿರಲಾಗಳಾ ಗಡಕೊರ್ವರುಮಧಿಕಾರಿಗಳಿಲ್ಲದಿರಲಾಗಳಾ ರಾಣನುಮಕಬರಪಾತುಷಾಹನುಮಿರ್ವರುಮೈಕಮತ್ಯಮಾಗೆ ಮಾತನಾಡಿ, ಈ ಚಿತ್ತೋಡಗಡಮೆಮ್ಮಿರ್ವರ್ಗಂ ಬೇಡಮೆಂದರಮನೆಯ ಬಾಗಿಲಂ ದೃಢಮಾಗಿ ಬೀಗಮುದ್ರೆಯುಂ ಮಾಡಿಸಿ, ಅಕಬರಪಾತುಶಾಹಂ ಮುತ್ತಿಗೆದೆಗೆದು ಡಿಳ್ಳಿಯುಂ ಸಾರಲಿತ್ತಲೀರಾಣಂ ಮಗಳ್ವೆರಸು ಆ ಚಿತ್ತೋಡಗಡದ ಸಮೀಪದೊಳಿರುತಿರ್ದ ಉದಯಪುರಮೆಂಬ ಪಟ್ಟಣಮಂ ಸಾರ್ದು ಸಕಲ ರಾಜವಿಭವಸಹಿತಂ ತಾನಲ್ಲಿಯೆ ನೆಲೆಯಾಗೆ ನಿಂದು ತನ್ನ ಪತ್ನಿಯೊಳೊರ್ವ ಕುಮಾರನಂ ಪಡೆದಾ ಕುಮಾರಂಗೆ ರಾಣನೆಂದು ಪೆಸರನಿಟ್ಟು ಪೋಷಣಮಂ ಮಾಡುತಿಂತಿರುತಿರ್ದಾ ರಾಣನೊಂದವಸರದೊಳ್ ಸ್ವಾರಿಮಾರ್ಗಮಂ ಪೋಗಿ ಬರುತ್ತುಂ, ತತ್ಪುರದೊಳಪೂರ್ವ ವರ್ಧಕಿಯ ಮಗಳಂ ಕಂಡು ಕಾಮಿಸಿ ಆಕೆಯುಂ ಪರಿಗ್ರಹಿಸಿ ಕೆಲಕಾಲಂ ವರ್ತಿಸುತ್ತುಮಿರಲಾ ಬಡ

ಗಿಯ ಮಗಳ ಗರ್ಭದೊಳಿರ್ವರ್ಕುಮಾರರುದ್ಭವಿಸಲವರ್ಗೆ ಶಿವಾಜಿ
ಸಂಬಾಜಿಯೆಂದು ನಾಮಕರಣಮಂ ರಚಿಸಿ ಪೋಷಿಸುತ್ತುಮಿರಲ್ಕತಿ
ಪಯವತ್ಸರಂ ಪೋಗಲೊಡನೊಂದವಸರದೊಳಾ ರಾಣಾರಾಯನ ಕು
ಮಾರನಾದ ರಾಣಂ ಶಿವಾಜಿ ಸಂಬಾಜಿಗಳ್ವೆರಸು ತಾಮನ್ಯೋನ್ಯಮೈ
ತ್ರಿಯಿಂ ಮೂವರ್ಕುಮಾರರೊಂದಾಗಿ ಮೃಗಯಾವ್ಯಸನಕ್ಕೆಯ್ದಿ ಬೇಂಟೆ
ಯನಾಡಿ ಬಳಲ್ದು ಮೂವರುಮೊಂದು ವೃಕ್ಷಚ್ಛಾಯೆಯಂ ಸಾರ್ದು ಮಲ
ಗಿರಲವರೊಳಾ ಶಿವಾಜಿಯೆಂಬವಂ ರಾಣನಂ ಕರೆದೀ ವೃಕ್ಷದ ಜಾತಿಯ
ಪೆಸರೇನೆಂದು ಬೆಸಗೊಳಲಾಂ ಕ್ಷತ್ರಿಯಪುತ್ರನೀವೃಕ್ಷದ ಜಾತಿಸ್ವಭಾ
ವಮಂ ವರ್ಧಕಿಸ್ತ್ರೀಸಮುದ್ಭವರೇ ಬಲ್ಲರೆನಲಾ ಮಾತು ತಮ್ಮ
ಮರ್ಮಮಂ ತಾಗಲಾಗಳಾಮಾತಂ ಶಿವಾಜಿ ತನ್ನ ಮನದೊಳಟ್ಟು
ಸೈರಿಸಿಯಾಮೂವರುಮುದಯಪುರಕ್ಕೆಯ್ತಂದ ಬಳಿಕ್ಕಂ ಆ ಶಿವಾಜಿಸಂ
ಬಾಜಿಗಳಾಲೋಚಿಸಿ ತಾಂ ಬಡಗಿವೆಣ್ಣಿನೊಳುದ್ಭವಿಸಿದ ಕಾರಣದಿಂ
ಮುಂದೆ ರಾಜತ್ವಕ್ಕನರ್ಹರಾದೆವಿನ್ನಿಂತಿರ್ಪುದನುಚಿತಮೆಂದು ತತ್ಪುರ
ದೊಳಿರ್ಪ ಓಂಕಾರೇಶ್ವರಲಿಂಗಮಂ ಭಜಿಸಲಾ ಓಂಕಾರೇಶ್ವರಂ ಶಿವಾ
ಜಿಯ ಸ್ವಪ್ನದೊಳ್ ಬ್ರಾಹ್ಮಣವೇಷದಿಂ ಪ್ರಸನ್ನನಾಗಿ ನಿಮಗೆ ರಾಜತ್ವ
ಮನಿತ್ತಪೆನಿದಕ್ಕೆ ಕುರುಹೇನೆಂದೊಡೆ ನೀವಿರ್ವರುಂ ಮುನ್ನಿನಂತೆ
ಮೃಗಯಾವ್ಯಸನಕೆಂದೈದಲ್ಕೀಂ ತೊಟ್ಟಂಗಿಯ ಸುರಗೊಂದುಗಿಡಕ್ಕೆ
ಸಿಲುಂಕುವುದಲ್ಲಿಯುಗುಳ್ಚಿಸಿ ನೋಡಲಪರಿಮಿತನಿಕ್ಷೇಪಂ ಕೈಸಾರ್ಪುದ
ದರಿಂ ಮುಂದೆ ನೀಂ ದಿನದಿನದೊಳ್ವರ್ಧಿಷ್ಣುಗಳಾಗಿ ಪ್ರತ್ಯೇಕರಾಜರೆನಿಸಿ
ಪ್ರಸಿದ್ಧಿಯಂ ಪಡೆವಿರೆಂದುಸಿರ್ದು ಮಾಯಮಾಗಲ್ಕೆಚ್ಚತ್ತು ತಾನಾಸ್ವಪ್ನಾ
ಭಿಪ್ರಾಯಮಂ ಮನದೆಗೊಂಡು ತನ್ನ ತಮ್ಮ ಸಂಬಾಜಿಗುಸಿರ್ದು ಈ
ಸ್ವಪ್ನಾಭಿಪ್ರಾಯಫಲನಿದರ್ಶನಮಂ ನೋಡವೇಳ್ಕೆಂದು ಮೃಗಯಾವ್ಯ
ಸನವ್ಯಾಜದಿಂ ತಾಮಿರ್ವರುಮೊಂದಾಗಿ ವೈಹಾಳಿಯಂ ಪೊರಟು
ಪೋಗುತ್ತಿರಲಾವೇಳೆಯೊಳ್ ಶಿವಾಜಿ ತೊಟ್ಟಿರ್ದಂಗಿಯ ಸೆರಗೊಂದು
ಗಿಡುವಿಂಗೆ ತೊಡಂಗಲಲ್ಲಿ ನಿಂದು ಆ ತಾಣವನುಗುಳ್ಚಿಸಿ ನೋಡಲಲ್ಲಿ
ಭೂರಿನಿಕ್ಷೇಪಮಿರಲದಂ ಸಾಧ್ಯಮಂ ಮಾಡಿಕೊಂಡು ಬಳಿಕ್ಕಾ ಶಿವಾಜಿ
ಸಂಬಾಜಿಯೆಂಬಿರ್ವರುಂ ಕಾಶೀಕ್ಷೇತ್ರಕ್ಕೈದಿ ನಾಗಭಟ್ಟನೆಂಬ ವಿದ್ವಾಂ

ಸನಂ ಬರಿಸಿಕೊಂಡು ತನ್ನ ಮೂಲವೃತ್ತಾಂತಮನೆಲ್ಲಮನುಸಿರಲಾ ವೃತ್ತಾಂತಮನೆಲ್ಲಮಂ ಕೇಳ್ದು, ನೀಂ ಜನಿಸಿದ ಭೂಮಿ ನೀಚಜಾತಿಯದಾದೊಡಮೊಭೂಮಿಯಲ್ಲಿ ಬಿತ್ತಿದ ಬೀಜಂ ಕ್ಷತ್ರಿಯಬೀಜಮಾದ ಕಾರಣದಿಂ ನೀಂ ಉಪನಯನಕ್ಕರ್ಹರೆಂದುಸಿರ್ದು ಬಳಿಕ್ಕವರ್ಗಂ ಭಾರದ್ವಾಜಗೋತ್ರಜರೆಂದು ಉಪನಯನಮಂ ರಚಿಸಿ ಬೀಳ್ಕೊಡಲ್ ಬಳಿಕ್ಕಂ ಕ್ಷತ್ರಿಯವಂಶಜರಾದ ರಜಪೂತರ್ಗೆ ದಾಯಾದರೆನಿಸಿ ಪ್ರಖ್ಯಾತಿವೆತ್ತ ಶಿವಾಜಿ ಸ[illegible]ಾಜಿ ಯೆಂಬಿರ್ವರುಂ ಪ್ರತ್ಯೇಕವಜೀರರೆಂದೆನಿಸಿ ವರ್ತಿಸುತ್ತುಮಿರ್ದರ್. ಮುಂತವರವಂಶಪರಂಪರೆಯೊಳ್ ॥ ೧೮

ಹರಿಜಿಯೊಗೆದಂ ತದಾತ್ಮಜ
ನುರತರನೇತೋಜಿ ತತ್ಸುತಂ ಶಾಜಿಯುಮಾ ।
ವರಶಾಜಿಯ ಸುಕುಮಾರ
ರ್ಪರಿಕಿಸೆ ವಿಲಸಚಿ ವಾಜಿ ಯೇಕೋಜಿ ವಲಂ ॥ ೧೯

ಇಂತೊಗೆದ ಶಾಜಿಯ ಪುತ್ರರಿರ್ವರೊಳಾಶಾಜಿಯ ಜ್ಯೇಷ್ಠಪತ್ನಿ ಜಾಜಾಬಾಯಿಯ ಬಸಿರೊಳಗೊಗೆದ ಕುಮಾರಂ ಶಿವಾಜಿ, ತಚ್ಛಾಜಿಯ ಕನಿಷ್ಠಪತ್ನಿಯೊಳಗೊಗೆದ ಕುಮಾರನೇಕೋಜಿ ಯೆಂದು ತಿಳವುದಂತುಮಲ್ಲದೆಯುಂ॥ ೨೦

ಮೆರೆವೇಕೋಜಿಯ ಪುತ್ರ
ರ್ಪರಿಕಿಪೊಡಂ ಶಾಜಿ ಯೆಸೆವ ಶರಭಜಿ ಮತ್ತಾ ।
ಕಿರಿಯ ಕುಮಾರಂ ಭೂತಳ
ವರಿಯಲ್ತುಕ್ಕೋಜಿ ಯಿಂತು ಮೂವರ್ತನುಜರ್ ॥ ೨೧

ಅಂತುಮಲ್ಲದೆ ॥ ೨೨

ಶಾಜಿಯ ನಂದನನೆನಿಪ ಶಿ
ವಾಜಿಗೆ ಸಂಭೂತನಾದ ಪಿರಿಯ ಮಗಂ ಸಂ ।

ಬೋಜಿ ಕನಿಷ್ಠಸುತಂ ವಿ
ಭ್ರಾಜಿಸುತಿಹ ರಾಮರಾಜನಿಂತಿವರಿರ್ವರ್ ॥ ೨೩

ಇಂತೊಗೆದ ಶಿವಾಜಿಯ ಪುತ್ರರಿರ್ವರೊಳಾ ಶಿವಾಜಿಯ ಜ್ಯೇಷ್ಠಪತ್ನಿ ಜಿವಾಬಾಯಿಯ [1] ಬಸಿರೊಳೊಗೆದ ಪುತ್ರಂ ಸಂಬಾಜಿ ತತ್ಕನಿಷ್ಠಪತ್ನಿಯಾದ ಜಾಧವರಾಯನ ಕುಮಾರಿ ತಾರಾಬಾಯಿಯ ಬಸಿರೊಳುದ್ಭವಿಸಿದ ಕುಮಾರಂ ರಾಮರಾಜನಾ ರಾಮರಾಜನೇ ರಾಜೇರಾಮನೆಂದು

ನೆಗಳ್ತೆವೆತ್ತನಂತುಮಲ್ಲದೆಯುಂ ॥ ೨೪

ಕರವೆಸೆವಾ ಸಂಬಾಜಿಯ
ವರತನುಜಂ ಸಾಹುರಾಜನೆಂದೆನಿಪಂ ಭಾ ।
ಸುರತತ್ಸಂಬಾಜಿಯ ಸೋ
ದರನೆನಿಸುವ ರಾಮರಾಜಗಿರ್ವರ್ಸತಿಯರ್ ॥ ೨೫

ಅವರೊಳ್ ಜ್ಯೇಷ್ಠವಧೂಸಂ
ಭವನಭಿಧಾನಂ ಶಿವಾಜಿ ಕಿರಿವೆಂಡತಿಯೊಳ್ ।
ತವೆ ಜನಿಸಿದ ಸುಕುಮಾರಂ
ವಿವರಿಸೆ ಸಂಬಾಜಿ ಯುವಗೆ ನಂದನರಿರ್ವರ್ ॥ ೨೬

ಇನ್ನು ಡಿಳ್ಳಿಯನಾಳ್ದ ತುರುಷ್ಕರ ವಂಶವಿವರಣಮಂ ಪೇಳ್ವೆನದೆಂತೆಂದೊಡೆ. —ಡಿಳ್ಳಿಯೆಂಬುದಾದಿಯೊಳ್ ಹಸ್ತಿನಾವತಿ; ಆ ಸಂಸ್ಥಾನಮಂ ದುರ್ಯೋಧನನಂತರಂ ಧರ್ಮರಾಯನಾಳ್ದಂ; ತದನಂತರಂ ಪರೀಕ್ಷಿತಮಹಾರಾಯನಾಳ್ದನಾತರುವಾಯಂ ಕೆಲಬಜಾತಿಕ್ಷತ್ರಿಯರಾಳ್ದರಾತರುವಾಯಂ ಕೆಲಬರಾಭಾಸಕ್ಷತ್ರಿಯರಾಳ್ದರಾತರುವಾಯಂ ಮಿಶ್ರಜಾತಿಯವರಾಳ್ದರಾತರುವಾಯಂ ರಜಪೂತಸಂತತಿಯೊಳುದಿಸಿದ ಜಯಚಂದ್ರನರೇಂದ್ರನಾಳ್ದನಾತನ ತರುವಾಯಂ ತದ್ವಂಶಜನಾದ ಅನಂಗಪಾಲಂ ವರ್ಷ ೩೬, ಪೃಥುರಾಜಂ ವರ್ಷ ೬, ಉಭಯಂ ವರ್ಷ ೪೨. ಆ ತರು

1 ಜಿತಾಬಾಯಿಯ

ವಾಯಿಯುಂ ಪಠಾಣ ಜಾತಿಯವರಾಳ್ದಗವರೊಳ್ ಸುಲ್ತಾನ ವರ್ಷ ೪೦, ಸುಲ್ತಾನ ಶಹವೋದೀರ್ ವರ್ಷ ೨೭ ಮಾಸ ೭, ಶಾಹಾಸುದೀರ್ ಘೋರಿ ವರ್ಷ ೨೦ ಮಾಸ ೧೦, ಸುಲ್ತಾನ ಫೀರೋದಶಾಹ ವರ್ಷ ೧೦ ಮಾಸ ೭, ಈತನ ಪತ್ನಿ ಶಾಹಾ ಮಸೂದಾಬೀಬಿಪಾಜಿ ವರ್ಷ ೭ ಮಾಸ ೬, ಶಾಹಾ ವ್ಯೆನುದೀರ್ ವರ್ಷ ೭ ಮಾಸ ೧, ಮಸೂದನಶಾಹಾ ರಣತಿ (?) ತಿಂಗಳು ೫, ನಸೀಮದೀರ್ ಘೋರಿ ವರ್ಷ ೩೦ ತಿಂಗಳು ೬ ಗಯಾಸುದೀರ್ ಘೋರಿ ವರ್ಷ ೨೦ ಮಾಸ ೪, ಶಾಹಾ ಕುತುಬಘೋರಿ ವರ್ಷ ೩ ಮಾಸ ೮, ಹಾಶಾ ನಸೀಮದೀರ್ ಘೋರಿ ವರ್ಷ ೬ ಮಾಸ ೫ ಶಾಹಾ ಅಲ್ಲಾವುದೀರ್ ವರ್ಷ ೫೮ ಮಾಸ ೪, ಶಾಹಾ ಕುತುಬುದೀರ್ ವರ್ಷ ೪೮ ಮಾಸ ೩, ಶರಶಾಹಾ ಸುರ(?)ಅಭಗ [1] ವರ್ಷ ೬ ತಿಂಗಳು ೮, ಅಂತುಂ ಪಠಾಣರಾಳಿದುದು ವರ್ಷ ೨೯೦.

ಆತರುವಾಯುಂ ಮೊಗಲರ್:—ಸುಲ್ತಾನ ಕುಸ್ರು ವರ್ಷ ೮ ಮಾಸ ೬, ಸುಲ್ತಾನ ಪೀರೋದಶಾಹಾ ಖತನು ಪಾತುಶಾಹಾ ವರ್ಷ ೩೮ ಮಾಸ ೫ ,ಮಹಮ್ಮದುಲ್ಲಾ ನಸಲಕ್ಕ ವರ್ಷ ೬ ಮಾಸೆ ೬; ಈ ಮಹಮ್ಮದುಲ್ಲಾ ನಸಲಕ್ಕಾ ಪಾತುಶಾಹಂ ತೊಗಲ ನಾಣ್ಯವಂ ನಡೆಸಿದಂ; ಆಮೇಲೆ ಶಾಹಾ ಸುಲ್ತಾನ ಮಹಮ್ಮುದತೋಬರ [2] ವರ್ಷ ೧೨ ಮಾಸ ೫, ಶಾಮಾಯಿಯಾಸ್ (?) ವರ್ಷ ೧ ಮಾಸ ೪, ಸುಲ್ತಾನ ಹಮ್ಮಿರ ವರ್ಷ ೨೦ ತಿಂಗಳು ೧೦, ಸುಲ್ತಾನ ಬಹಿಲೋಲ ಲೂದಿ ವರ್ಷ ೩೮ ಮಾಸ ೫, ಶಿಖೇಂದ್ರ ಲೋದಿ ವರ್ಷ ೨೮ ಮಾಸ ೭, ವಿಭರಾಮ ಲೋದಿ ವರ್ಷ ೧೦, ಬಾಬರ್ ಪಾತುಶಾಹ ವರ್ಷ ೪ ಮಾಸ ೧೦, ಹಮ್ಮಾವು ವರ್ಷ ೧೪ ಮಾಸ ೨, ಅಂತುಂ ವರ್ಷ ೧೮೪.

ಆಮೇಲೆ ಇತ್ತ ಕೇವಲ ಪ್ರಖ್ಯಾತಿವೆತ್ತರೊಳ್ ಫಕೀರೇಶ್ವರನ ಕೃಪೆಯಿಂ ತಕಥನಾಳ್ದ ತಿಮಿರಲಂಗ ವರ್ಷ ೨೭ ಮಾಸ ೮, ಬಾಬರ್

---

[1] ಸುನು ಅಭಗಾ (ಕ) [2] ಮಹಮ್ಮದು ಮುದ್ದಕ್ಕೋಬರ (ಕ)

ಲಂಗ ವರ್ಷ ೩ ಮಾಸ ೯, ಸಲೀಮಶಾಹಾ ಪೆಸರಶೇರುಶಾಹಾ [1] ವರ್ಷ ೮ ಮಾಸ ೧೦, ಮಸೂದಶಾಹಾ ಶಲೀರಮನ್(?)ಮಾಸ ೧, ಶಾಹಾ ಹಮ್ಮಾವು ತಿಂಗಳು ೯ ಮಸೂದ ಶಾಹಾ ಜಲಾವುದೀನ್ ವರ್ಷ ೫೦ ಮಾಸ ೧, ಜಹಂಗೀರ್ ವರ್ಷ೨೦ ಮಾಸ ೧, ಶರಜಾನ್ ವರ್ಷ ೩೨, ಅವರಂಗ ಜೇಬ ವರ್ಷ ೫೨ ಮಾಸ ೬, ಶಾಹಾ ಅಲ್ಲಿ ವರ್ಷ ೫ ಮಾಸ ೫, ಫರ ಕ್ಷಾಹ ವರ್ಷ ೨ಮಾಸ ೬, ಆಮೀಲೆ ಮೌಜದೀನ್ ವರ್ಷ ೨ ಮಾಸ ೧೧, ಅಜಂ ಮೌಜದೀಞ ವರ್ಷ ೧ ಮಾಸ ೧೦, ಫರಕ್ಷಾಹ ವರ್ಷ ೩, ಮಹಮ್ಮುದ್ದ ಅಜಂ ರಾಜದೀಞ ವರ್ಷ ೧ ಮಾಸ ೬, ಅಂತುಂ ವರ್ಷ ೨೧೮ ಮಾಸ ೯, ಅಂತುಂ ಶಾಲಿವಾಹನ ಶಕ ವರ್ಷ ೧೬೫ ನೆಯ ಶಾರ್ವರಿ ಸಂವತ್ಸರದ ಮಾರ್ಗಶಿರ ೩೦ ವರೆಗೆ ಆಳ್ದರ್. ಇಂತು ಪೂರ್ವ ಮಾರಭ್ಯ ದಿಳ್ಳಿಯನಾಳ್ದವರೊಳುತ್ತಂ ಸುಲ್ತಾನನಾದಿಯಾಗಿ ವಂಶಪರಂ ಪರಾವಿವರಂ ; ತತ್ತ್ಚರಿತ್ರಂಗಳಂ ಪದ್ಯರೂಪದಿಂ ಪೇಳ್ವನದೆಂತೆಂದೊಡೆ ॥ ೨೩

ವರ [1] ದಿಳ್ಳಿಯನಾಳ್ದ ತುರು
ಷ್ಕರ ಗಮದಿಂ ಪೇಳ್ವನಾದಿಯೊಳ್ ಸುಲಿತಾನಂ ।
ಪರಿಕಿಪೊಡಿತ್ತ ಫಕೀರೇ
ಶ್ವರಕೃಪೆಯಿಂ ತಿಮಿರಲಂಗನೆಂಬವನಾಳ್ದಂ ॥ ೨೮

ವರತಿಮಿರಲಂಗಬಾಬ
ರ್ಪರಿಕಿಸೆ ಹಮ್ಮಾವಕಬರ [ಜಾಂಗೀರ್ಶರ] ಜಾಞ ।
ಮಿರುಗುವವರಂಗಜೇಬಂ
ನೆರೆ ಬಹದರ್ಫರಕಶಾಹ ಮಹಮುದಶಾಹಂ ॥ ೨೯

ಅವರೊಳ್ಕಂಪಿಲರಾಯನ
ಕುವರನೆನಿಪ್ಪುರುಕುಮಾರರಾಮನ ದಂಡಂ ।

---

[1] ಪೆಸಶೆಶಿದ:ಶಹಾ (ಬ), ಪೆಸಂಶೆಶಿದುಃಶಾಹ (ಕ)

[2] ತವ (ಕ)

ಬವರದೆ ಮುಳುಗಿಸಿ ಶೋಭಿಸು
ವವನೀಮಂಡಲವನಾಳ್ದನಾಸುಲಿತಾನಂ ॥ ೨೦

ವಿಲಸತ್ತ್ರಿವೇಣಿಯೊಳಗಾ
ಳ್ದಳದಾನಾವಿಲನೆ( ? )ಧರೆಯೊಳಕಬರನಾದಂ ।
* ಬಳಿಕೆ ಜಾತಿಸ್ಮರತ್ವಂ
ದಳದತಿಭುಜಬಲದೆ ಡಿಳ್ಳಿಯುಂ ಪಾಲಿಸಿದಂ ॥ ೨೧

ಚಾರುಯಶೋವಿಕ್ರಮದಿಂ
ರಾರಾಜಿಸುವೋರುಗಲ್ಲಧೀಶನೆನಿಪ್ಪಾ ।
ವೀರಪ್ರತಾಪರುದ್ರಮ
ಹೀರಮಣಾಧಿಪನನೈದೆ ಕೈಸೆರೆವಿಡಿದಂ ॥ ೨೨

ದುರ್ಮ್ಮಿಯ ಯುವನಾಧೀಶನ
ಹರ್ಮ್ಯಂ ಮುರಿದವನ ಘೋಟಕಂಗಳ್ಗಂದುಂ ।
ಧುರ್ಮ್ಮಿಚಿಯನಿಕ್ಕದಿಹ ಪರಿ
ಯುರ್ಮ್ಮಾಡಿಸಿ ತದ್ವಕೀಲಿಯುಂ ಮೂಣಿಸಿದಂ ॥ ೨೩

ಮತ್ತಮದಲ್ಲದಾ ಅಕ್ಬರಪಾತುಶಾಹನ ವಂಶೋದ್ಭವನಾದ ಅವರಂಗಜೇಬಪಾತುಶಾಹಂ ತನ್ನಗ್ರಜನಾದ ದಾರಶಾಹನಂ ಕೊಂದುತಾಂ ಪಟ್ಟಕ್ಕೆ ನಿಂದು ರಾಜ್ಯಂಗೆಯ್ವುತ್ತುಂ ॥ ೨೪

ಅವರಂಗಜೇಬನೊಪ್ಪುವ
ಬವರದೆ ಬಾವನ್ನಪಾತುಶಾಹರ ಮುರಿದು ।
ತ್ಸವದಿಂದೇಕಚ್ಛತ್ರದೊ
ಳವನೀಮಂಡಲವನಾಳ್ದನತಿವಿಕ್ರಮದಿಂ ॥ ೨೫

ಮತ್ತಮದಲ್ಲದವರಂಗಜೇಬಪಾತುಶಾಹಂ ರಜಪೂತವೆಣ್ಣಿನೊಳಕ್ಬರನೆಂಬ ಕುಮಾರನಂ ಮೊಗಲವೆಣ್ಣಿನೊಳ್ ಶಹಲಮನೆಂಬ ಪುತ್ರನಂ ಬೇಗಮ್ಮ ಯೆಂಬ ಕುಮಾರಿಯುಮನಿಂತಿರ್ವರುಮಂ ಮತ್ತಂ ಮುಸಲ್ಮಾನವೆಣ್ಣಿನೊಳಜಮತಾರನೆಂಬ ಪುತ್ರನಂ, ಗುಜರಾತಿ ಕಾರುಕಿ ಸೂಳ್

ವೆಣ್ಣಿನೊಳ್ ಕಾಂಬಕ್ಸನೆಂಬ ನಂದನನಂ ಪಡೆದಿಂತಿರುತ್ತೊಂದವಸರದೊಳ್, ಅವರಂಗಜೇಬಪಾತುಶಾಹಂ ಸದರೊಳ್ಕುಳ್ಳಿರ್ದಕ್ಬರನೆಂಬ ಕುಮಾರನಂ ಕರೆದು ತನ್ನ ಕಯ್ಯೊಳ್ಪಿಡಿದಿರ್ದ ಪಟ್ಟದ ಕೂರಸಿಯನವನ ಕೈಗಿತ್ತಿದೆಂತಿರ್ಪುದೆನಲವನಕ್ಕಿ ಹೂಣಿಸಿ ನಿಲಲಾರದೆ ಕಂಪಿಸುತ್ತಿರಲವನಂ ಕಂಡಿವಂ ತಕತ್ತನಾಳ್ವುದರ್ಕಯೋಗ್ಯನೆಂದು ಬಗೆದು ತಿರಸ್ಕರಿಸಲವಂ ನಿಸ್ತೇಜಸ್ಕನಾಗಿ ಗುಜ್ಜರದೇಶಪ್ರಾಂತವನ್ನೈದಲುಳಿದ ಜಮತಾರ ಕಾಂಬಕ್ಸ ಶಹಲಮನೆಂಬ ಕುಮಾರರುಂ ಬೇಗಮು ಯೆಂಬ ಕುಮಾರ್ತಿಯುಂ ವೆರಸು ಸುಖಮಿರುತ್ತುಂ, ಶಹಲಮನೆಂಬ ಕುಮಾರನ ತೇಜೋಬಲಪಟುತ್ವಕ್ಕಂ ಮೆಚ್ಚಿ ಭಾದುರ್ಶಾಹನೆಂದು ಪ್ರತಿನಾಮವನಿಟ್ಟು ಶಹಲಮಂಗೆ ಮೂವರ್ಪುತ್ರರುದಿಸಲ್ ಕ್ರಮದಿಂದವರ್ಗೆ ಅಜಮುರ್ದಿ ಮೌಜರ್ದಿ ರಫೇಲ್ಶಾಹನೆಂದು ಪೆಸರಿಟ್ಟು ಮತ್ತಮಾರಫೇಲ್ಶಾಹನೆಂಬ ಮೊಮ್ಮಗಂಗೆ ಬುಲಂದಕ್ಥರ( ? )ನೆಂದು ಪ್ರತಿನಾಮವನಿಟ್ಟು ಮತ್ತಮಾ ಶಹಲಮನ ಮಗನಾದ ಅಜಮ್ಮುರ್ದಿಗೊರ್ವ ಕುಮಾರನೊಗೆಯಲವಂಗೆ ಫರಕ್ಕಶಾಹನೆಂದು ಪೆಸರಿಟ್ಟು ಮತ್ತಮಾ ಜಮತಾರನೆಂಬ ಕುಮಾರನೊಳುದ್ಭವಿಸಿದ ಮೊಮ್ಮಗಂಗೆ ದಿವಾಬೋಕ್ಸ( ? )ನೆಂದು ಪೆಸರಿಟ್ಟು, ಇಂತವರಂಗಜೇಬಪಾತುಶಾಹಂ ಮಕ್ಕಳ್ಮೊಮ್ಮಕ್ಕಳ್ಮರಿಮಕ್ಕಳ್ವೆರಸು ತನ್ನ ಸೋದರಮಾವನಾದ ಶಾಸ್ತುಖಾನ ಫೇರೋಜಂಘನೆಂದುಭಯನಾಮಾಂಕಿತನಾದ ಶಾಬ್ಜಿಖಾನನ ಮಗ ನಿಜಾಮಂಗೆ ಮಂತ್ರಿ ಅಸತ್ಖಾನ ಅವನ ಮಗ ಜುಲುಪರಖಾನ ಮತ್ತಂ ಶೇಖುನಿಜಾಮ ರಗಟಬಲ್ಲೂಲಖಾನ ಮುಂತಾದ ವಜೀರರ್ಕಳ್ವೆರಸು ಗಾಜದೀಖಾನ ಚಿಕ್ಕಲೀಸಖಾನನೆಂದು( ? ) ಇವನಿಗೆ ದಾಕ್ಷಿಣಾತ್ಯರಾಜ್ಯದಧಿಕಾರವನಿತ್ತು ತಾಂ ಪ್ರಾಜ್ಯರಾಜ್ಯಭಾರವಿಟ್ಟು ವಿಚಾರಕ್ಕತನಾಗಿ ವರ್ತಿಸುತ್ತುಂ ಮತ್ತಂ ಸ್ವನಾಮಾಂಕಿತಮಾದವರಂಗಾಬಾದೆಂಬ ಪಟ್ಟಣಮಂ ನಿರ್ಮಾಣಂಗೈಸಿ ಸ್ವಮತಾನ್ಯಮತಂಗಳನ್ನದೆ ತತ್ತ್ವಚ್ಛಾಸ್ತ್ರಮರ್ಮಂಗಳಂ ಕೇಳುತುಂ, ಮಂತ್ರಶಾಸ್ತ್ರಂಗಳಂ ಸಂಗ್ರಹಿಸಿ ಮುಲ್ಲಾ ಶಾಸ್ತ್ರವಿವರಣಂಗಳಂ ಕೇಳುತಿಂತು ಸುಖಸಂಕಥಾವಿನೋದಗೋಷ್ಠಿಗಳಂ ರಾಜ್ಯಮನಾಳುತ್ತುಮಿರ್ದಂ.

ಇನ್ನು ಮುಂದುಸಿರ್ವ ಕಥಾಸಂದರ್ಭಕ್ಕೋಸುಗಂ ಗೀಜಗನ ಹಳ್ಳಿಯ (ಪ್ರತಿನಾಮ ಬಿಜಾಪುರ) ಸಂಸ್ಥಾನಮನಾಳ್ದ ಪಾತುಶಾಹರಂ ವಿವರಣಮಾಗೆ ಪೇಳ್ವನದೆಂತೆಂದೊಡೆ:—ಆದಿಯಲ್ಲಿ ಪರಮೇಶ್ವರನಕೃಪೆಯಿಂ ಸಂಸ್ಥಾನಾಧಿಪತಿಯಾದ ಶಾಹಾಮೂರ್ತುಜಾ ಅಲ್ಲಿ ವರ್ಷ , ಅವನ ತಮ್ಮ ಶಾಹಾನದೀಮುಲ್ಲ ವರ್ಷ , ಆಮೇಲೆ ಫಕೀರ ಸಾಹೇಬ (ಪ್ರತಿನಾಮ ದರ್ಬೇಸಿ) ಪಾತುಶಾಹ ವರ್ಷ , ಆ ಬಳಿಕಂ ಅಲ್ಲಿಯೆದುಲ ಶಾಹ ವರ್ಷ , ಅವನಿಂ ಬಳಿಕಂ ಸುಲ್ತಾನ ಮಹಮುದ್ದ ವರ್ಷ , ಆಮೇಲೆಸುಲ್ತಾನಿ ಶಿಖೀಂದ್ರ ವರ್ಷ , ಅಂತುಂ ವರ್ಷ ; ಈಶಿಖೀಂದ್ರನ ಕಾಲದಲ್ಲಿ ಶಾಲಿವಾಹನಶಕ ವರ್ಷ ನೆಯ ಕ್ಷಯಸಂವತ್ಸರದಲ್ಲಿ ಈ ವಿಜಾಪುರಸಂಸ್ಥಾನಂ ಮುಂದೊರೆವ ಗೋಲುಕೊಂಡೆಯ (ಪ್ರತಿನಾಮ ಭಾಗಾನಗರದ) ಸಂಸ್ಥಾನ ಮಿಂತುಭಯಸಂಸ್ಥಾನಂಗಳುಂ ಕಾಕತಾಳೀಯನ್ಯಾಯದಿಂ ಪಿಂತೊರೆದಾರೆಯರ ಮಂಶೋದ್ಭವನಾದ ಶಾಜಿಯ ಸುತನೆನಿಪ ಶಿವಾಜಿಯುಂ ವಶಂಗೆಯ್ವೆನೆಂದೈದಿದ ಡಿಳ್ಳಿಯ ಪಾತುಶಾಹನಪ್ಪವೆರಂಗಜೇಬನಧೀನಮಾದುವಾವೃತ್ತಾಂತಂ ಮುಂದೆ ಬರ್ಪುದೀಗೊರೆದ ವಿಜಾಪುರದ ಸಂಸ್ಥಾನಮನಾಳ್ದ ತುರುಷ್ಕರ ನಾಮಂಗಳಂ ಪದ್ಯರೂಪದಿಂ ಪೇಳ್ವನದೆಂತೆಂದೊಡೆ ॥ ೩೬

ಸೊಲ್ಲಿಪೆನಾವಿಜಾಪುರಮನಾಳ್ದರನೊಪ್ಪುವ ಶಾಹಮೂರ್ತುಜಾ
ಅಲ್ಲಿಯನಂತರಂ ನದಿಯಮುಲ್ಲನುದಾರಪಕೀರಶಾಹನಾ ।
ಅಲ್ಲಿಯಯೇದುಲಂ ಮೆರೆವ ವಿಭ್ರಮಯೇದುಲಪಾತುಶಾಹನಿಂ
ತಿಲ್ಲಿಗೆಯ್ದಿವರಿನ್ನುಳಿದ ನಾಲ್ವರುಮಂ ತಿಳಿಮಂತುಸಿರ್ದಪೆಂ ॥ ೩೭

ಸುಲುತಾನಮಹಮುದಾಖ್ಯಂ
ಬಳಿಕಲ್ಲಿಯೆದುಲಶಹಾನ ಸಮನಂತರದೊಳ್ ।
ವಿಲಸದ್ಬಡೆಸಾಹೇಬತಿ
ಸುಲುತಾನಶಿಖೀಂದ್ರರೆಂಬಿವರ್ಕಳ್ ಕ್ರಮದಿಂ [1] ॥ ೩೮

---

1 ಇಲ್ಲಿಂದ ಮುಂದೆ ಇದುವರೆಗೂ ಹೇಳಿದ ವಂಶಾವಳಿಯನ್ನೇ ತಿಳಿಸತಕ್ಕ

ಇಂತು ಶಾಹಮುರ್ತಜಾ ಅಲ್ಲಿಯಾದಿಯಾಗಿ ಸುಲುತಾನಶಿಖೀಂದ್ರಾಂತವಾಗಿ ವಿಜಾಪುರದ ತಕಥನಾಳ್ದ ಪಾತುಶಾಹರ್. ಇವರೊಳಾ ಪಿಬ್ರಾಮಲ್ಲಿ ಯೇದುಲಶಾಹನ ತಂದೆಯಾದ ಅಲ್ಲಿಯೇದುಲಶಾಹಂಗೆ ವಿವಾಹವಾದ ಸ್ತ್ರೀಯುದಾರಾರೆಂದೊಡೆ, ದೇವಗಿರಿ ಪ್ರತಿನಾಮ ದೌಲತಾಬಾದಿನ ಸಂಸ್ಥಾನಕ್ಕೆ ಸಲ್ವ ಅಮದಾನಗರದ ನಿಜಾಮುಪಾತುಶಾಹನ ಮಗಳ್; ಆಕೆಯ ಪೆಸರ್................ಮತ್ತಮಾ ಪಿಬ್ರಾಮಯೇದುಲಶಾಹನ ಮಗ ಸುಲುತಾನ ಮಹಮ್ಮದಶಾಹನ ಮಂತ್ರಿಯ ಪೆಸರ್ ಹಿರೆಖವಾಸಖಾನ; ಆ ಅರಸಿನ ನಿಯೋಗಿಯಾದ ಕಾರಕೂನಂ ಮುರಾರಿ ಜಗದೇವಪಂತಂ; ಈ ಮುರಾರಿಜಗದೇವಪಂತಂ ಕರ್ತೃ ಸುಲುತಾನಮಹಮ್ಮದಶಾಹಂಗೆ ಗೋಲುಕೊಂಡೆಯ ಕುತುಬಶಾಹನ ಮಗಳಾದ ಬಡೆಸಾಹೇಬತಿಯೆಂಬ ಪೆಣ್ಣಂ ವಿವಾಹವಂ ಮಾಡಿಸಿದಂ. ಆ ಬಡೆಸಾಹೇಬತಿ ಕೆಳಗಣಪದ್ಯಂಗಳಿವೆ.—

ಶಾಹಮುರ್ತಜಾ ಅಲ್ಲಿಯಾತಮ್ಮಂ
ಶಾಹನದೀಮುಲ್ಲಿಂ ಭಾವಿಸೆ ತ
ಚ್ಛಾಹಮುರ್ತಜಾಅಲ್ಲಿಯ ಪುತ್ರಂ
ಸಾಹಸಿಯೆನಿಪ ಫಕೀರಸಾಹೇಬಂ ||

ಧೀರಫಕೀರಸಾಹೇಬನ ಪುತ್ರಂ
ಧಾರಿಣಿಗಲ್ಲೀಯೇದುಲಶಾಹಂ
ಭೂರಮಣಿಯಲ್ಲೀಯೇದುಲಶಾಹಗೆ
ಸೂನಂಪಿಬ್ರಾಮಯೇದುಲಶಾಹಂ ||

ಮಿನುಪ ಪಿಬ್ರಾಮಯೇದುಲಶಾಹನ
ತನುಜಂ ಸುಲುತಾನಕಮಹಮ್ಮದಂ
ಘನತರಸುಲುತಾನಕಮಹಮ್ಮದನ
ವನಿತೆ ಬಡೇಸಾಹೇಬತಿ ಯೆನಿಸಿದಳ್ ||

[ ಬಡೆ ] ಸುಲುತಾನನ ಸೊಳೆಯ ತನುಜಂ
ಪೊಡವಿಯೊಳಲ್ಲೀಯೇದುಲಶಾಹಂ
ಬಿಜನಾಅಲ್ಲೀಯೇದುಲನ ಸುತಂ
ಕಡುಗಲಿಯುಳ ಸುಲುತಾನಶಿಖೀಂದ್ರಂ ||

ಯ ಮಗನ ಪೆಸರ್... ಈ ಸುಲ್ತಾನಮಹಮ್ಮದಶಾಹಂ ಬಡೆಸಾಹೇಬತಿ ಯೆಂಬ ಸ್ತ್ರೀಯಲ್ಲದೆ ನವರಸನಾರಿಯೆಂಬ ಸೂಳೆವೆಣ್ಣನಂಗೀಕರಿಸಿ ಕೊಂಡಿರ್ದಂ. ಆ ನವರಸನಾರಿಯೆಂಬ ಸೂಳೆಯ ಬಸಿರಿನಲ್ಲಿ ಪುಟ್ಟಿದ ಮಗನ ಪೆಸರ್ ಅಲ್ಲಿಯೋದುಲಶಾಹಾ; ಆ ಅಲ್ಲಿಯೋದುಲಶಾಹಾನ ಕುಮಾರಂಗೆ ತನ್ನ ಕಡೆಯ ವಜೀರ ಪತ್ತೇಖಾನನ ಮಗಳಂ ವಿವಾಹವಂ ಮಾಡಿ ತಾನೀರೀತಿಯಲ್ಲಿರುತ್ತಿರ್ದಂ. ಆ ಪತ್ತೇಖಾನನ ಕಾರಕೂನನ ಪೆಸರ್ ಕಾಶೀಪಂತಂ; ಇಂತು ವರ್ತಿಸುತ್ತುಮಿರ್ದ ಸುಲುತಾನ ಮಹಮ್ಮದ ಶಾಹಂಗೆ ವ್ಯಾಧಿ ಪ್ರಕೋಪಿಸಲಾಗಳ್ ತನ್ನ ಬೀಗ ಪತ್ತೇಖಾನನಂ ಬರಿಸಿ ಕೊಂಡಾಪ್ತಾಳೋಚನೆಯಂ ರಚಿಸಿ ನಿನಗಿಂತು ಸೌಭಾಗ್ಯವೆಂತು ದೊರೆ ಕೊಂಡುದೆಂದು ಬೆಸಗೊಳಲ್ ತನ್ನ ಕಾರಕೂನಂ ಕಾಶೀಪಂತನಿಂದಾದುದೆ ನಲಾ ಕಾಶೀಪಂತಂಗ ಜಾನಂತರಾಯನೆಂದು ಪ್ರತಿನಾಮವನಿಟ್ಟು ದವಲತ್ತು ಕೊಟ್ಟು ಬಹಳ ಮೇರುವಣಿಯುಂ ಮಾಡಿ, ಈ ಪ್ರಕಾರದಲ್ಲಿ ಟ್ಟುಕೊಂಡಿರ್ದ ತನ್ನ ಪ್ರಾಣೋತ್ಕ್ರಮಣಕಾಲದಲ್ಲಿ ಆ ಜಾನಂತರಾಯನಂ ಕರೆಸಿಕೊಂಡು ತಾನಿಟ್ಟುಕೊಂಡಿರ್ದ ನವರಸನಾರಿಯೆಂಬ ವೇಶ್ಯೆಯ ಪುತ್ರಂಗೆ ಸಂಸ್ಥಾನದ ಪಟ್ಟಾಧಿಕಾರವಂ ರಚಿಸಿ ನಡೆಸುವಂತೆ ಆ ಜಾನಂತರಾಯನಿಂ ನಂಬುಗೆಯಂ ತೆಗೆದುಕೊಂಡು ಪ್ರಾಣವಂ ಬಿಟ್ಟಂ. ಆಮೇಲೆ ಆ ಜಾನಂತರಾಯಂ ಮುನ್ನಮೇ ಸ್ಥಳ ಚ್ಯುತನಾಗಿ ಬಿಟ್ಟು ಪೋಗಿರ್ದ ಬಡೆಸಾಹೇಬತಿಯ ಮಗಂಗೆ ಬರೆಸಿ ಕಳುಪಿ ನಿನಗೆ ಪಟ್ಟವಂ ಕಟ್ಟಿ ದೊರೆತನವಂ ನಡೆಸಿ ಅಲ್ಲಿಯೋದುಲಶಾಹಗಂ ನಿನಗಂ ಭೇಟಿಯಂ ಮಾಡಿಸಿ ಮನಸ್ಸಂಕೋಚವಂ ಪರಿಹರಿಸಿ ಅನ್ಯೋನ್ಯವಾಗಿ ನಡೆವಂತು ಮಾಡಿ ಪಾತುಶಾಹಿಕೆಯಂ ನಿನಗೆ ನಡೆವಂತು ಮಾಳ್ಪೆಂ, ಕ್ಷಿಪ್ರದೊಳ್ ತೆರಳಿ ಬರ್ಪುದೆಂದು ಲಿಖಿತವಂ ಬರೆಸಿ ಕಳುಹಿ ಅವನಂ ಪಟ್ಟಣದ ಸಮೀಪಕ್ಕೆ ಬರಿಸಿಕೊಂಡು ಅವನ ಸಮೀಪದಲ್ಲಿರ್ಪ ವಜೀರ ಉಮರಾವ ಕಾರಕೂನರ್ಗೆ ಹೇರಳ ಲಂಚವಂ ಕೊಟ್ಟು ಒಳಗುಮಾಡಿಕೊಂಡು ಈ ಅಲ್ಲಿಯೋದುಲಶಾಹನಂ ಕರೆದು ಭೇಟಿಯ ಮುಖದಲ್ಲಿ ಆಲಿಂಗನಕಾಲದಲ್ಲಿ ನಿಂ ಪವರಧೆ ನಿನ್ನ

ಕ್ಕೈಯೊಳಡಂಗಿಸಿಕೊಂಡಿರ್ಪರ್ ಕಿರಿಚೂರಿಯೊಳವನಂಗುಲಿಚ್ಛೇದನಮಂ ಮಾಳ್ಪುದೆಂದು ಬೋಧಿಸಿ ಬಳಿಕ್ಕವರವರ್ಗೆ ಭೇಂಟಿಯಂ ಮಾಡಿಸಿ ತಾಂ ಮನಸ್ಸಂಕಲ್ಪಂಗೈದಂತು ಭೇಟಿಯ ಮುಖದೊಳವನಂಗುಲಿಚ್ಛೇದನಮಂ ಮಾಡಿಸಿ ಅವನ ಸಮೀಪಸ್ಥರಾದ ವಜೀರ ಉಮರಾವು ಕಾರಕೂನರಂ ಸ್ವಾಧೀನಕೆಳದು ಅಲ್ಲಿಯೇದುಲಶಾಹಂಗೆ ಪಟ್ಟಮಂ ಕಟ್ಟಿಸಿದಂ. ಮುರಾರಿಜಗದೇವಪಂತಂ ಬಡೆಸಾಹೇಬತಿಯೊಡನೆ ಸಿಷ್ಠುರೋಕ್ತಿಯಂ ನುಡಿದು ತನ್ಮೂಲವಾದಾಜ್ಞೆಗೊಳಗಾಗಿ ಮೃತಿವೆತ್ತಂ. ಆಮೇಲೆ ಜಾನಂತರಾಯಂ ಪಿತುವೆಯುಮೇಲೆ ಖವಾಸಖಾನನಂ ಕೊಲಿಸಿ ತಾನೇ ಮುಖ್ಯನಾಗಿ ಪಾತುಶಾಹಿಯ ಬದುಕುಗಳಂ ನಡೆಸಿದಂ. ಆಮೇಲೆ ಈ ಅಲ್ಲಿಯೇದುಲಶಾಹನ ಮಗ ಸುಲುತಾನಶೀಖೀಂದ್ರಂಗೆ ಪಟ್ಟಮಾಯ್ತು. ಈ ಸುಲುತಾನಶೀಖೀಂದ್ರನ ಕಾಲದಲ್ಲಿ ಕಿರಿಯ ಖವಾಸಖಾನನ ಪ್ರಾಬಲ್ಯಂ; ಈ ವಿಜಾಪುರದ ಪಾತುಶಾಹಂಗೆ ಹಸುರು ನಿಶಾನಿ ಬಿರುದು; ಇದು ಬಿಜಾಪುರವನಾಳ್ದ ಪಾತುಶಾಹರ ವಿವರಣಂ ॥

ಇನ್ನು ಗೋಲುಕೊಂಡೆಯುಮೆಂಬ ಭಾಗ್ಯನಗರಿಯ (ಪ್ರತಿನಾಮಭಾಗಾನಗರವ) ನಾಳ್ದ ಪಾತುಶಾಹರ ವಿವರಣಮಂ ಪೇಳ್ವೆನದೆಂತೆಂದೊಡೆ:—ಆದಿಯಲ್ಲಿ ಚಾಂಟೀನಮಲ್ಲೀಕನ ಮಕ್ಕಳ್ ಖೋದಾಖಂಡ ಮಲ್ಲೀಕಪಿಭ್ರಾಮ; ಈತಂ ಕಾಮಿಸಿದ ಬ್ರಾಹ್ಮಣಸ್ತ್ರೀಯ ಪೆಸರ್ ಭಾಗೀರಥಿ; ಆಕೆ ತನ್ನ ಪೆಸರಿನಲ್ಲಿ ನಗರಮಂ ವಿಸ್ತಾರಂಗೈಸಲದೆ ಭಾಗಾನಗರಮೆಂದು ಪೆಸರಾಯ್ತು. ಮಲ್ಲೀಕಪಿಭ್ರಾಮನ ಮಗಂ ಮುದಖುಲ್ಲಿ; ಮತ್ತವನ ಮಗಂ ಮಹಮ್ಮುದ್ದಖುಲ್ಲಿ; ಅವನ ಮಗಂ ಸುಲ್ತಾನಅಬ್ದುಲ್; ಆತನ ಅಳಿಯಂ ಸುಲ್ತಾನ ಅಬ್ದುಲ್ ಹಸನ್ ಪಾತುಶಾಹಂ; ಅವನ ಮಗಂ ಲತೆಬ; ಅವನ ಮಗಂ ಪಿರಿಯ ಕುತುಬಶಾಹಂ; ಅವನ ಮಗಂ ಮರಿ ಕುತುಬಶಾಹಂ; ಅವನ ತರುವಾಯಂ ಖೋದಾಖಂಡನ ಮಗಳ ಮಗಂ ತಾನಾಶಾಹಂ; ಈ ಭಾಗಾನಗರದ ಪಾತುಶಾಹರ್ಗೆ ಪಳದಿಯ ನಿಶಾನಿಯ ಬಿರುದು.

ದೇವಗಿರಿಯ (ಪ್ರತಿನಾಮ ದವಲತಾಬಾದಿನ) ಸಂಸ್ಥಾನಕ್ಕೆ ಸಲ್ವ ಮದಾನಗರಮೆಂಬ ಸಂಸ್ಥಾನವನಾಳ್ದ ಪಾತುಶಾಹರ ವಿವರಣಮಂ ಪೇಳ್ವೆ,

ನದೆಂತೆಂದೊಡೆ:— ಆದಿಯೊಳ್ನಿಜಾಮುಪಾತುಶಾಹಂ ; ಹಳದಿನಿಶಾನಿಯ ಬಿರುದು.

ಬಿದಿರೆ ಸಂಸ್ಥಾನಕ್ಕೆ ಬರೀದಪಾತುಶಾಹಂ ; ಕೆಂಪಿನ ನಿಶಾನಿಯ ಬಿರುದು; ಸಗಕ್ಕೆ(?) ಬಹಿರ್ವಾಸದ ನಿಶಾನಿಯ ಬಿರುದು ; ಅದಕ್ಕಧಿಪತಿ ಹಸನಗಂಗೂ ಬೊಮ್ಮಣ್ಣ ಪಾತುಶಾಹಂ ; ಇದು ನಿಶ್ಚಯಾದಿಯಾದ ತತ್ತತ್ಸಂಸ್ಥಾನಂಗಳನಾಳ್ದ ಪಾತುಶಾಹರ ವಿವರಣಂ. ಇನ್ನು ಪೂರ್ವಕಥಾಸಂದರ್ಭಕ್ಕೋಸುಗಂ ಹರಿಜಿ ಮೊದಲಾದ ಆರೆಯರ ಸಂಗತಿಯೆಂತವರೆಂತಿರ್ದರೆಂತುವೃದ್ಧಿಯಸ್ಯೆದಿದರೆಂಬ ವಿವರಣಮಂ ಪೇಳ್ವನದೆಂತೆಂದೊಡೆ ॥ ೩೯

ಸೊಗಯಿಪ ಹರಿಜಿಯುಮುಮಾ
ನಗರದಧೀಶನ ವಜೀರನೆಂದೆನಿಸಿರ್ದಂ ।
ತೆಗೆದಲ್ಲಿಂ ತತ್ತನುಜಂ
ಮುಗಮೆರಸೊರಸಿಂ ವಿಜಾಪುರದನುರೆಸಾರ್ದಂ ॥ ೪೦

ನೇತೋಜಿಶಾಜಿಗಳ್ವಿ
ಖ್ಯಾತವಿಜಾಪುರದ ಪಾತುಶಾಹನ ಪರಮ ।
ಪ್ರೀತಿಯ ವಜೀರರಾರೆಯ
ಜಾತಿಯೊಳ್ ಬಲಾಢ್ಯರೆನಿಸಿ ಸುಖದಿಂ ಬಾಳ್ದರ್ ॥ ೪೧

ಇಂತು ನೆಗಳ್ತೆವೆತ್ತ ನೇತೋಜಿಶಾಜಿಗಳ್ವಿಜಾಪುರದ ನಾಟಿಂಗೆ ಸಲ್ವ ತಮಗೆ ಸ್ಥಿರಾಮರವಾಗಣೆಯಾಗಿತ್ತ ಜಾವಲಿಮ್ಮಾರಲಿ (?) ಯೆಂಬ ಗ್ರಾಮಕಧಿಕಾರಿಗಳೆನಿಸಿ ತದ್ಗ್ರಾಮಮಂ ಬಲ್ಪುಗೈದದರೊಳಪ್ಪಾಜಿಪಂತನೆಂಬ ಸ್ವಕೀಯನಂ ನಿಲಿಸಿ ತಾಮಿರ್ವರುಂ ಪಾತುಶಾಹನನೋಲಗಿಸುತ್ತುಂ ತತ್ಸಮೀಪದೊಳ್ ಶಸ್ತ್ರೋಪಜೀವಿಗಳಾಗಿ ವರ್ತಿಸುತ್ತಿರ್ದಂದಿನ್ನಂತೊಂದುದಿನದೊಳಾನೇತೋಜಿಯ ಪುತ್ರನಾದ ಶಾಜಿ ತನ್ನ ಮಗ ಶಿವಾಜಿವೆರಸು ಪಾತುಶಾಹನನೋಲಗಿಸಲವನರಮನೆಗೈತಪ್ಪವಸರದೊಳಾಪಾತುಶಾಹನ ವಜೀರನಪ್ಪ ತುರುಷ್ಕಂ ಗೋವಧೆಯಂ ರಚಿಯಿ

ಸುತ್ತಿರಲದಂ ಶಿವಾಜಿ ಕಂಡು ತನ್ನ ತಂದೆ ಶಾಜಿಗೆ ತೋರ್ದಿಂತು ಗೋವಧೆಗೈವುದಂ ಕಂಡಿವರ್ಗಳಂ ಶಿಕ್ಷಿಸಿದಲ್ಲದೆ ತಾಂ ಸುಮ್ಮನಿರ್ಪು ದನುಚಿತಮೆನಲೀ ವಜೀರಂ ಪಾತುಶಾಹಂಗೆ ಪರಮಪ್ರೀತಿಪಾತ್ರನಾಗಿ ರ್ಪನೆಮಗಾವಜೀರನ ತೃಪ್ತಿ (?) ಬೇಡವಥವಾ ಶಿಕ್ಷಿಸಿದೆವಾದೊಡೆ ಪಾ ತುಶಾಹಂಗೆ ದೂರಾಗಿ ಜಾತ್ಯಭಿಮಾನದಿಂ ಬಲವದ್ವಿರೋಧಂ ಸಂಭವಿ ಸಲ್ತಮಗೆ ಮೂಲಚ್ಯುತಿಯಪ್ಪುದೆಂದುಸಿರಲೇನಾದೊಡಮಾಗಲಿಂತು ದು ಷ್ಕೃತ್ಯಮಂ ಮಾಳ್ಪರಂ ಶಿಕ್ಷಿಸಿದಲ್ಲದೆ ಪೋಗೆನಲ್ಲೆನೆಂದಾಗಳಾ ಶಿವಾಜಿ ವಜೀರನಂ ಕರೆದಿಂತು ದುಷ್ಕೃತ್ಯಮಂ ರಚಿಸವೇಡೆಂದು ಕೋಪಿಸಿ ಗಜರಿಸಿ ಗರ್ಜಿಸಲವನಾವಾತಂ ಲಕ್ಷ್ಯೀಕರಿಸದಿರಲವರಿರ್ವರ್ಗಂ ಕೈಗ ಲಸಿ ಯುದ್ಧಂ ಪಣ್ಣಿ ಬಳಿಕ್ಕೀವೃತ್ತಾಂತಮೆಲ್ಲಂ ಪಾತುಶಾಹಂಗೆ ಕಿವಿ ದಾಗಲಾಗಳಾ ಪಾತುಶಾಹಂ ಜಾತ್ಯಭಿಮಾನದಿಂದಾವಜೀರನಂ ಪಕ್ಷೀ ಕರಿಸಿ ಶಾಜಿಶಿವಾಜಿಗಳಂ ಕರೆಸಿ ಕನಲ್ದು ಝುಂಕಿಸಿ ಕಡೆನುಡಿಯಲ್ ಶಿವಾಜಿಯುದಂ ಮನದೊಳಿಟ್ಟು ಮಂದಿರಕ್ಕೆ ತಂದು ಬಲವದ್ವೀರರೊ ಳಂ ವಿರೋಧಂ ಬೇಡೆಂದುಪಲಬಗೆಯೊಳೊಡಂಬಡಿಸಿ ಪೇಳಲೇನಾದೊ ಡಮಾ ಶಾಜಿಯ ಮಾತಂ ಬಗೆಗೊಳದಂತಾದೊಡೇಕೋಜಿವೆರಸು ನೀನ ಪಾತುಶಾಹನನೋಲಗಿಸಿಕೊಂಡು ಸುಖಮಿರ್ಪುದೆಂದತ್ಯಂತಕೋಪಾಟೋ ಪದಿಂ ನಿಷ್ಠುರೋಕ್ತಿಗಳಂ ನುಡಿದನಂತರಂ ॥ ೪೨

ತಂದೆಯೆನಿಪ್ಪ ಶಾಜಿಯುಸಿರ್ದಂತಿರೆ ವರ್ತಿಸದಾಶಿವಾಜಿ ತಾ
ನಂದು ತೆರಳ್ದು ಶೋಭಿಸುವ ಜವುರಿಮಾವುರಿ ಯೆಂಬ ತಾಣಮಂ ।
ಪೊಂದಿ ಬಲಿಷ್ಠನಾಗಿ ಹಯಸೈನ್ಯಸಮೂಹವನ್ನೈದೆ ಕೂಡಿಸು
ತೊಂದಿ ವಿಜಾಪುರಾಧಿಪನ ನಾಡನವಂ ಪುಡಿಗೈದನಾರ್ಪಿಸಿಂ ॥ ೪೩

ಮತ್ತಮಂತುಮಲ್ಲದೆಯುಂ ॥ ೪೪

ಚಂದನ ವಾಮನ ಪುಣ್ಯಪು
ರಂದರ ಪನ್ನಾಳ ಪರಶುರಾಮ ವಸಂತಂ ।
ವಂದನ ರಿಂಗಿಣಿ ಲೋಹಿಸಿ
ಯೆಂದೆನಿಪುಗ್ಗಡದ ಗಡಗಳಂ ಸಾಧಿಸಿದಂ ॥ ೪೫

ಭೂತಳಕದ್ಭುತಮೆನಿಸಿದ
[1] ಸಾತಾರಿಯು ಪಾಳ್ಯಮೆನೆಪರಾಪರಿ ಯೆಂಬೀ |
ಖ್ಯಾತಗಡಂಗಳುಮಂ ತ
ನ್ನೇತೋಜಿಯ ಪೊಮ್ಮನದಟಿನಿಂ ವಶಗೈದಂ ‖ ೪೬

ಇಂತಿವೇ ಮೊದಲಾದ ಗಡಂಗಳುಮಂ ಕೊಂಡನೇಕರಾಜ್ಯಂಗಳನಧೀನಂಗೈದುರವಣೆಯಿಂ ಮಿಕ್ಕು ಮೀರಿ ವರ್ತಿಸುತ್ತಿರ್ಪ ತಚ್ಛಿವಾಜಿಯುದಟಂ ವಿಜಾಪುರದ ಪಾತುಶಾಹಂ ಕೇಳ್ದು ಶಾಜಿಯುಂ ಕರೆದು ಕೋಪಿಸಿ ನಿನ್ನ ಮಗನಂ ಕರೆತರಿಸಲ್ಲದೊಡವನಂ ಪಿಡಿತರಿಸಿ ನಿಗ್ರಹಿಸಿದಪೆನೆನಲಾತನೆನ್ನ ಮಾತಿನೊಳಿಲ್ಲಮವನೆನಗಂ ಗಸೀಬನಾಗಿ ನಡೆಯುತಿರ್ಪನೆನಲಾ ಮಾತಂ ಪಾತುಶಾಹಂ ಕೇಳ್ದಾತನಂ ಪಿತೃತಪ್ಪಿದನೆಂದು ಸೈನ್ಯಮಂ ಕೂಡಿಸಿ ತೆರಳ್ಚಿಸಿ ಕಳುಪಲಾಗಳ್ತನ್ನೆಡೆಗೈದಿದ [2] ಬುಲ್ದುಲ್ಲಖಾನನೆಂಬ ವಜೀರನಂ ಭೇಟಿಮಾಡಿದೊಳಗೊಳಗುಗುರಂಬಾಯುಧದಿಂ ಶಿವಾಜಿ ಘಾತಂಗೆಯ್ಯಲಾವಾರ್ತೆಯುಂ ಮಗುಳ್ದು ವಿಜಾಪುರದ ಪಾತುಶಾಹಂ ಕೇಳ್ದತ್ಯಂತಕೋಪಾಟೋಪದಿಂದೆಮಗೆ ಗಸೀಬನಾಗಿ ವರ್ತಿಸುತಿರ್ಪ ನಿನ್ನ ಮಗನಂ ಪಿತೃತಪ್ಪಿದನೆಂದು ನಿಯಾಮಿಸಿ ಪೇರಳವಾದ ಮಂದಿಕುದುರೆಗಳಂ ಕೂಡಿಸಿ ಶಾಜಿಯುಂ ಕಳುಪಲ್, ಶಿವಾಜಿ ಶಾಜಿಯುಂ ಭೇಟಿಗೊಂಡೊಡನಾಶಾಜಿಯುಂ ವಂಚಿಸಿ ಪಂಗುಳಿಯಗಡಮಂ ಸಾರ್ದುನಿಂದು ಪೇರಳವಾದ ಮಂದಿಕುದುರೆಗಳಂ ನೆರಹಿ ಮತ್ತಂ ಕೆಲವು ರಾಜ್ಯಗಡಂಗಳಂ ಕೊಂಡತ್ಯಂತಪ್ರಬಲನಾಗಿ ವರ್ತಿಸುತ್ತಿರಲ್ ಮಗನಂ ಕೈವಶಂಗೈವೊಡಸಾಧ್ಯವಾದ ಕಾರಣದಿಂದಾಶಾಜಿ ಲಜ್ಜಿತನಾಗಿ ಪಿಂದೆಗೆದು ಮಗುಳ್ದು ವಿಜಾಪುರಕ್ಕೆ ಪೋಪ ದಾರಿಗಾಣದೆ ಮಗ ಏಕೋಜಿಸಮೇತನಾಗಿ ಪ್ಯದೆಗೆದು ನಡೆದು ತಮಗೊಂದುಸ್ಥಳಮಾಗೆ ನಿಲ್ವೊಡೆಡೆಗಾಣದೆ ಮಧುರೆಯವರೊಳಗಣ ಚಂಪೀಗಡ ಚಂದಾವರದ ಕೋಂಟೆಗಳಂ ತೆಗೆದುಕೊಂಡಾಸ್ಥಳದೊಳ್ ತನ್ನ ಕಿರಿಯಮಗನಾದೇಕೋಜಿ ಸಮೇತನಾಗಿ

---

1 ಸಾತಾರಿಯುಂ ಲೋಕಗಡಪ್ರತಿನಾಮ ಪಾಳ್ಯಯಸವರಾದಿಯೆಂಬೀ

2 ರದಬುಲ್ಲಖಾನನೆಂಬ

ನಿಂತು ಕೆಲದಿನಮಲ್ಲಿರ್ದು ಮಗನನಲ್ಲಿಯೆ ನಿಲ್ಲಿಸಿ ತಾಂ ಮಗುಳ್ದು ವಿಜಾಪುರಕ್ಕೈಯ್ದುತಿರಲ್ ಮಧ್ಯಮಾರ್ಗದೊಳ್ ರೋಗಪೀಡಿತನಾಗಿ ಶೀರೆದಪ್ರಾಂತದೊಳ್ ಶಿವಸಾಯುಜ್ಯಮುಂ ಪಡೆಯುತಿತ್ತಂ ತತ್ಪುತ್ರನಾದ ಶಿವಾಜಿಯುತ್ತಂ ಬಹು ರಾಜ್ಯರಾಷ್ಟ್ರಗಡನಿಕ್ಷೇಪಂಗಳಂ ಸಾಧ್ಯಂಗೈದು ದಿನದಿನದೊಳತ್ಯಂತ ಪ್ರಬಲನಾಗಿ ವರ್ತಿಸುತ್ತುಂ ॥ ೪೭

ಡಿಳ್ಳಿಯವರಂಗಜೇಬನ
ಪಳ್ಳಿಯುಗೋಕುಲವ ತಿರುಹಿ ರಾಷ್ಟ್ರಂಗಳೊಳಂ ।
ಬುಳ್ಳ ಗಡಂಗಳ ನೀಳ್ದ
ಳ್ಕೊಳ್ಳಿಯ ರಾಜ್ಯಗಳನಿಂದವಂ ವಶಗೈದಂ ॥ ೪೮

ಬಳಿಕವನ ರಾಜ್ಯಗಳೊಳುಪ
ಟಳಮುಂ ರಚಿಸಲ್ಕೆ ತನ್ನ ಮಾವನೆನಿಪ್ಪ ।
ಗ್ಗಳನಹ ಶಾಸ್ತಾಖಾನನ
ನಳವಿಂ ಬೀಳ್ಕೊಡೆ ಶಿವಾಜಿಯುಂ ತಪುದೆನುತುಂ ॥ ೪೯

ಕಡುಗಲಿ ಶಾಸ್ತಾಖಾನಂ
ಪಡೆವೆರಸು ತೆರಳ್ದು ಶೀಘ್ರದಿಂ ಪನ್ನಾಳೀ ।
ಗಡಮಂ ಮುತ್ತಲ್ಕೊರ್ವನೆ
ನಡೆತಂದು ಶಿವಾಜಿಯವನಗೋಂಟಂ ಪೊಗುತುಂ ॥ ೫೦

ಛುರಿಕದೆ ಶಾಸ್ತಾಖಾನನ
ಬೆರಲಂ ಕತ್ತರಿಸಿ ನಿಶಿಯೊಳಂ ಪೋಗಲವಂ ।
* ಪರಮಭೀತಿಯೊಳ್ ತೆಗೆದತಿ
ಭರದಿಂ ಪಡೆವೆರಸು ಡಿಳ್ಳಿಯಂ ಸೆರೆಪೊಕ್ಕಂ ॥ ೫೧

ಅವರಂಗಜೇಬನಂ ಕಂ
ಪವನಾತ್ಮಾಂಗುಲಿಯನೈದೆ ತೋರಲ್ಭಿತಿಯಿಂ ।

ಯುವನಾಧೀಶಂ ಕಳ್ಪದ
ಜವನೆನೆ ಗರ್ಜಿಸಿ ವಜೀರರಂ ನೋಡುತ್ತುಂ ॥ ೫೨

ಕರೆದು ಜಯಸಿಂಗನಂ ನೀಂ
ತ್ವರಿತದೊಳಂ ತೆರಳ್ದು ತಚ್ಛಿವಾಜಿಯುಮಂ ಕೈ ।
ಸೆರೆವಿಡಿದು ತಪ್ಪದೆನುತಂ
ದುರೆ ನೇಮಿಸಿ ಪೋಪುದೆಂದವಂ ಬೀಳ್ಕೊಟ್ಟಂ ॥ ೫೩

ಇಂತೆಂದು ನಿಯಾಮಿಸಿ ಬೀಳ್ಕೊಡಲ್ ಭೂರಿಸೈನ್ಯಂವೆರಸು
ಜಯಸಿಂಗಂ ತೆರಳ್ದೈತಂದು ಪನ್ಹಾಳಿಯುಗಡಮಂ ವೇಢೈಸಲ್, ಶಿವಾಜಿ
ಯೆಯ್ತಂದು ಭೇಟಿಯಂ ಕೊಳಲಾಗಳಾ ಜಯಸಿಂಗಂ ಶಿವಾಜಿಯ
ಹಸ್ತಮಂ ಪಿಡಿಯಲಾಗಳಾ ಶಿವಾಜಿ ನಸುನಗುತ್ತೆನ್ನ ಹಸ್ತಮಂ ಪಿಡಿವ
ಬಲ್ಪುಳ್ಳೊಡೆ ಪಿಡಿವುದಲ್ಲದಿರ್ದೊಡೆ ಮಾಣ್ಬುದೆನಲಾಮಾತಂ ಜಯಸಿಂಗಂ
ಕೇಳ್ದು ಕೈವಿಡಿದ ಬಳಿಕ್ಕಂ ಬಿಡುವೆನಲ್ಲಮೆನಲಂತಾದೊಡೊಳ್ಳಿತೆಂದೊ
ಡಂಬಟ್ಟು ಶಿವಾಜಿ ನಿಜಪುತ್ರ ಸಂಭಾಜಿವೆರಸು ತಾನಲ್ಪಸೈನ್ಯಸಮೇತ
ನಾಗಿ ತೆರಳ್ದು ಡಿಳ್ಳಿಯಂ ಪೊಕ್ಕವರಂಗಜೇಬನ ಭೇಟಿಯಂ ಕೊಳ
ಲ್ಕನ್ನಿಸಿ ಯುಚಿತಮಾದುಡುಗೊರೆ ವೀಳ್ಯಂಗಳನಿತ್ತಾದರಿಸಿ ಬಿಡಾರಕ್ಕೆ
ತೆರಳಿಯಲುಪೆ ಮೊದಲಾದ ಸಮಸ್ತವಸ್ತೂತ್ಕರಮಂ ಕಳುಪಿ ಕಬ್ಜಿ
ಪ್ರತಿನಾಮವನುಳ್ಳ ಕವಿ ಕಳಸಂಗೆ ನಿಯಾಮಿಸಿ ಚೌಕಿಯನಿಕ್ಕಿಸಲದ
ರೊಳಾ ಶಿವಾಜಿ ಸಂಭಾಜಿವೆರಸು ಕೆಲವುದಿನಮಿರುತ್ತುಂ ಕ್ರಮದಿಂ
ನಾನಾಪ್ರಕಾರದಿಂದಾಕವಿಕಳಸನನೊಳಗುಮಾಡಿಕೊಂಡು ನಿನ್ನ ಸಂಸ್ಥಾ
ನದೊಳಿರ್ಪ ವಜೀರಉಮರಾವುಗಳ್ಗೆ ತಣಾವುಡುಗೊರೆಗಳಂ ಮಾಡಿಸ
ಲ್ವೇಳ್ಕೆಂದು ಪಾತುಶಾಹನಿಂದಪ್ಪಣೆವೆತ್ತು ಸ್ಥೂಲಸೂಕ್ಷ್ಮಂಗಳಾದ
ಪೇಟಿಕೆಗಳಂ ಸಂಗ್ರಹಿಸಿಯವರೊಳ್ ತಂಡುಲಾಢಕ ಮಾಷ ಮುದ್ಗ
ಗೋಧೂಮಾದಿ ಸಕಲಧಾನ್ಯ ನಾನಾಫಲ ಪದಾರ್ಥ [1] ಪರಿಮಳದ್ರವ್ಯ
ತಾಂಬೂಲ ವಿಚಿತ್ರವಸನಾದಿ ವಸ್ತೂತ್ಕರಂಗಳಂ ತುಂಬಿಸಿ ಚಾರರಿಂದಾ
ಪೇಟಿಕೆಗಳನೊಂದೊಂದುದಿನದೊಳೋರೊರ್ವ ವಜೀರರ ಮನೆಗೆ ಕಳು

1 ಪದಾರ್ಥಭರಮೇಲೆಪರಿಮಳ.

ಪುತ್ರೀಪ್ರಕಾರಮಾದ ನಡತೆಯಿಂ ನಚ್ಚು ಹಾಕಿ ಬಳಿಕೊಂದುದಿನದೊಳ್ತಾಂ ಮಲಂಗುವ ಪಾಸಿನೊಳ್ ನೀಳಮಾದೊಂದು ಲೋಡಂ ಮಲಂಗಿಸಿ ತಲೆಗಿಂಬನಿಕ್ಕಿ ತಾಂ ಪೊದೆದ ವಸ್ತ್ರವನಾಲೋಡಿಂಗೆ ಪೊದೆಯಿಸಿ ನೋಳ್ಪರ್ಗೆ ತಾನೆಂದಿನಂತೆ ಮಲಂಗಿರ್ಪನೆಂಬ ಭಾವಮಂ ಪುಟ್ಟಿಸಿ ಬಳಿಕ್ಕಾ ಶಿವಾಜಿ ತನ್ನ ಮಗನನೊಂದು ಪೆಟ್ಟಿಗೆಯೊಳ್ ಪುಗಿಸಿ ತಾನೊಂದುಪೆಟ್ಟಿಗೆಯೊಳ್ ಪೊಕ್ಕು ಪೂರ್ವದೊಳ್ ಭೇಟಿಕಾಲದೊಳ್ ಕೈವಿಡಿದ ನಂಬುಗೆಯುಂ ಮನದೆಗೊಂಡು ಜಯಸಿಂಗನಾಲಯಮಂ ಸಾರ್ದು ಮತ್ತಮಲ್ಲಿ ಫಕೀರವೇಷಮಂ ತಾಳ್ದು ಪೊರಮಟ್ಟು ಮಗನಂಬಾಜಿಯುಂ ಕರೆದು ವೇಷಾಂತರದಿಂ ಸಿಂ ಪನ್ಹಾಳಗೈಪಿ ಸೀನಾಪ್ರದರೊಳ್ ಮೆಚ್ಚರಿನೊಳ್ವರ್ತಿಪುದೆಂದೊರೆದು ಬೀಳ್ಕೊಟ್ಟು ತಾಂ ಪರದೇಶಿ ಫಕೀರ ಜೋಗಿ ಜಂಗಮ ಮುಂತಾದ ಬಗೆಬಗೆಯ ವೇಷಂಗಳಂ ತಾಳ್ದೈದುತ್ತುಂ ॥ ೫೪

ವರಕಾಶೀಕ್ಷೇತ್ರವನಾ
ಗರುವಂ ತಾಂ ಪೊರ್ದಿ ಮಿಂದು ವಾರಾಣಸಿಯೊಳ್ ।
* ಪರಮಭಕ್ತಿಯೊಳ್ ವಿಶ್ವೇ
ಶ್ವರನಡಿಯಂ ಭಜಿಸಿ ಕೂಡೆ ಗಯೆಯಂ ಸಾರ್ದಂ ॥ ೫೫

ಮಿರುಪಾಕ್ಷೇತ್ರದೊಳಂ ಮಿಗೆ
ವಿರಚಿಪ ಕೃತ್ಯಗಳನ್ವೈದೆ ತೀರ್ಚಿ ಬಳಿಕ್ಕಂ ।
ತೆರಳ್ದಲ್ಲಿಂದೆ ತದಾರೆಯ
ರೆರೆಯುಂ ತಾಂ ಗೋಲುಕೊಂಡೆಯವೆನುರೆ ಸಾರ್ದಂ ॥ ೫೬

ಅಕ್ಕಣಮಾಪಣರುಗಳಂ
ಚಕ್ಕನೆ ತತ್ಪಾತುಶಾಹಗರುಹಿಸಿ ಬರವಂ ।
ಮಿಕ್ಕು ರಾಜಾಲಯಮಂ
ಪೊಕ್ಕಾಯವನಪನ ಭೇಟಿಯುಂ [1] ನೆರೆಕೊಂಡಂ ॥ ೫೭

ಇಂತು ಭಾಗಾನಗರದೊಳ್ ತಾನಾಶಾಹನ ಭೇಟಿಯಂ ಕೊಂಡನೇಕ ಬಹುಮಾನಮಂ ಪಡೆದು ತೆರಳ್ದನಂತರಂ ಪನ್ಹಾಳಿಯಂ ಸಾರ್ದು

1 ಜೇಂಟಿಯಂ.

ಮುನ್ನಿಗಿಂದತ್ಯಧಿಕ ಪ್ರಬಲನಾಗಿ ವರ್ತಿಸುತ್ತುಮಿರಲ್ ಡಿಳ್ಳಿಯೊ
ಳತ್ತಂ ॥ ೫೮

ಮಿಗೆ ನೇತೋಜಿಯು ಪೌತ್ರನಂ ಬಿಡದೆ ಕಾಯ್ದುಚೌಕಿಯೊಳ್ಕಾಣದು
ಬ್ಬಗದಿಂ [ದಂ] ದವರಂಗಜೇಬಗರುಪಲ್ ಕೇಳ್ದವೊಮ್ಮಳಂತಾರೆಯುಂ ।
ಡಗೆಗೆಯ್ದಾವೆಡೆಗೆಯ್ದಿದಂ ಬೆದಕಿ ಶೀಘ್ರಂ ತಪ್ಪಿದೆಂದಾದುರ್ಗ ಕೆ
ಮ್ಮಗರಾಣ್ಮಂ ಬಿಡದಟ್ಟಿದಂ ಪ್ರಬಲಸೇನಾಭಾರರಂ ಚಾರರಂ ॥ ೫೯

ತೆರಳ್ದವರ್ಗಳ್ನಾಲ್ಗಡೆಗಳೊ
ಳರಸುತ್ತಿರೆ ತಚ್ಛಿವಾಜಿ ಗಯೆಯಿಂ ಪೊರಮ ।
ಟ್ಟಿರೆ ಪನ್ಹಾಳಯುನ್ನೈದಿದ
ಪರಿಯಂ ಕೇಳ್ದು ತುರುಷ್ಕಪತಿಯತಿಶಿತತಿಯಿಂ ॥ ೬೦

ಕಡುಗಲಿ ಶಾಜಿಯ ಸುತನಂ
ಪಿಡಿದವಗಂ ಕಾಯ್ದುಸಿಕ್ಕಿ ಕಳುಪುವುದಿರದೆ ।
ನ್ನಡೆಗೀಗೆಂದು ವಿಜಾಪುರ
ದೊಡೆಯಂಗಾಮ್ಲೇಚ್ಛಪಂ ನಿರೂಪಿಸಿ ಕಳುಪಲ್ ॥ ೬೧

ಬರೆಯಲ್ಪಟ್ಟಾಯೋಕ್ತಿಯ
ನುರೆ ಕೇಳ್ದವರಂಗಜೇಬನಾಗಳ್ ಫೌಜಂ ।
ನೆರಹಿ ವಜೀರರ್ಕಳುಮಂ
ಬರಿಯಿಸಿ ಕೋಪದೊಳ್ ತನ್ನೊಳಂದಿಂತೆಂದಂ ॥ ೬೨

ವಿಜಾಪುರದ ಪಾತುಷಾಹ ವಿಭ್ರಾಮೆಅಲ್ಲಿಯೇದುಲಶಾಹನ ಕುಮಾರನಾದ ಸುಲುತಾನಮಹಮೂದ ಶಾಹಂಗೆ ಗೋಲುಕೊಂಡೆಯದ ಕುತುಬಶಾಹನ ಪುತ್ರಿಯಾದ ಬಡೆಸಾಹೇಬತಿಯುಂ ತಂದುದರಿಂ ವಿಜಾಪುರಭಾಗಾನಗರಗಳ್ ಪಾತುಶಾಹರ್ಬೇಗಮನೆತನದವರಾಗಿ ವರ್ತಿಸುತಿರ್ಪರಿವರ್ಗಳನುಸಂಧಾನವುಳ್ಳದರಿಂದಾ ಶಿವಾಜಿ ಬಲಿಷ್ಠನಾಗಿ ತನ್ನಂ ಲಕ್ಷ್ಯೀಕರಿಸದೆ ನಡೆಯುತಿರ್ಪ ಸೀಯುಭಯಸಂಸ್ಥಾನಂಗಳಂ ಮುರಿದಲ್ಲದೆ ಈ ಶಿವಾಜಿ ತನಗೆ ಸ್ವಾಧೀನವಾಗನೆಂದಾಳೋಚಿಸಿ ತೆಂಕಮುಖಕ್ಕೈದಲಾಗದೆಂದು

ಸಿರ್ದ ಮಹಾವಶಾಸ್ತಖಾನನುಕ್ತಿಯಂ ಬಗೆಗೊಳ್ಳದವರಂಗಜೇಬಪಾತು ಶಾಹಂ ಡಿಳ್ಳಿಯಿಂ ತೆರಳ್ದವರಂಗಾಬಾದಿನೊಳ್ನಿಂದು ಹೇರಳ ಚತುರಂಗ ಸೈನ್ಯಮಂ ನೆರಹಿ ಬಳಿಕ್ಕವಲ್ಲಿಂ ತೆರಳ್ದು ವಿಜಾಪುರದ ಕೋಂಟೆಗೆ ಮುತ್ತಿಗೆಯಿಕ್ಕಿಸಿ ಪಥ ಪ್ರೈಕ ಕಂಡಿ ಕಣಿವೆಗಳಂ ಕಟ್ಟಿಸಿ ನಡೆಗೋಂಟೆ ತಳ ಸುರಂಗಗಳಂ ನಡೆಸುತ್ತಿಂತನೇಕಪ್ರಯತ್ನಗಳಿಂ ಬಹುಕಾಲಂ ಪೋದರ್ತ್ಯಂತಸಾಹಸಂಗೈದೊಡಂ ಭಾಗಾನಗರದ ಸಂಸ್ಥಾನದಖಂಡಾಧಿ ಕಾರವಮಂ ವಹಿಸಿ ನಡೆಸುತಿರ್ದಕ್ಕಣ್ಣ ಮಾದಣ್ಣರೆಂಬ ಪ್ರಸಿದ್ಧನಿಯೋಗಿ ಗಳ್ ನಡೆಸುತಿರ್ದ ಸಹಾಯಮೂಲದಿಂದೇನಾದೊಡಮಾಪರಿಸ್ತರಣಂ ಕ್ಷಿಪ್ರಸಾಧ್ಯವಾಗದಿರ್ಪುದಂ ಕಂಡು ಚಲದಿಂ ಕಸ್ತುಗೆಯ್ದು ನಿಂದೀರ ಯ್ದು ವರ್ಷಂಬರಂ ನೆಲದಂಡಿಳದು ಜೇರುಮುತ್ತಿಗೆಯನಿಕ್ಕಿ ಬಹುವಿಧ ಪ್ರಯತ್ನಂಬಡುತ್ತಿರಲಿತ್ತಂ ಭಾಗಾನಗರದೊಳ್ ಸರ್ವಾಧಿಕಾರವಮಂ ನಡೆ ಸುತಿರ್ದಕ್ಕಣ್ಣಮಾದಣ್ಣರೆಂಬ ನಿಯೋಗಿಗಳ್ ಕುಹಕಿಗಳ್ ಭಿನ್ನ ತಂತ್ರಮಂ ರಚಿಸಿ ನಡೆಸಿದ ಲೇಖನಮೂಲದಿಂ ಸಿದ್ದಿಜಾತಿಯವರಿಂ ಘಾತ ಮುಖದಿಂದಳಿದರೆಂಬ ವರ್ತಮಾನವನವರಂಗಜೇಬಂ ಕೇಳ್ದನ್ನು ವಿಜಾ ಪುರಭಾಗಾನಗರಗಳಂಬುಭಯಸಂಸ್ಥಾನಂಗಳುಮೆನಗೆ ಸಾಧ್ಯಮಾದು ವೆಂದು ಪ್ರಮುದಿತಮಾನಸನಾಗಿ ಬಳಿಕಿತ್ತಂ ಕೆಲವುದಿವಸಂಗಳ್ಪೋಗ ಲೊಡನೆ ಶಾಲಿವಾಹನಶಕ ವರ್ಷ ನೆಯ ಕ್ಷಯಸಂವತ್ಸರದೊಳಾ ವಿಜಾಪುರದ ಕೋಂಟೆಯಂ ತೆಗೆದುಕೊಂಡು ಜಕೀರಿ ರಸ್ತು ಮುಸ್ತೈದೆ ಗಳಲ್ಲದಿದೊರ್ಡಂ ಬಹುಕಾಲಂ ಕೋಂಟೆಯಂ ಕಲಿಯೇರಿಸಿ ಕಾಡಿಸಿದ ನೊಂದು ಮೆಚ್ಚಿ ಸುಲಿತಾನಶಿಖೀಂದ್ರನಂ ಪಿಡಿದು ಮುನ್ನಿಸಿ ಬಳಿಕ್ಕಲ್ಲಿಂ ತೆರಳ್ದು ಭಾಗಾನಗರದ ಕೋಂಟೆಯಂ ವೇಷ್ಟೈಸಿ ಷಣ್ಮಾಸಂಬರಂ ನೆಲ ದಂಡಿಳದು ಜೇರುಮುತ್ತಿಗೆಯನಿಕ್ಕಿ ಬಳಿಕ್ಕಾಕೋಂಟೆಯುಂ ತೆಗೆದು ಕೊಂಡು ಜಕೀರಿ ರಸ್ತು ಮುಸ್ತೈದೆಗಳ್ ಸಂಪೂರ್ಣಮಾಗಿರ್ದುಂ ಕೋಂಟೆಯನಿತ್ತನೆಂದಾ ಭಾಗಾನಗರದ ತಾನಾಶಾಹನಂ ತಿರಸ್ಕರಿಸಿ ತೇಜೋಭಂಗವಮಂ ಮಾಡಿ ಚಲಪದದಿಂದಿಂತು ವಿಜಾಪುರಭಾಗಾನಗರಂಗ ಳಂಬುಭಯಸಂಸ್ಥಾನಂಗಳಂ ಸ್ವಾಧೀನಂಗೈದನಂತರಮವರಂಗಜೇಬ ಪಾತುಶಾಹಂ ಮುಂದಣ ರಾಜಕಾರ್ಯವನಾಳೋಚಿಸಿ ಶಿವಾಜಿಯಂ ಕೈವ

ಶಂಗೆಯುಲ್ವೇಳ್ಕೆಂದಾಟೋಪದಿಂದಲ್ಲಿಂ ತೆರಳ್ದೈತಂದು ಕೃಷ್ಣವೇಣೀ ನದೀತೀರದೊಳ್ ವಿರಾಜಿಸುತ್ತಿರ್ಪ ಗಲಗಲೆಯೆಂಬ ಸ್ಥಾನದೊಳ್ನಿಂದಿರಲಲ್ಲಿ ಮರುಕಿಯುಪದ್ರವದಿಂ ಬಹುಸೈನ್ಯಂ ಲಯಮಾಗಲಾಸ್ಥಾನದೊಳ್ನಿಂದು ಸಿತ್ತರಿಸಲಮ್ಮದೆ ಅಲ್ಲಿಂ ತೆರಳ್ದು ಭೀಮರಥೀನದೀತೀರದೊಳ್ಮೆರೆವ ಮಾತುಳಂಗಕ್ಷೇತ್ರ (ಪ್ರತಿನಾಮಬ್ರಹ್ಮಪುರಿ) ಯೆಂಬ ಸ್ಥಳದೊಳ್ನಿಂದಿರುತ್ತುಮಿರಲಾಪ್ರಸ್ತಾವದೊಳ್ ॥ ೬೩

ಅಲೆದು ನಿಜಸೈನ್ಯಮಂ ತಾಂ
ಮುಳುಗಿಸುತೈತಪ್ಪ ಭೀಮರಥಿಯುರವಣೆಯುಂ ।
* ನಿಲಿಸಿ ಬಾಧಿಸುವ ಮರುಗಿಯ
ಕಲೆಯುಂ ಕರಮಿಾಳ್ದು ವ್ಯೆಮೆಯುಂ ನೆರೆಮರೆದಂ ॥ ೬೪

ಶಾಜಿಯ ಸುತನೆಂದೆನಿಪ ಶಿ
ವಾಜಿಯ ವರಪುತ್ರನೆನಿಸಿ ರಾರಾಜಿಸುತಿಪ ನಂ ।
ಭಾಜಿಯುಮಂ ಶಿಕ್ಷಿಸಿ ಸಿ
ವ್ಯಾಜದೆ ತತ್ತನುಜಶಾಹುವಂ ರಕ್ಷಿಸಿದಂ ॥ ೬೫

ಅದೆಂತೆಂದೊಡಿಂತವರಂಗಜೇಬಪಾತುಶಾಹಂ ಬ್ರಹ್ಮಪುರಿಯೊಳ್ವರ್ತಿಸುತಿರ್ಪ ಶಿವಾಜಿಯ ಮೇಲಣ ರಾಜಕಾರ್ಯಮಂ ಮನದೆಗೊಂಡು ಪನ್ಹಾಳಿಮುಖಕ್ಕೈದವೇಳ್ಕೆಂಬ ಮಂತ್ರಾಳೋಚನೆಯಂ ಸಿಶಯುಂಗೈದು.......ತ್ತಿರಲಿಸಿತರೊಳತ್ತಂ ಪನ್ಹಾಳಿಯೊಳ್ ಶಿವಾಜಿ ಶಿವಸಾಯುಜ್ಯಮನ್ನೈದಲೊಡನೆ ಮೂರ್ಧಾಭಿಷಿಕ್ತನಾಗಿ ಸುಖಸಂಕಥಾವಿನೋದಗೋಷ್ಠಿಗಳಿಂ ರಾಜ್ಯಂಗೆಯ್ಯುತ್ತಿರ್ಪ ತಚ್ಛಿವಾಜಿಯ ಪಿರಿಯಮಗನಾದ ಸಂಭಾಜಿ ಪನ್ಹಾಳಿಯಂ ತೆಗೆದುಕೊಳಲವರಂಗಜೇಬಪಾತುಶಾಹನೈದುತಿರ್ಪನೆಂಬ ವರ್ತಮಾನಮಂ ಕೇಳ್ದು ತೆರಳ್ದು ॥ ೬೬

ಸಂಭಾಜಿ ತನ್ನ ಪಿತನಿಂ
ದಂ ಬಲ್ಲಿದನೆನಿಸಿ ಪಾತುಶಾಹನ ನಾಡೊ ।
ಳ್ತುಂಬಿದ ಧನಧಾನ್ಯಾಭರ
ಣಾಂಬರಪಶ್ವಾದಿಸರ್ವಮಂ ವಶಗೈದಂ ॥ ೬೭

ಅಂತಲ್ಲದಖಿಳಮುಖಗಳೊ
ಳಂತವನುಪಟಳವನೆಸಗೆ ತಾಮ್ರಮುಖಾಧೀ |
ಶಂ ತವೆಕೆರಳ್ದವನಂ ಪಿಡಿ
ದಂತಿಕಕೆಯ್ದಿಸುವುಪಾಯಮೆಂತೆನುತಿರ್ದಂ || ೬೮

ಅಂತೆಂದಾಳೋಚಿಸಿ ಬಲಶಾಲಿಯಾಗಿ ವರ್ತಿಸುತಿರ್ಪ ಸಂಬಾಜಿ ಮಾಯಾತಂತ್ರವನೊಡ್ಡಿದಲ್ಲದೆ ತನಗೆ ವಶನಾಗನೆಂದು ನಿಶ್ಚಯಿಸಿ ಬಳಿಕ್ಕೊಂದುಪಾಯಾಂತರವಂ ನೆನೆದು || ೬೯

ಬರಿಸುತ್ತಾಗಳ್ ಕಬ್ಜಿನಾಮಕದ ಕನ್ನೋಜಿದ್ವಿಜಾಧೀಶನಂ
ವರಸಂಬಾಜಿಯುನ್ನೈದೆ ಸಾರ್ದವನಸೀನೆಂತಾದೊಡಂ ವಶ್ಯಗೈ |
ವಿರದೆನ್ನಲ್ಲಿಗೆ ಬರ್ಪೊಲಾಗಿಪುದೆನುತ್ತೇಕಾಂತದೊಳ್ತ್ರಾಣದಿಂ
ತೊರೆದಿಷ್ಟಾರ್ಥವನಿತ್ತು ಬೀಳ್ಕೊಡಲವಂ ಪನ್ನಾಳಯಂ ಪೊರ್ದಿದಂ|| ೭೦

ಇಂತು ಕಬ್ಜಿ ಪ್ರತಿನಾಮಕವಿಕಳಸನೆಂಬ ಕನ್ನೋಜಿಬ್ರಾಹ್ಮಣಂ ಪನ್ನಾಳಗೈದಿ ಸರ್ವವಿದ್ಯಾಸಂಪನ್ನನಪ್ಪ ಶ್ರೋತ್ರಿಯಬ್ರಾಹ್ಮಣನೈತಂದಿರ್ಪನೆಂದು ಸವಿಾಪವರ್ತಿ ಸಾಮಾಜಿಕರಿಂ ಸಂಬಾಜಿಗರುಹಿಸಿ ಬಳಿಕ್ಕಾತನ ಭೇಟಿಯುಂ ಕೊಂಡು ದಿನದಿನದೊಳವಂಗತಿಪ್ರೀತಿಪಾತ್ರನೆನಿಸಿ ವರ್ತಿಸುತ್ತಿರ್ದು ಸಮಸ್ತಶತ್ರುಗಳುಂ ನಿನಗೆ ಪಾದಾಕ್ರಾಂತರಾಗಿ ಬಿಡದೋಲಗಿಸಂತು ಜಪಪುರಶ್ಚರಣ ಹೋಮಂಗಳಂ ಮಾಳ್ಪೆನೆಂದೊಡಂಬಡಿಸಿ ಬಳಿಕಂ ಶಲ್ಯ ಶಾಬರ ಮಂತ್ರ ತಂತ್ರ ಯಂತ್ರ ಪುರಶ್ಚರಣ ಜಪ ತಪ ತರ್ಪಣ ಹೋಮ ಮೂಲಿಕಾದಿ ನಾನಾ ಪ್ರಯೋಗಮುಖದಿಂದಾಸಂಬಾಜಿರಾಜನಂ ವಶೀಕರಿಸಿ ಭ್ರಾಂತನಂ ಮಾಡಲವಂ ಬುದ್ಧಿಶಾಲಿಗಳಪ್ಪ ಸಾಮಾಜಿಕರ ಮಾತಂ ಕೇಳದೆ ಪ್ರತಿದಿನದೊಳ್ ಕ್ಷುದ್ರಜನರ್ಕಳ ಭೇದದಿಂದೋಲಾಡುತುಂ || ೭೧

ಸ್ತ್ರೀಲೋಲನಾಗಿ ಕಬ್ಜಿಯ
ಜಾಲದೊಳಂ ಸಿಲ್ಕಿ ಜಾರನಿಚಯಕ್ಕೆಲ್ಲಂ |

ಮೂಲಗುರುವೆನಿಸಿ ತಾಂ ಜಲ
ಕೇಳಿಯನೆಸಗುತ್ತುಮಿಂತು ವರ್ತಿಸುತಿರ್ದಂ ॥ ೩೨

ಇಂತು ಸಂಬಾಜಿ ಮದನಭ್ರಾಂತಿಯೊಳಿರೆ ಕಬ್ಜಿ ಗೂಢಚಾರರ ಮುಖದಿಂದಂ ತೌರುಷ್ಕಪಗೀಹದನಂ ತಿಳುಹಿ ಬರವನ್ನೈದೆ ಪಾರುತ್ತಿರ್ದಂ ॥ ೩೩

ಅಸಿತರೊಳಿತ್ತಂ ತಾವ್ರಾ
ನನರಾಣ್ಮಂ ಬರಿಸಿ ಗೋಪ್ಯದೊಳ್ ಶೇಕುನಿಜಾ ।
ಮನನ್ನೈದೆ ಕಳುಹಿದಂ ಭೋಂ
ಕನೆ ಸೀಂ ಸಂಬಾಜಿರಾಜನಂ ತಹುದೆನುತುಂ ॥ ೩೪

ಇಂತೊರೆದು ಬೀಳ್ಕೊಡಲ್ಸವು
ನಂತರದೊಳ್ಫೌಜುವೆರಸು ಶೇಕುನಿಜಾಮುಂ ।
ನಿಂತಲ್ಲಿ ನಿಲ್ಲದುರುವಿ
ಕ್ರಾಂತಂ ಪನ್ಹಾಳಿಯುಂ ದಲಂದುರೆ ಸಾರ್ದಂ ॥ ೩೫

ಇಂತಾ ಶೇಕುನಿಜಾಮಂ[ಫೌಜು]ವೆರಸತಿಕ್ಷಿಪ್ರದೊಳ್ ಪನ್ಹಾಳಿಯುಂ ಸಾರ್ದು ತತ್ತದ್ದ್ವಾರ ಕಂಡಿ ಕಣಿವೆಗಳಂ ಕಾಯ್ದಿರ್ಪ ಭಟರ್ಗೆ ಹೇರಳಪರಿಧಾನಮನಿತ್ತು ಕಬ್ಜಿಯು ಸಂಕೇತದಿಂದೊಳಪೊಕ್ಕು ಮದನಭ್ರಾಂತಿಯಿಂ ಮೈಮರೆದೆಂದಿನಂತೆ ಸಂಗಮೇಶ್ವರನ ನದೀತೀರದೊಳ್ ಸ್ತ್ರೀಜನವೆರಸು ಜಲಕೇಳೀವಿನೋದದಿಂ ವಿಹರಿಸುತ್ತಿರ್ಪ ಸಂಬಾಜಿರಾಜನಂ ಪಿಡಿದು ಕವಿಕಳಸಂವೆರಸತ್ಯಂತಶೀಘ್ರದಿಂದೆ ತಂದವರಂಗಜೇಬ ಪಾತುಶಾಹಗೊಪ್ಪಿಸಲ್ನಿಟ್ಟಿಸಿ ತನಗೆ ಸಲಾಮಂ ಮಾಡಲೆಂದು ಸಂಬಾಜಿರಾಜಂಗೆ ಪೇಳಿಸಲವನೀಮಾತನಂಗೀಕರಿಸದಿರಲ್ ಮುಸಲ್ಮಾನನಾದೊಡೆ ಬಿಟ್ಟಪೆನಲ್ಲದೊಡಾಜ್ಞೆಗೈಸಿದಪೆನೆಂದು ಪೇಳಿಸಲ್ ಕೇಳ್ದು ತನ್ನ ಪುತ್ರಿ ಬೇಗಮುವನಿತ್ತೊಡೆ ತಾಂ ಮುಸಲ್ಮಾನನಾದಪೆನೆನಲಾ ಮಾತಂ ಕೇಳ್ದತ್ಯಂತಕೋಪಾಟೋಪದಿಂದಾ ಸಂಬಾಜಿಯುನಾಜ್ಞೆಗೈಸಿ ಕಬ್ಜಿಯು ತಿರಶ್ಛೇದನಂಗೆಯ್ಯಲಾಪಾತುಶಾಹನ ಬೇಗಮುಗೆ ಸಂಬಾಜಿಯ ಮೇಲಣ

ಪೇಕ್ಷೆಯಿದುರ್ದರಿಂ ತನಗಾತನೆ ಪತಿಯೆಂದು ಮತ್ತಾರುಮನಪೇಕ್ಷಿಸದೆ ವಿವಾಹಮಂ ತೊರೆದು ವರ್ತಿಸುತಿರ್ದು ಸಂಭಾಜಿಯು ಮಗ ಶಾಹು ರಾಜನೆ ತನಗೆ ಮಗನೆಂದಭಿಮಾನಿಸಿ ಅವರಂಗಜೇಬಂಗರುಹಿ ಆ ಶಾಹು ರಾಜನಂ ಪ್ರೋಷಣೆಗೈಸಿ ವಿವಾಹಮನೊಡರ್ಚಿಸಿ ದವಲತ್ತಂ ಕೊಟ್ಟು ಚೌಕಿಯನಿಕ್ಕಿಸಿ ಮನೆತನದ ಶಾಭಿಯಂ (?) ನಡೆಸುತ್ತಿರಲಿತ್ತಂ ॥ ೭೬

ನೆರೆ ತತ್ಸಂಭಾಜಿಯ ಸೋ
ದರನೆನಿಸುವ ರಾಮರಾಜನುರುಪಟ್ಟವನಾಂ ।
ತುರುಪನ್ನಾಳಯೊಳಾಳು
ತ್ತಿರುತಿರೆ ಶೌರ್ಯಾತಿಶಯದೊಳವನೀತಳಮಂ ॥ ೭೭

ಯುವನಪಗೀವೃತ್ತಾಂತಂ
ಕಿವಿದಾಗಲ್ ರಾಮರಾಜನಂ ಪಿಡಿತಪುದೆಂ ।
ದವನಂದಬ್ದುಲಖಾನಾ
ಏವಜೀರವ್ರಾತಮಂ ತೆರಳ್ಚಿಸಿ ಕಳುಪಲ್ ॥ ೭೮

ಕತ್ತಲಿಸೆ ಭುವನಮಿಭಪಯ
ಪತ್ತಿಚಯಂಬೆರಸು ಸರ್ವಸನ್ನಾಹದೆ ದಂ ।
ಡೆತ್ತಿಬಂದಾತುರುಷ್ಕರ
ಮೊತ್ತಂ ಮೋಹರಿಸೆ ಮುತ್ತೆ ಪನ್ನಾಳಯುಮಂ ॥ ೭೯

ಅನುಚಿತಮಿನ್ನಿಲ್ಲಿಹುದೆಂ
ದೆನುತುಂ ತದ್ರಾಮರಾಜನಲ್ಲಿಂ ತೆರಳ್ದು ।
ಯ್ಯನೆ ಸಾಗುವನಿತರೊಳ್ಬ್ಭೀಂ
ಕನೊದವಿ ಬೆಂಬತ್ತಲೊಡನೆ ತೌರುಷ್ಕಚಯಂ ॥ ೮೦

ತೆರಳ್ದಲ್ಲಿಂ ಪೊನ್ನಾಳಗೆ
ಬರೆ ರಾಜೇರಾಮನವನ ಬೆಂಗೊಂಡವರ್ಗಳ್ ।
ಬರೆ ಚನ್ನಮ್ಮಾಜಿಯುಮ
ರ್ನರೆದಾಂಟಸಲ್ವೈದಿ ಚಂದಿಯುಂ ನೆರೆಪೊಕ್ಕಂ ॥ ೮೧

ಅದೆಂತೆಂದೊಡಾಶಿವಾಜಿಯು ಪುತ್ರನೆನಿಪ್ಪ ರಾಮರಾಜಂ ಪನ್ಹಾಳಿಯಿಂ ಪಲಾಯನಂಬಡೆದೈದಿ ಪೊನ್ನಾಳಿಯಂ ಪೊಕ್ಕು ತಾನೈತಂದು ಪೊಕ್ಕ ವೃತ್ತಾಂತವೆಲ್ಲಮಂ ಚನ್ನಮ್ಮಾಜಿಯವರ್ಗರುಹಿಸಿ ಮೊಗಲರ್ಗೆ ಗೋಚರವಾಗದಂತು ನಿಮ್ಮ ಗಡಿರಾಜ್ಯದಿಂ ತನ್ನಂ ಚಂದಿಗೆ ದಾಂಟಿಸಿಕೊಡಲ್ವೇಳ್ಕುಂದು ಬಹುಪ್ರಕಾರದಿಂ ಪೇಳಿಸಲ್ ಕರುಣಾನಿಧಿಯಪ್ಪ ಚನ್ನಮ್ಮಾಜಿಯವರ್ ಕೇಳ್ದು ಸಬನೀಸು ಕೋಳಿವಾಡದ ಬೊಮ್ಮಯ್ಯ ಬೊಕ್ಕಸದ ಸಿದ್ಧಬಸವಯ್ಯ ಮುಂತಾದ ಮಂತ್ರಿಮನ್ನೆಯ ಸಾಮಾಜಿಕರೊಳ್ಮಂತ್ರಾಳೋಚನೆಯಂ ರಚಿಸಿ ಡಿಳ್ಳಿಯವರಂಗಜೇಬಪಾತುಶಾಹನೇ ಮುನಿದೈತಂದೆಮ್ಮ ಸಂಸ್ಥಾನಮಂ ತೆಗೆದುಕೊಂಡೊಡಂ ಕೊಳಲೇನಾದೊಡಂ ಮರೆವೊಕ್ಕವನಂ ಕೊಡುವುದು ರಾಜಧರ್ಮಮಲ್ತೆಂದಿಂತು ಮತವಂ ನಿಶ್ಚಯಂಗೆಯ್ದು ಬಳಿಕ್ಕಾ ರಾಮರಾಜನಂ ಪ್ರಚ್ಛನ್ನವೇಷನಂ ಮಾಡಿ ಸೀಮೊಗ್ಗೆಗಾಗಿ ಗಾಜನೂರ ಪೊಳೆಯಂ ದಾಂಟಿಸಿ ಸಳುವಮಂ ಮರೆಗೊಂಡೊಳದಾರಿಹಿಡಿದು ಬೊರೆನೆಡೆಹಳ್ಳಿ ಆಡುವಳ್ಳಿ ಕಳಸ ಖಾಂಡ್ಯ ವಸುಧಾರೆಗಾಗಿ ಸಾಗಿಸಿ ಕಳುಹಿ ಚಂದಿಯ ಗಡಮಂ ಪೊಗಿಸಲವರಂಗಜೇಬಪಾತುಶಾಹನಿಂದಾ ರಾಜೇರಾಮನಂ ಬೆಂಬತ್ತಿದ ತುರುಷ್ಕಸೈನ್ಯಮತ್ಯಂತಾಟೋಪದಿಂದಾರಾಜೇರಾಮನೈದಿದ ಬಳಿವಿಡಿದು ಪಾಳಿವರಿಯುತ್ತೈತಂದು ॥ ೮೦

ಚಳಕದೊಳಂ ಪೊನ್ನಾಳಿಯೊ
ಳಳದಾರಣಮಸ್ತಖಾನಮುಖ್ಯವಜೀರ ।
ರ್ಮುಳಿಸಿಂದೆ ಗಸೀಮಂ ನಿ
ಮ್ಮಳಪೊಕ್ಕೊಡನಿರ್ಪನವನಸೀವುದೆನುತ್ತುಂ ॥ ೮೧

ಕೇಳಿಸೆ ಚನ್ನಮ್ಮಾಜಿಯು
ಮಾಳೋಚಿಸಿ ತಮ್ಮ ರಾಷ್ಟ್ರಕಾಗಿಯುವಂ ಬಿ ।
ಚ್ಚಾಳಿಗಿ ಪೋದುದಹುದಾ
ವಾಳುತ್ತಿರ್ಪೆಳಯೊಳಿಲ್ಲವೆಂದರುಹಿಸಿದಳ್ ॥ ೮೨

[1] ಇಂತೆಂದು ತಿಳುಹಿ [2] ತಮ್ಮ ನಾಡಿನ ಮೇಲಾರಾಮರಾಜಂ ಪೋಪೆಡೆಯೊಳಾತನ ವಸ್ತ್ರಾಭರಣಂಗಳ್ ಕೆಲವೆಮ್ಮ ವಶವಾದುದುಂಟೆಂದಾವಸ್ತ್ರಾಭರಣತುರಗಾದಿತದೀಯವಸ್ತೂತ್ಕರಂಗಳನಾವಜೀರರ ವಶಕ್ಕೆ ಕೊಡಿಸಿ ಪೇಳಿಸಲ್ ತದೀಯವಸ್ತೂತ್ಕರಂಗಳಂ ಕೊಟ್ಟು ರಾಮರಾಜನಂ ಕೊಡದಡಂಗಿಸಿಕೊಂಡಿರ್ಪರೆಂದಾವಜೀರರ್ಕರ ಲೇಖನಗಳಂ[3] ಬರೆಸಿ ತಮ್ಮ ಕೈವಶಮಾದ ರುಪ್ಪಾಜಿಘೋಸಲೆ ಸಂತಾಜೀ ಜಗದಾಬಮನೋಜೀ ಮೋರಾಶರಜಾರಾವು ಯೆಂಬಿಂತೀ ನಾಲ್ವರ್ವಜೀರರುಮನಾರಾಮರಾಜನ ವಸ್ತ್ರಾಭರಣತುರಗಾದಿತದೀಯವಸ್ತೂತ್ಕರಂಗಳನೆಲ್ಲಮುಮನವರಂಗಜೇಬಪಾತುಶಾಹನೆಡೆಗೆ ಕಳುಪಲವಂ ನಿಟ್ಟಿಸಿ ಲೇಖನವನೋದಿ ಕೇಳ್ದು ಕನಲ್ದು ಕೆಳದಿಯ ಸಂಸ್ಥಾನಮಂ ಕೈವಶಂಗೆಯ್ವೆದೆಂದು ತನ್ನ ಪುತ್ರನಾದಜಮತಾರನ ಸಂಗಡಮಪರಿಮಿತಹಸ್ತ್ಯಶ್ವಪದಾತಿಯುಂ ಕೂಡಿಸಿ ತೆರಳ್ಚಲೊಡನಾ ಅಜಮತಾರನತಿಕ್ಷಿಪ್ರದಿಂ ದಾಳಿವರಿಯುತ್ತೈತಂದು ತಾಂ ಮದಗದಕೆರೆಯ ಬಂಡಿತಿಮ್ಮಾಯಿಕಣಿವೆಯೊಳ್ನಿಂದು ಜಾರ್ಸರಖಾನನಂ ದಾಳಿವರಿಸಲವಂ ಮುಂದಾಗಿ ಬಂದು ಮಹಾದೇವಪುರದ ಕೋಂಟೆಯುಮಂ ತೆಗೆದುಕೊಳಲೊಡನಜಮತಾರನಾಮಹಾದೇವಪುರದ ಕೋಂಟೆಯೊಳ್ನಿಂದು ಬಳಿಕಂ ಜಾರ್ಸರಖಾನನಂ ಮತ್ತಂ ಮುಂದೈದಿಸಲವನಾನಂದಪುರಕ್ಕಾಗಿ ಶಾಲಿವಾಹನಶಕ ವರ್ಷ ೧೬೧೦ನೆಯ ಶುಕ್ಲ ಸಂವತ್ಸರದ ವೈಶಾಖ ಬಹುಳದಲ್ಲಿ ವೇಣುಪುರಕ್ಕೆ ಬಂದಿಳಿದು ತತ್ಪರಿಸ್ತರಣಮಂ ವೇಢೈಸುವನಿತರೊಳ್ ಚನ್ನಮ್ಮಾಜಿಯುವರಲ್ಲಿಂ ತೆರಳ್ದು ಭುವನಗಿರಿಯ ಮಾರ್ಗದೊಳ್ನಿಂದು, ಹೇರಳಪದಾತಿಯುಂ ತೆರಳ್ಚ ಕಳುಹಿ ॥ ೮೫

ತೊಳಪ ಬಿದುರಾರುಕೋಂಟೆಗೆ
ತಳಿಗಳನಡಿಗಡಿಗೆ ನಡೆಪ ಮೊಗಲರ ಸೇನಾ ।

---

[1] ಇನ್ನು ಪ್ರಕೃತಕಥಾಸಂದರ್ಭಕ್ಕೊಸುಗಂ (ಬ)

[2] 'ಇಂತುಪೂರ್ವದಾರಭ್ಯ' (ಪು142, ಪ10) ಎಂಬಲ್ಲಿಂದ ಇಲ್ಲಿಯವರೆಗೆ ಇರತಕ್ಕ ಭಾಗವು ಓಲೆಯಪುಸ್ತಕದಲ್ಲಿ ಬಿಟ್ಟುಹೋಗಿದೆ.

[3] ತರಲೆಗಳಂ (ಬ)

ಜಲಧಿಯನಂಕದೊಳಂತಕ
ನಿಳಯವನುರೆ ಪುಗಿಸಿ ಮೆರೆದನತಿಸಾಹಸಮಂ ॥ ೮೬

ಕಗ್ಗೊಲೆಯುಂ ಬಿದ್ದಂಕದೊ
ಳಗ್ಗಳಿಯುರೆನಿಪ್ಪ ತತ್ತುರುಷ್ಕರ ಫೌಜಂ ।
ನುಗ್ಗುನುಸಿಮಾಡಿ ರಣದೊಳ್
ಮೆಗ್ಗಿಸಿ ಬಹುಮುಖದೆ ಪುಗಿಸಿದಳ್ ಜವಪುರಮಂ ॥ ೮೭

ನೆರೆ ಕಂಡಿ ಕಣಿವೆಪಥಗಳ
ನುರೆ ಬಂಧಿಸಿ ಬಲೆಯೊಳಂ ಸಿಲುಂಕಿದ ಮತ್ಸ್ಯೋ ।
ತ್ಕರವೆನಲಾಗಿಸಿ ತದ್ಯವ
ನರ ಸೈನ್ಯವನಾಜಿರಂಗದೊಳ್ ಬರಿಕೈದಳ್ ॥ ೮೮

ಇಂತು ಕಸ್ತುಗೆಯ್ದು ನೆಲದಂತಳಿದುರುಬಿ ತರುಬಿ ನಿಂದು ಕೈಗೆಯ್ವ ತಾಮ್ರಮುಖರಂ ಬಹುಮುಖದಿಂದಪ್ರಕಾರದಿಂ ಸಂಹರಿಸಿ ಇಂತು ಸಮರಸಂಧಾನಮುಖದಿಂ ಡಿಳ್ಳಿಯ ಔರಂಗಜೇಬಪಾತುಶಾಹನ ಫೌಜಂ ಪಿಂದೆಗೆಸಿ ರಾಜ್ಯರಾಷ್ಟ್ರಂಗಳಂ ಸಲಹಿ ತನ್ನಂ ಮರೆವೊಕ್ಕಾಕೆಯುರರಸನೆನಿಪ್ಪ ರಾಮರಾಜನಂ ಪೊರೆದು ಚಲಪದಮಂ ಮೆರೆದು ಸಮಸ್ತನೃಪಾಲಮಂಡಲಮಧ್ಯದೊಳತ್ಯಂತಪ್ರಖ್ಯಾತಿಯಂ ಪಡೆದು[1] ವಿರಾಜಿಸುತ್ತುಮಿರಲಿತ್ತ ರಾಮರಾಜಂ ಚಂದಿಯಂ ಪೊಕ್ಕ ವರ್ತಮಾನಮಂ ಗಲಗಲಿಯಿಂ ಬ್ರಹ್ಮಪುರಿಯಂ ಸಾರ್ದ ಔರಂಗಜೇಬಪಾತುಶಾಹಂ ಕೇಳ್ದು ಬಳಿಕ್ಕಂ ತನ್ನ ಮಂತ್ರಿಯಾದ ಅಸತ್ಖಾನನ ಮಗ ಜುಲುಪರ ಖಾನನೊಡನೆ ಹೇರಳಸೈನ್ಯಮಂ ಕೂಡಿಸಿ ತೆರಳ್ಚಲವನತ್ಯಂತಾಟೋಪದಿಂ ತೆರಳ್ದೈತಂದು ಚಂಡಿಯ ಗಡಕ್ಕೆ ಮುತ್ತಿಗೆಯನಿಕ್ಕಲೊಡನಾಜುಲುಪರ ಖಾನಂಗೆ ಪಡಿಬಲವಾಗಿ ಪಿಂತಣಿಂ ತನ್ನ ಪುತ್ರನಾದ ಕಾಂಬಕ್ಷನಂ ತೆರಳ್ಚೆ ಕಳುಪಲಾರಾಮರಾಜಂ ಚಂದಿಯ ಗಡದೊಳ್ ಸಿತ್ತರಿಸಿ ನಿಲಲಾರದಲ್ಲಿಂ ಪಲಾಯನಂಬಡೆದು ರಾಂಗಿಣಿಯ ಗಡವನೈದಲ್ ಮಗುಳ್ದೆವಾ

1 ಪಡೆದಳ್. (ಬಿ). ಇಲ್ಲಿಂದ "ಧುರದೊಳ್ಕಹಿಸೂರ.... " ಎಂಬ ೯೩ ನೆಯ ಕಂದದವರೆಗೂ ಇರತಕ್ಕ ಭಾಗವು ಓಲೆಯ ಪುಸ್ತಕದಲ್ಲಿಲ್ಲ.

ರ್ತೆಯಂ ಪಾತುಶಾಹಂ ಕೇಳ್ದು ಕೆರಳ್ದು ಸಾತಾರಿ ಪನ್ಹಾಳ ವಸಂತ ಲೇಖಿನಿ ಚಂದನ ವಂದನಾದಿಗಡಂಗಳಂ ಕೊಂಡೊಡನೆ ರಾಂಗಿಣಿಗಡವಂ ಪೇಡೈಸಲುಜ್ಜುಗಿಪನಿತರೊಳಾರಾಮರಾಜಂ ದೈವವಶದಿಂ ಮೃತಿವಡಲೊಡನೆ ತದ್ರಾಮರಾಜನ ಪತ್ನಿ ರಾಣಿ ಸ್ವಪುತ್ರರಾದ ಶಿವಾಜಿ ಸಂಭಾಜಿಗಳಂ ಮುಂತಿಟ್ಟುಕೊಂಡು ರಾಮಚಂದ್ರಪಂತನಂ ಮುಖ್ಯಾಧಿಕಾರಿಯಂ ಮಾಡಿಕೊಂಡಿಂತು ರಾಜ್ಯಂಗೆಯ್ಯುತ್ತಿರಲಾ ರಾಜೇರಾಮರಾಜನ ಕುಮಾರಕರಿರ್ವರೊಳಾ ಶಿವಾಜಿಯೆಂಬ ಕುಮಾರಂ ಮಾತೃದ್ರೋಹಮಂ ನೆನೆದು ತನ್ಮೂಲದಿಂ ಬಂಧನದೊಳ್ಸಿಲುಂಕಿ ಮರಣಮಂ ಪಡೆಯಲೊಡನೆ ರಾಮರಾಜನ ಪತ್ನಿ ಸ್ವಪುತ್ರನಾದ ಸಂಭಾಜಿ ವೆರಸು ರಾಜ್ಯಂಗೆಯ್ಯುತ್ತುಮಿರಲಿತ್ತಲವರಂಗಜೇಬಪಾತುಶಾಹನಾರೆಯರ ಮೂಲಚ್ಛೇದನಮಂ ಮಾಡಲ್ವೇಳ್ಕುಂದಾಳೋಚನೆಯಂ ರಚಿಸುವನಿತರೊಳತ್ತಂ, ವಾಗಿನಗಿರಿಯೊಳಿರ್ದ ವಿಜಾಪುರದ ತಳವಾರ ಪಿಡ್ಡನಾಯಕಂ ಪ್ರಬಲನಾಗಿ ಕಾಮಿಯಾಬಖಾನನಂ ತೆರಳ್ಚಿಸಿ ಕಳುಹಿ ವಿಜಾಪುರದ ಕೆಲವು ಸೀಮೆಗಳಂ ವಶಂಗೈದು ಮತ್ತಂ ಕೆಲವು ಸೀಮೆಗಳನಾಕ್ರಮಿಸುತ್ತಂ ಬರಲಾರೆಯರ ರಾಜ್ಯರಾಷ್ಟ್ರಮಂ ಸಾಧಿಸುತಿರ್ಪವರಂಗಜೇಬನೀವಾರ್ತೆಯಂ ಕೇಳ್ದು ಬಳಿಕ್ಕಾರೆಯರ ಮೇಗಣ ರಾಜಕಾರ್ಯಮಂ ಮಾಣ್ದಾಟೋಪದಿಂ ತೆರಳ್ದುತಂದಾವಾಗಿನಿಯ ಗಿರಿಯ ನವಬತ್ತಂ ಕೇಳ್ದು ಕೆರಳ್ದು[1] ವಾಗಿನಗಿರಿಯಂ ತೆಗೆದುಕೊಂಡಿಂತು ವರ್ತಿಪನಿತರೊಳಾಪಾತುಶಾಹನ ಶರೀರದೊಳ್ ರೋಗಂ ಮೊಳದೋರಲೊಡನಮದಾನಗರಕ್ಕೈದುತಿರಲ್, ಮಧ್ಯಮಾರ್ಗದೊಳ್ವ್ಯಾಧಿಪ್ರಕೋಪಿಸಲಾಗಳಾ ಅವರಂಗಜೇಬನಾಳೋಚಿಸಿ ತಾಂ ಕೊಂಡ ಸಂಸ್ಥಾನಂಗಳ್ ತನ್ನ ಮೂಲಸಂಸ್ಥಾನಸಹಿತಮನ್ಯಾಕ್ರಾಂತಮಾಗಿ ಪೋಗಬಾರದದಕ್ಕೆ ತಕ್ಕ ಬಲಶಾಲಿಗಳಂ ತತ್ತತ್ಸ್ಥಾನಂಗಳೊಳ್ನಿಲಿಸಲ್ವೇಳ್ಕುಮೆಂದು ಮನಂದಂದು ಮಗ ಶಹಲಮಂಗೆ ಡಿಳ್ಳಿಯಧಿಕಾರಮನಿತ್ತು ತೆರಳ್ಚಿ ಅಜಮತಾರನೆಂಬ ಕುಮಾರಂಗೆ ಉತ್ತರದಿಕ್ಕಿನ ಸುಬೆಯಧಿಕಾರಮನಿತ್ತು ಕಳುಹಿ ಕಾಂಬಕ್ಸನೆಂಬ ಸುತನಂ ಕರೆದು ಆತಂಗೆ

---

1 ಹೇರಳ್ದು.

ವಿಜಾಪುರಭಾಗಾನಗರಗಳಧಿಕಾರಮಂ ಕೈಗೊಳಿಸಿ ಮಗಳ್ ಬೇಗಮುವಿನ ಮೇಲಣಾಸಕ್ತಿಯಿಂದಾರೆಯುರೆಯುನಾದ ಶಿವಾಜಿಯು ಪೌತ್ರನಾದ ಸಂಬಾಜಿಯ ಪುತ್ರನಾದ ಶಾಹುರಾಜಂಗೆ ತಾನಾಳ್ವ ದೇಶಕೋಶಂಗಳೊಳ್ ತನಗೆ ಬರ್ಪರ್ಥದೊಳ್ ಚತುರಂಶದೊಳೊಂದುಭಾಗಧನಮಂ ಕೊಂಬುದೆಂದು ಚೌದಾಯಿಯ ಪರಮಾನಂ ಬರೆಸಿ ಕೊಡಲ್ ತದಾದಿಯಾಗಾರೆಯುರ್ಗೆ ಚೌದಾಯಿಯರ್ಥಮಂ ಕೊಂಬ ಪದ್ಧತಿಯಾಮದಿಂತು ನಿಯಾಮಕಂಗೈದನಂತರಂ ಬೇಗಮುವಿನ ಮೇಲಾರಯ್ಕೆಯಿಂದಿರುತ್ತುಮಿರಲ್ ಪ್ರತಿದಿನದೊಳಾ ಪಾತುಶಾಹಂಗೆ ಶರೀರದೊಳ್ಕೇವಲರುಜೋತ್ಕಟಮಾಗಿ ಬರಲ್ ದೌಲತಾಬಾದಿನೊಳ್ತನಗೆ ಗೋರಿಯಂ ಕಟ್ಟಲಪ್ಪಣೆಯಿತ್ತು ನೀನತಿಶೀಘ್ರದಿಂದೈತಪ್ಪುದೆಂದಾಜಮುತಾರಂಗೆ ಲೇಖನಮಂ ಬರೆಸಿ ಕಳುಹಿ ಸಾಗಿಸುತ್ತಿರಲಾಜಮುತಾರನೈತಪ್ಪನಿತರೊಳ್ಮಧ್ಯಮಾರ್ಗದೊಳವರಂಗಜೇಬಪಾತುಶಾಹಂ ಪಂಚತ್ವಮನೈದಲೊಡನಾತನ ಶರೀರಮಂ ದೌಲತಾಬಾದಿಂಗೆ ಕೊಂಡೊಯ್ದು ಬಳಿಕ್ಕಾತಾಣದೊಳ್ಮುನ್ನಮೆ ನಿರ್ಮಾಣಂಗೆಯ್ದ ಗೋರಿಯೊಳಾ ಪಾತುಶಾಹನ ಶರೀರಮನಿಕ್ಕಿ ಮುಚ್ಚಿ ಸಂಸ್ಕಾರಮಾಗಲನಂತರಮಾಸಮಯದೊಳಾಅವರಂಗಜೇಬಪಾತುಶಾಹನ ಪುತ್ರಿಯಾದ ಬೇಗಮುವಾಸಂಬಾಜಿಯ ಪುತ್ರನಾದ ಶಾಹುರಾಜಂಗಿಕ್ಕಿದ ಚೌಕಿಯಂ ತೆಗೆಸಿ ಚೌದಾಯಿಯರ್ಥಮಂ ಕೊಂಬುದೆಂದು ಪಾತುಶಾಹಂ ಮುನ್ನಂ ಬರೆಸಿತ್ತ ಪರಮಾನನಾಶಾಹುರಾಜಂಗೆ ಕೈಗೊಳಿಸಿ ನಿನ್ನ ರಾಷ್ಟ್ರಕ್ಕೈದಿ ನೀನಾವುದರಲ್ಲಿಯುಂ ಬುದ್ಧಿಶಾಲಿಯಾಗಿ ವರ್ತಿಪುದೆಂದು ನಿಯಾಮಕಂಗೆಯ್ದು ಬೀಳ್ಕೊಟ್ಟು ತೆರಳ್ಚಲೊಡನಾ ಶಾಹುರಾಜನೆಳ್ತಂದು ಸಾತಾರಿಯು ಗಡಮನೈದಿ ರಾಮರಾಜನ ಪುತ್ರನಾದ ಸಂಬಾಜಿಮೇರಸು ಬಾಳಾಜಿಪಿಶ್ವನಾಥಪಂತನ ಮಗನಾದ ಬಾಜಿರಾಯ ಶ್ರೀಪತಿರಾಯ ಖಂಡೋಜೀದಾಭಾಡೆ (?) ಮುಂತಾದ ವಜೀರರ್ಕಳ್ವೆರಸು ಸುಖಸಂಕಥಾವಿನೋದದಿಂ ರಾಜ್ಯಮಾಳುತ್ತುಮಿರಲಿತ್ತಂ ಪಾತುಶಾಹಂ ಸಂದ ವರ್ತಮಾನಮನುತ್ತರದಿಕ್ಕಿನೊಳ್ಕೈತರುತಿರ್ದಾಜಮುತಾರಂ ಕೇಳ್ದು ತನ್ನಮಗ ದಿವಾಬೆರ್ಗಾಕ್ಕಸ ಸಹಿತಂ ಕ್ಷಿಪ್ರದೊಳ್ಕೈತಂದು ಡಿಳ್ಳಿಯೊಳಧಿಕಾರಮಂ ನಡೆಸುತಿರ್ಪ ಶಾಹಲಮನ ಮೇಲೆ ದಂಡೆತ್ತಿ ನಡೆ

ತರಲ್ ಚರ್ಮಣ್ಣಾವತೀ (ಪ್ರತಿನಾಮಚಂಬಲ್) ನದೀಪ್ರಾಂತದೊಳುಭಯ ಸೈನ್ಯಕ್ಕಂ ಕೈಗಲಸಿ ಮಹಾಯುದ್ಧಂ ಪಣ್ಣಲಾಗಳಾ ಯುದ್ಧದೊಳಜ ಮುದ್ದೀನ್ ದಿನಾಬೊರ್ಕ್ಕಸನಂ ಕೆಡಪಲೊಡನಜಮುತಾರಂಗಂ ಶಹಲ ಮಂಗಂ ಮಹಾಯುದ್ಧಮಾಗಲಾ ಸಮರಾಂಗಣದೊಳ್ ಶಹಲಮನ ಮಗ ನಜಮುತಾರನಂ ಕೊಂದು ಬಳಿಕಂ ಮೌಜದೀನ್ವೆರಸು ವಿಜಾಪುರಭಾಗಾ ನಗರದಸಂಸ್ಥಾನಂಗಳನಾಳುತಿರ್ಪ ಕಾಂಬಕ್ಷನ ಮೇಲೆ ದಾಳಿಯನೈದ ಲೊಡನೀವೃತ್ತಾಂತಮನೆಲ್ಲಮಂ ಕಾಂಬಕ್ಷಂ ಕೇಳ್ದು ಕೆರಳ್ದು ತನ್ನ ಮಗ ಸುಲುತಾನಮಹಮ್ಮದುಸಹಿತಂ ಶಹಲಮನ ಮೇಲೆ ದಂಡೆತ್ತಿನಡೆತರಲ್ ಭಾಗಾನಗರಪ್ರಾಂತದೊಳವರಿರ್ವರ್ಗಂ ಕೈಗಲಸಿ ಬಳಿಕ್ಕೇಳುದಿವಸಪ ರ್ಯಂತಂ ಮಹಾಯುದ್ಧಮಾಗಲೊಡನೆ ತತ್ಸಮರಾಂಗಣದೊಳ್ ಶಹಲಮಂ ಕಾಂಬಕ್ಷನುಮನವನಮಗಸುಲುತಾನಮಹಮುದ್ದನುಮನಿಂತಿರ್ವರು ಮಂ ಕೊಂದು ಬಳಿಕ್ಕಂ ತಾಂ ಡಿಳ್ಳಿಯಂ ಸಾರ್ದೇಕಚ್ಛತ್ರದಿಂ ಪಾತುಶಾ ಹಪಟ್ಟವನಾಂತಖಂಡಾಧಿಕಾರಮಂ ವಹಿಸಿ ರಾಜ್ಯವನಾಳ್ದನಾಶಹಲಮನ ನಂತರಮವನ ಮಗ ಮುಜಾದಿನ್ನುವಾಳ್ದನಾಮುಜಾದಿನ್ನು ಸಂದ ತರುವಾಯಿಯೊಳವನ ತಮ್ಮನಾದ ಜಹೋದಿನ್ನುಪಿಂಗೆ ಪಟ್ಟಮಾದುದಾ ಅಜಹೋದಿನ್ನುಪಿನಂತರಮಾಅಜಮುದಿನ್ನುಪಿನ ಮಗ ಪರಕ್ಷಾಹಂಗೆ ಪಟ್ಟಮಾದುದಪಂ ಸಂದ ಬಳಿಕಂ ಮೌಜದೀನ್ನನ ಮೊಮ್ಮಗನಾದ ಮಹಮ್ಮದಶಾಹಂಗೆ ಪಟ್ಟಮಾದುದು. ಇದಾರೆಯುಂ ತುರುಷ್ಕರ ಮೂಲ ವೃತ್ತಾಂತಂ.

ಇನ್ನೊಳಗುಸಿರ್ದಂತು ಕೆಳದಿಯ ಚನ್ನಮ್ಮಾಜಿಯುವರ್ಶಕ್ಕ ಸಂವತ್ಸರದಲ್ಲಿ ಯೇಕಚ್ಛತ್ರಾಧಿಪತಿಯಾದ ಡಿಳ್ಳಿಯವರಂಗಜೇಬಪಾತುಶಾ ಹನ ಮೇಲೆ ಕೈಗಯ್ದು ಸಮರಸಂಧಾನದ ಮೇಲೆ ತತ್ಪಾತುಶಾಹಸೈ ನ್ಯಮಂ ಪಿಂದೆಗೆಸಿ ತನ್ನಂ ಮರೆವೊಕ್ಕ ಆರೆಯರ್ಗಧಿರಾಜನಾದ ಶಿವಾ ಜಿಯ ಪುತ್ರನಾದ ರಾಮರಾಜನಂ ಕಡೆದಾಂಟಿಸಿ, ಮನ್ನೆಯರ್ಕಳೊಳ್ ಪರಮಪ್ರಖ್ಯಾತಿಯಂ ಪಡೆದುವಿರಾಜಿಸುತಿರ್ದಳಂತುಮಲ್ಲದೆಯುಂ ॥೮೯

ಧರಣಿಪಸಂದೋಹಾಗ್ರೇ
ಸರನಹ ಸಿಜಸೂನುವೆರಸು ತೆರಳ್ದತಿಮುದದಿಂ ।

ದೊರೆ ಚನ್ನಮಾಂಬೆಯತಿಭಾ
ಸುರಸುಬ್ರಹ್ಮಣ್ಯಯಾತ್ರೆಯುಮಂ ವಿರಚಿಸಿದಳ್ ॥ ೯೦

ಇಂತು ಸುಬ್ರಹ್ಮಣ್ಯೇಶ್ವರಯಾತ್ರೆಯುಮಂ ರಚಿಸಿ ಮರಳ್ದು ವೇಣುಪುರವನೈದಿ ಸುಖಮಿರುತಿರ್ದನಂತರಂ ಸಬಸೀಸು ಕೋಳಿವಾಡದ ಬೊಮ್ಮರಸಯ್ಯ ನೊಡನಸಂಖ್ಯಾತವಾದ ಸೈನ್ಯಮಂ ತೆರಳ್ಚಿಸಿ ಕಳುಹಿ॥ ೯೧

ಧುರದೊಳ್ಮಹಿಸೂರಮಹೀ
ಶ್ವರನ ಚಮೂಪತಿಯುಸಿರಿದು ತತ್ಸುತನಂ ಕೈ ।
ಸೆರೆವಿಡಿದು ತತ್ಪದಾತಿಯ
ನೊರಸಿ ಜಯೋತ್ಸವವನಾಂತು ರಾರಾಜಿಸಿದಳ್ ॥ ೯೨

ಇಂತು ಸಂಗ್ರಾಮದೊಳ್ ಮೈಸೂರಮಹೀಶ್ವರನ ದಳವಾಯಿ ತಿಮ್ಮಪ್ಪನಂ ಸಿಗ್ರಹಿಸಿ ತತ್ಪುತ್ರನಾದ ಕೃಷ್ಣಪ್ಪನಂ ಕೈಸೆರೆವಿಡಿದು ಮರಳ್ದು ಕಳುಹಿಸಿ ಪರಮಪ್ರಖ್ಯಾತಿಯುಮಂ ಪಡೆದು [1] ತುಂಗಭದ್ರಾನದೀತೀರದೊಳ್ ॥ ೯೩

ತರುಣಿಯರ ಕುಲಶಿರೋಮಣಿ
ವರಚನ್ನಮ್ಮಾಜಿಯಾತ್ಮನಾಥನ ಪೆಸರೊಳ್ ।
ಸ್ಥಿರಮಾದ ಸೋಮಶೇಖರ
ಪುರಮೆಂದೆನಿಪಗ್ರಹಾರಮಂ ವಿರಚಿಸಿದಳ್ ॥ ೯೪

ಇಂತು ಪ್ರಾಣಕಾಂತನಾದ ಸೋಮಶೇಖರನಾಯಕರ ಪೆಸರೊಳ್ ಸೋಮಶೇಖರಪುರಮೆಂದೆನಿಪಗ್ರಹಾರಮಂ ನಿರ್ಮಾಣಂಗೈಸಿ ಸ್ವಾಸ್ಥಕ್ಷೇತ್ರವೃತ್ತಿಗಳಂ ಕಲ್ಪಿಸಿ ಶ್ರೋತ್ರಿಯಬ್ರಾಹ್ಮಣರ್ಗೆ ಶಿವಾರ್ಪಿತವಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತಳಂತುಮಲ್ಲದೆ ಬಸವಾಪಟ್ಟಣದ ಸೀಮಾಸನ್ನಿವೇಶದೊಳ್ ಹೂಲಿಕೆರೆಯೆಂಬ ಸ್ಥಳದೊಳ್ ವಿರಾಜಿಪ ಕೋಂಟೆಯುಮಂ ಸ್ವಾಧೀನಂಗೈದದಕ್ಕೆ ಸ್ವನಾಮಾಂಕಿತವಾದ ಚನ್ನಗಿರಿಯ

1 ಪಡೆದಿರುತ್ತಮಾನಂತರಂದಾನಿವಾಸದ (ಕ)

ಕೋಂಟೆ ಯೆಂದು ಪೆಸರಿಟ್ಟು ತತ್ಪರಿಸ್ತರಣಮಂ ಬಲ್ಪುಗೈಸಿದಳಿಂತು ಮಲ್ಲದೆಯುಂ ॥ ೯೫

ಮೆರೆವೆಳಕಾನಗರದ ಸುರ
ಪುರದೆಸಕವನಿಳಿಕೆಗೆಯ್ವ ಬಿದುರೂರೆಡೆಯೊಳ್ ।
ಕರಮೆಸೆವ ನೀಲಕಂಠೇ
ಶ್ವರಗೆ ರಥೋತ್ಸವದ ಕಟ್ಟಳೆಯನಾಗಿಸಿದಳ್ ॥ ೯೬

ಇಂತು ವೇಣುಪುರದ ನೀಲಕಂಠೇಶ್ವರ ದೇವರ್ಗೆ ಪ್ರತಿವರ್ಷಮುಂ ರಥೋತ್ಸವಮನಾಗಿಪಂತು ಕಟ್ಟಳೆಯುಂ ರಚಿಸಿ, ಮತ್ತಂ ಕೆಳದಿ ರಾಮೇಶ್ವರ ವೀರಭದ್ರೇಶ್ವರ ಕೊಲ್ಲೂರ ಮೂಕಾಂಬಿಕೆಯಮ್ಮನವರ್ಗೆ ಹೇರಳ ಭೂಸ್ವಾಸ್ಥೆಯುಂ ಬಿಟ್ಟು ಲೋಪಮಾಗದಂತು ತತ್ತತ್ಪೂಜಾದಿ ವಿಭವಂಗಳಂ ನಡೆಸಿ ಶ್ರೀಮತ್ಕೊಲ್ಲೂರ ಮೂಕಾಂಬಿಕೆಯವರ ಕಟಾಕ್ಷಲಬ್ಧಸಂಪೂರ್ಣೈಶ್ವರ್ಯಸಂಪನ್ನಳೆನಿಸಿ ಕೆಳದಿಯ ವೀರಭದ್ರದೇವರ ದೇವಸ್ಥಾನದ ಶಿಲಾಮಯಶಿಖರದ ಕೆಲಸಮುಮಂ ತದ್ರಂಗಮಂಟಪದ ರಚನಾದಿನವೀನ ಕೆಲಸಂಗಳುಮಂ ಸಂಪೂರ್ಣಮೆನಲಾಗಿಸಿ ಭೋಗಮಂಟಪದ ಸಮ್ಮುಖದೊಳ್ ಧ್ವಜಸ್ತಂಭಮಂ ನಿಲಿಸಿ ಮತ್ತಂ ಶೃಂಗಪುರದ ಸಂಸ್ಥಾನದ ಧರ್ಮಮಂ ಸಾಂಗಮಾಗಿ ನಡೆಸಿ ವೇಣುಪುರದರಮನೆಯೊಳೊಪ್ಪುವ ಭದ್ರಚಾವಡಿಯುಂ ದೃಢಂಗೆಯ್ಸಿ ಕಾಶೀ ಧರ್ಮಮಂ ಸಾಂಗಮಾಗಿ ನಡೆಸಿ ಮತ್ತಂ ಕಾಶೀ ರಾಮೇಶ್ವರ ಶ್ರೀಶೈಲ ತಿರುಪತಿ ಮುಂತಾದ ಪುಣ್ಯಕ್ಷೇತ್ರಂಗಳೊಳ್ ಸ್ಥಿರಮಾಗಿ ನಡೆವಂತು ವರ್ಷಾಶನದ ಕಟ್ಟಳೆಯುಂ ಕಲ್ಪಿಸಿ ಮತ್ತಮದಲ್ಲದುಚಿತಸ್ಥಾನಂಗಳೊಳ್ ಮಠಂಗಳಂ ಕಟ್ಟಿಸಿ ಶಿವಜಂಗಮಾರ್ಥಂ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತಂತುಮಲ್ಲದೆಯುಂ, ತಮ್ಮ ಸೇವಕರಾದ ಶಿವಭಕ್ತಗುರಿಕಾರ ಶೈವ ವೈಷ್ಣವಬ್ರಾಹ್ಮಣಗುರಿಕಾರರ ಮುಖದಿಂ ಮಠ ಮಾನ್ಯ ದೇವಸ್ಥಾನಾಗ್ರಹಾರಾದಿ ನಾನಾವಿಧ ದಾನಧರ್ಮಂಗಳನಾಗಿಸಿ ಶಾಶ್ವತಧರ್ಮಕೀರ್ತಿಗಳಂ ಸಂಪಾದಿಸಿ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈದಳಿಂತು ಮಲ್ಲದೆಯುಂ ॥ ೯೭

ಉನ್ನತಶುಭಗುಣಗಣಸಂ
ಪನ್ನತೆಯಿಂ ಕ್ಷಾತ್ರದಾನಧರ್ಮಾದಿಗಳಿಂ ।
ಚನ್ನಮ್ಮಾಜಿಗೆ ಸರಿಯಪ
ಮನ್ನೆಯರಿಲ್ಲೆನಿಸಿ ರಾಜ್ಯಮಂ ರಕ್ಷಿಸಿದಳ್ ॥ ೭೮

ಈ ಚನ್ನಮ್ಮಾಜಿಯವರ್ ಭುವನಗಿರಿಯ ದುರ್ಗದೊಳ್ ತನಗೆ ಪಟ್ಟವಾದ ಶಾಲಿವಾಹನಶಕ ವರ್ಷ ೧೫೯೪ ನೆಯ ವಿರೋಧಿಕೃತ್ಸಂವತ್ಸರದ ಫಾಲ್ಗುಣಶುದ್ಧ ೧೦ ಆರಭ್ಯ, ಈಶ್ವರನಾಮಸಂವತ್ಸರದ ಶ್ರಾವಣಶುದ್ಧ ೧೪ ವರೆಗೆ ವರ್ಷ ೨೫ ತಿಂಗಳು ೪ ದಿನ ೨೦ ಪರ್ಯಂತಂ ಸದ್ಧರ್ಮದಿಂ ರಾಜ್ಯಂಗೆಯ್ದು ಶಿವಸಾಯುಜ್ಯಮಂ ಪಡೆದರ್[1]

ನವಮಾಶ್ವಾಸಂ ಸಂಪೂರ್ಣಂ

---

[1] ಈ ಚೆನ್ನಮ್ಮಾಜಿಯವರಿಗೆ ಬಿದರೂರು ಕೊಪ್ಪಲು ಮಠದಲ್ಲಿ ಸಮಾಧಿಯಾಯಿತು.

ಈ ಚನ್ನಮ್ಮಾಜಿಯವರ ಕಾಲದಲ್ಲಿ ಬದುಕುವನಾಗಿದ್ದವರು.—ಕೋಟೆಪುರದ ಸಿದ್ಧಪ್ಪಶೆಟ್ಟರು, ಬೊಕ್ಕಸದ ಸಿದ್ಧಬಸವಯ್ಯ, ಕೋಲಾಲದ ವೆಂಕಪ್ಪಯ್ಯ, ಬಿಳಿಗಿ ಕೋನಪ್ಪಯ್ಯ, ಕಂದಾಚಾರದ ಲಕ್ಷ್ಮಯ್ಯ, ಕಾಸರಗೋಡು ತಿಮ್ಮಣ್ಣನಾಯಕ, ಅವಿನಹಳ್ಳಿ ನರಸಪ್ಪಯ್ಯ, ಸಬ್ನೀಸ ಕೃಷ್ಣಪ್ಪಯ್ಯ, ಮುತ್ತೂರು ತಿಮ್ಮರಸಯ್ಯ, ಗುರುಬಸವಪ್ಪದೇವರು, ಭದ್ರಪ್ಪದೇವರು, ಕರಣಿಕ ಬಿಳಿಗಿ ಸುಬ್ಬಯ್ಯ, ಕೋಲಾಲದ ರಾಮಪ್ಪಯ್ಯ, ಬೊಕ್ಕಸದ ವೆಂಕಪ್ಪಯ್ಯ, ರಾಯಸದ ವೆಂಕಪ್ಪಯ್ಯ, ಸರಜಾ ನಾಗಪ್ಪಯ್ಯ, ಬಿಳಿಗಿ ಚಿಕ್ಕಪ್ಪಯ್ಯ, ಅಶ್ವತ್ಥಯ್ಯ, ಪುಟ್ಟಯ್ಯ, ಸಬ್ನೀಸ ಲಕ್ಷ್ಮಯ್ಯ, ಸರಜಾ ಶಂಕರನಾರಣಯ್ಯ, ಕೋಳಿವಾಡದ ಬೊಮ್ಮರಸಯ್ಯ, ಚಿಟನಿಸ ನಾಗಪ್ಪಯ್ಯ, ಸರಜಾ ತಿರುಮಲಯ್ಯ, ತಿಮ್ಮಪ್ಪಯ್ಯ, ಮರಿಯಪ್ಪಯ್ಯ, ಸೂರಪ್ಪಯ್ಯ, ಪಟ್ಟೆ ಬೊಮ್ಮಯ್ಯ, ಕೃಷ್ಣಪ್ಪಯ್ಯ, ಗರಜಿನ ಚನ್ನವೀರವಡೇರು, ವೋನಪ್ಪಶೆಟ್ಟರು, ಮರಿಯಪ್ಪಶೆಟ್ಟರು, ಸರಜಾರಾಯನ ಮಗ ತಿರುಮಲಯ್ಯ, ಗಂಗಾಧರಯ್ಯ, ಬೆಳವಂದೂರು ಗುರಪ್ಪನಾಯಕ, ಹೊಸೂರು ಲಿಂಗಪ್ಪಯ್ಯ ಇವರು ಮುಂತಾದ ನಿಯೋಗಿಗಳು.

# ದಶಮಾಶ್ವಾಸಂ

ಆ ಚನ್ನಮ್ಮಾಜಿಯವರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೧೯ ನೆಯ ಈಶ್ವರ ಸಂವತ್ಸರದ ಶ್ರಾವಣ ಶುದ್ಧ ೧೪ಯಲ್ಲಿ ಹಿರಿಯಸೋಮಶೇಖರನಾಯಕರ ಪತ್ನಿ ಚನ್ನಮ್ಮಾಜಿಯವರ ಕುಮಾರರಾದ ಹಿರಿಯಬಸವಪ್ಪನಾಯಕರ್ಗೆ ವೇಣುಪುರದರಮನೆಯಲ್ಲಿ ರಾಜಪಟ್ಟಂ.[1]

ಧರೆಗಧಿಕ ಚನ್ನಮಾಂಬಾ
ತರುಣಿಯ ತರುವಾಯಿಯೊಳ್ತನಾತ್ಮಜನಪ ಭಾ ।
ಸುರಬಸವೇಂದ್ರಂ ರಾಜ್ಯದ
ಧುರಮಂ ತಾಂ ವಹಿಸಿ ಬಾಳ್ದನತಿಸಂಭ್ರಮದಿಂ ॥ ೧

ಅದೆಂತೆಂದೊಡಾಬಸವಪ್ಪನಾಯಕಂ ತಮ್ಮ ತಂದೆ ಮುರಿಯಪ್ಪಸೆಟ್ಟರ್, ಮೋನಪ್ಪಸೆಟ್ಟರ ಪುತ್ರ ನಿರ್ವಾಣಯ್ಯನವರ್, ತಮನುಜ ಗುರುವಪ್ಪನವರ್, ಪ್ರಧಾನಿ ಗುರುಬಸವಪ್ಪದೇವರ್, ಗರಜಿನ ಶಾಂತಪ್ಪೊಡೆಯರ್, ಸಬ್ಬನಿಸ ಕೋಳಿವಾಡದ ಬೊಮ್ಮರಸಯ್ಯ, ಶರಜಾ ಹೂವಯ್ಯ, ಚಿಟನಿಸ ಭೈರಯ್ಯ, ಗಾಜನೂರ ಯಲ್ಲಪ್ಪಯ್ಯ, ಆ ಲಕ್ಷ್ಮಯ್ಯ, ಹೊನ್ನಾಳಿ ಸುಬ್ಬಯ್ಯ, ಪಟ್ಟಿಯ ಸೇನಬೋವ ರಂಗಪ್ಪಯ್ಯ, ಕೋಳಾಲದ ವೆಂಕಟೇಶಯ್ಯ, ನಲ್ಲೂರ ಲಕ್ಷ್ಮೀಪತಯ್ಯ, ಆ ವೆಂಕಪ್ಪಯ್ಯ, ರಾಯಸದ ಅಶ್ವತ್ಥಯ್ಯ, ಶರಜಾ ನರಸಪ್ಪಯ್ಯ, ಚನ್ನಪ್ಪಯ್ಯ, ಆ

---

[1] ಆ ಬಸವಪ್ಪನಾಯಕರಿ ತಮಗೆ ರಾಜಪಟ್ಟವಾದ ಈಶ್ವರ ಸಂವತ್ಸರದ ಶ್ರಾವಣ ಶುದ್ಧ ೧೪ ಆರಭ್ಯ ಜಯ ಸಂವತ್ಸರದ ಪುಷ್ಯ ಬಹುಳ ೧ರವರೆಗೆ ವರ್ಷ ೧೭ ತಿಂಗಳು ೫ ದಿವಸ ೧೭ ಪರ್ಯಂತಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈದರಾವಿವರಣಮಂ ಪದ್ಯರೂಪದಿಂ ಪೇಳ್ವೆನದೆಂತೆಂದೊಡ (ಕ.ಬ.)

ನಾಗಪ್ಪಯ್ಯ, ವೆಂಕಟಯ್ಯ, ಚಿಕ್ಕ ತಿಮ್ಮಯ್ಯನ ಕೂಸಪ್ಪಯ್ಯ, ಮುಂತಾದ ಮಂತ್ರಿ ಸಾಮಾಜಿಕ ನಿಯೋಗಿ ಗುರಿಕಾರಜನರ್ವೆರಸು ತಮ್ಮ ಮಾತೃ ಚನ್ನಮ್ಮಾಜಿಯವರಾಳಿ ಬರುತ್ತಿರ್ದ ರಾಜ್ಯ ರಾಷ್ಟ್ರ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಪುರಜನ ಪರಿಜನ ವಿದ್ವಜ್ಜನ ಬಂಧುಜನ ಸೇವಕಜನರ್ಮುಂತಾದ ಸಮಸ್ತಜನರಂ ಸಂರಕ್ಷಿಸುತ್ತುಂ, ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತ್ತುಂ ತತ್ಸಂವತ್ಸರದ ಮಾಘ ಮಾಸದಲ್ಲಿ ಕುಟರಹಳ್ಳಿ ಚನ್ನವೀರವೊಡೆಯರ ಮಗ ಬಸವಪ್ಪನ ಪತ್ನಿಯಾದ ಪುಟ್ಟವ್ವನ ಕುಮಾರಿಯಾದ ಚನ್ನಮ್ಮಾಜಿಯವರ್, ಹೆಬ್ಬೆಕೋಟೆ ವಿರೂಪಾಕ್ಷಯ್ಯನ ಮಗ ಶಿವಯ್ಯನ ಕುಮಾರಿ ವೀರಮ್ಮಾಜಿಯವರ್ ಹೀಗೆ ಇರ್ವರ್ ಸ್ತ್ರೀಯರಂ ವಿವಾಹವಾದರ್. ಈ ಬಸವಪ್ಪನಾಯಕರ್ಗೆ ಪ್ರಾಕು ಈ ಬಸವಪ್ಪನಾಯಕರ ಮಾತೃ ಚನ್ನಮ್ಮಾಜಿಯವರ ಕಾಲದಲ್ಲಿ ಕಾಳಯುಕ್ತಿ ಸಂವತ್ಸರದ ಮಾರ್ಗಶಿರಮಾಸದಲ್ಲಿ ವಿವಾಹವಾದ ಸ್ತ್ರೀಯರ್ ಹೆಬ್ಬೆ ಮಹಂತಯ್ಯನ ಕುಮಾರಿ ಚನ್ನಮ್ಮಾಜಿಯವರ್, ಮಳಿಗೆ ಚನ್ನವೀರಪ್ಪನ ಕುಮಾರಿ ಚನ್ನಬಸವಮ್ಮಾಜಿಯವರ್ ; ಈ ಹಿರಿಯ ಬಸವಪ್ಪನಾಯಕರ್ಗೆ ಈ ಪ್ರಕಾರಂ ನಾಲ್ವರ್ ಸ್ತ್ರೀಯರ್; ಈ ನಾಲ್ಕು ಸ್ತ್ರೀಯರೊಳಗೆ ಹೆಬ್ಬೆ ಮಹಂತಯ್ಯನ ಮಗಳ್ ಚನ್ನಮ್ಮಾಜಿಯವರ್, ಹೆಬ್ಬೆ ವಿರೂಪಾಕ್ಷಯ್ಯನ ಮಗ ಶಿವಯ್ಯನ ಕುಮಾರಿಯಾದ ವೀರಮ್ಮಾಜಿಯವರ್ ಈ ಇರ್ವರುಂ ಸ್ತ್ರೀಯರಲ್ಲಿಯುಂ ಸಂತಾನವಿಲ್ಲ. ಮೇಲಾದ ಇರ್ವರ್ ಸ್ತ್ರೀಯರೊಳಗೆ ಮಳಿಗೆ ಚನ್ನವೀರಪ್ಪನ ಮಗಳ್ ಚನ್ನಬಸವಮ್ಮಾಜಿಯವರ ಗರ್ಭದಲ್ಲಿ ಪ್ರಾಕು ಚನ್ನಮ್ಮಾಜಿಯವರ ಕಾಲದಲ್ಲಿ ಪ್ರಜೋತ್ಪತ್ತಿ ನಾಮಸಂವತ್ಸರದ ಕಾರ್ತಿಕ ಶುದ್ಧ ೧೦ ಯಲ್ಲಿ ಸೋಮಶೇಖರನಾಯಕರ್ ಜನಿಸಿದರೆಂದು ಪ್ರಾಕು ಚನ್ನಮ್ಮಾಜಿಯವರ್ ರಾಜ್ಯವಾಳುತ್ತಿರ್ದ ಕಾಲದಲ್ಲಿಯೇ ಒಳಗೆ ಬರೆದು ಇದೆ. ಈ ಬಸವಪ್ಪನಾಯಕರ ಇನ್ನೊಬ್ಬ ಪತ್ನಿ ಕುಟರಹಳ್ಳಿ ಚನ್ನವೀರವೊಡೆಯರ ಮಗ ಬಸವಪ್ಪನ ಪತ್ನಿಯಾದ ಪುಟ್ಟವ್ವನ ಮಗಳಾದ ಚನ್ನಮ್ಮಾಜಿಯವರ ಗರ್ಭದಲ್ಲಿ ವಿಕ್ರಮ ಸಂವತ್ಸರದ ವೈಶಾಖ ಶುದ್ಧ ೧ ಯಲ್ಲಿ

ವೀರಭದ್ರನಾಯಕರ್ ಜನಿಸಿದರ್. ಈ ಹಿರಿಯ ಬಸವಪ್ಪನಾಯಕರ್ಗೆ ಹೀಗೆ ಇರ್ವರ್ ಕುಮಾರರ್. ಅವರೊಳಗೆ ಜ್ಯೇಷ್ಠಪುತ್ರನಾದ ಸೋಮಶೇಖರನಾಯಕರ್ಗೆ ಚಿತ್ರಭಾನು ಸಂವತ್ಸರದ ವೈಶಾಖ ಶುದ್ಧ ೩ ಯಲ್ಲಿ ಚಿಲನೂರ ವೀರಪ್ಪನ ಮಗಳ್ ವೀರಮ್ಮಾಜಿಯವರ್ ಸೂರಿರಾಯನ ಕಲ್ಲಪ್ಪನ ಮಗಳ್ ಬಸವಮ್ಮಾಜಿಯವರ್ ಇಂತಿರ್ವರ್ ಸ್ತ್ರೀಯರಂ ವಿವಾಹವಂ ಮಾಡಿದರ್. ಮುಂದೆ ಈ ಸೋಮಶೇಖರನಾಯಕರ್ ತಾವು ಸ್ವಾತಂತ್ರ್ಯದಲ್ಲಿ ರಾಜ್ಯವಾಳುತ್ತಿರ್ದ ಪ್ಲವ ಸಂವತ್ಸರದ ಫಾಲ್ಗುಣ ಶುದ್ಧ ೩ ಯಲ್ಲಿ ಮೋನಪ್ಪಶೆಟ್ಟರ ಮಗ ನಿರ್ವಾಣಯ್ಯನವರ ಪತ್ನಿ ಭದ್ರಮ್ಮನವರ ಕುಮಾರಿ ನೀಲಮ್ಮಾಜಿಯವರಂ ವಿವಾಹವಾದರ್. ಈ ಹಿರಿಯ ಬಸವಪ್ಪನಾಯಕರ ಕುಮಾರ ಸೋಮಶೇಖರ ನಾಯಕರ್ಗೆ ಈ ಮೂವರ್ ಸ್ತ್ರೀಯರ್. ಈ ಮೂವರ್ ಸ್ತ್ರೀಯರೊಳಂ ಸಂತಾನವಿಲ್ಲ. ಮತ್ತಮಾ ಬಸವಪ್ಪನಾಯಕಂ ತಮ್ಮ ಕನಿಷ್ಠಪುತ್ರನಾದ ವೀರಭದ್ರನಾಯಕರ್ಗೆ ಸರ್ವಧಾರಿ ಸಂವತ್ಸರದ ಮಾರ್ಗಶಿರ ಬಹುಳ ೧೪ಲ್ಲಿ ಸಾಗರದ ವಾರದ ಚನ್ನಬಸವಪ್ಪನ ಕುಮಾರಿ ಚನ್ನಮ್ಮಾಜಿಯವರ್ ಸೂರಿರಾಯನ ಕಲ್ಲಪ್ಪನ ಚಿಕ್ಕ ಕುಮಾರಿ ಮಲ್ಲಮ್ಮಾಜಿಯವರ್ ಹೀಗೆ ಇರ್ವರ್ ಸ್ತ್ರೀಯರಂ ವಿವಾಹವಂ ಮಾಡಿದರ್. ಈ ಇರ್ವರ್ ಸ್ತ್ರೀಯರೊಳಗೆ ವಾರದ ಚನ್ನಬಸವಪ್ಪನ ಮಗಳ್ ಚನ್ನಮ್ಮಾಜಿಯವರ ಗರ್ಭದಲ್ಲಿ ಸಂತಾನವಿಲ್ಲ. ಸೂರಿರಾಯನ ಕಲ್ಲಪ್ಪನ ಮಗಳ್ ಮಲ್ಲಮ್ಮಾಜಿಯವರ ಗರ್ಭದಲ್ಲಿ ಮುಂದೆ ಈ ಬಸವಪ್ಪನಾಯಕರ ಕುಮಾರ ಸೋಮಶೇಖರ ನಾಯಕರ್ ರಾಜ್ಯವಾಳುತ್ತಿದ್ದ ಕಾಲದಲ್ಲಿ ಪ್ಲವ ಸಂವತ್ಸರದ ಮಾರ್ಗಶಿರ ಶುದ್ಧ ೩ ಯಲ್ಲಿ ಈ ಬಸವಪ್ಪನಾಯಕರ್ ಜನಿಸಿದರ್. ಇದು ಚನ್ನಮ್ಮಾಜಿಯವರ ಕುಮಾರನಾದ ಹಿರಿಯ ಬಸವಪ್ಪನಾಯಕರ ಸಂತಾನಪರಂಪರಾವಿವರಣಂ; ಇನ್ನು ಪ್ರಕೃತಕಥಾಸಂದರ್ಭಮೆಂತೆನಲಾ ಹಿರಿಯಬಸವಪ್ಪನಾಯಕಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರ್ದು ತನಗೆ ಪಟ್ಟವಾದ ಈಶ್ವರ ಸಂವತ್ಸರಫಾಲ್ಗುಣ ಮಾಸದಲ್ಲಿ ತಮ್ಮ ಮಾತೃ ಚನ್ನಮ್ಮಾಜಿಯವರ್ ಪುತ್ರಿಯು

ಭಾವದಿಂದ ಸಾಕಿದ ಆ ಚೆನ್ನಮ್ಮಾಜಿಯವರ ತಂಗಿ ಮರಿಯಮ್ಮಾಜಿ ಯೆಂಬ ಕುಮಾರಿಯಂ ಮೋನಪ್ಪಸೆಟ್ಟರ ಮಗ ನಿರ್ವಾಣಯ್ಯಂಗಿತ್ತ ತ್ಯಂತಸಂಭ್ರಮದಿಂ ವಿವಾಹಮಂ ರಚಿಸಿ ಸುಖಮಿರುತ್ತುಮಿರ್ದರ್ ॥ ೨

ಕಡುಂಗಲಿಗಳಾರೆಯರ್ಕಳ್
ಪಡೆಯಂ ಕಾಲ್ದೆಗೆಸಿ ಖಳರಿಗಾಶ್ರಯಮೆನಿಸಿಪ ।
ಕಡಲೆಡೆಯೊಳೆಸೆವ ನವಿಲೆಯ
ಗಡಮಂ ತದ್ಬಸವಭೂಮಿಪಂ ಸಾಧಿಸಿದಂ ॥ ೩

ಇಂತು ನಿರ್ವಾಣಯ್ಯನ ಸಹೋದರನಾದ ಚನ್ನಬಸವಪ್ಪ ನೃಪನೆ ಸೇನಾಸಮೂಹಮಂ ತೆರಳ್ಚಿ ಕಳುಹಿ ಕಡಲೆಡೆಯೊಳೆಸೆವ ನವಿಲೆಗಡಮಂ ಸಾಧಿಸಿಯಾಗಡಕ್ಕೆ ಬಸವರಾಜದುರ್ಗಮೆಂದು ಸ್ವನಾಮಾಂಕಿತಮಂ ರಚಿಸಿ ಬಲ್ಪುಗೈಸಿದನಂತುಮಲ್ಲದೆ[1] ಆನಂದಪುರದಲ್ಲಿ ॥ ೪

ಕಲಿ ಶೇಖುಕುಂದನಂ ಕೊಳು
ಗುಳದೆಡೆಯೊಳ್ಕಡಹಿ ದೇಶಕೋಶವನಲೆವಾ ।
ಖಳವೇಷಧಾರಿಯುಂ ಯಮ
ನಿಳಯಮನುರೆ ಪುಗಿಸಿ ರಾಜ್ಯಮಂ ರಕ್ಷಿಸಿದಂ ॥ ೫

---

1 ಪ್ರಾಕು ಶಿವಪ್ಪನಾಯಕನ ಕಾಲದಲ್ಲಿ ನಯನೋತ್ಪಾಟನವಂ ಮಾಡಿಸಿ ಹೊಸಾಗಡಿಯ ಕೋಟೆಯಲ್ಲಿ ಅಂಕೆಯಲ್ಲಿಟ್ಟಿರಲಲ್ಲಿಂದ ತಪ್ಪಿಸಿಕೊಂಡು ಓಡಿ ಹೋದ ವೆಂಕಟಪ್ಪನಾಯಕರ ದೌಹಿತ್ರ ಸದಾಶಿವಯ್ಯನ ಪುತ್ರ ಅಂಧಕವೆಂಕಟಪ್ಪ ನಾಯಕನ ಪುತ್ರ ಕುತ್ಸಿತಶಿವಪ್ಪನಾಯಕನ ಮಗನು ವೇಷಧಾರಿನಾಮವನಾಂತು ಇರುತ್ತಿದ್ದನು. ಆ ವೇಷಧಾರಿಯನ್ನು ಗುತ್ತಳದ ಹನುಮಂತಗೌಡನ ಮುಖದಲ್ಲಿ ಹಿಡಿತರಿಸಿ ಮರಿಯಪ್ಪಸೆಟ್ಟರು ಶಿರಚ್ಛೇದನಮಾಡಿಸಿದರು. ಆಮೇಲೆ ಆ ವೇಷಧಾರಿಗೆ ಇಬ್ಬರು ಮಕ್ಕಳು ಇರುತ್ತಿದ್ದಲ್ಲಿ ಅವರೊಳಗೆ ಒಬ್ಬನ ಭೇದತಂತ್ರದ ಮೇಲೆ ಹೊರಗೆ ಶಿರಚ್ಛೇದನವ ಮಾಡಿಸಿದರು. ಮತ್ತೊಬ್ಬನು ತಪ್ಪಿಸಿಕೊಂಡು ಅನಾಮಧೇಯನಾಗಿ ಕೆಟ್ಟು ಪಂಚಪಕೀರನಾಗಿ ಕಾಕತ್ರನಾಗಿ ಏನಾಗಿ ಎಲ್ಲಿ ಮೃತನಾಗಿ ಹೋದನೆಂಬುದು ತಿಳಿಯಲಿಲ್ಲ. (ಕ)

ಮತ್ತಮದಲ್ಲದೆ ॥ ೬

ಅರ್ಕಾಲಗೋಡವರೆಳೆಯನ
ವರ್ಕಾಳ್ಕೆಯಾವಿಗಳ್ವಶಂಗೆಯ್ದಿರೆ ಕೊಂ ।
ಡರ್ಕಾಲಗೋಡನವರ್ಗಿ
ತ್ತರ್ಕಾಸಿಭಂ ಬಸವಭೂಪನುರೆ ಜಸವಡೆದಂ ॥ ೭

ಮತ್ತಮದಲ್ಲದೆ ॥ ೮

ಇಳೆಯಧಿಪರೆಲ್ಲರಿಂಗ
ಗ್ಗಳನೆನಿಸುತೆ ತಾಮ್ರಮುಖರ ವಶವಾಗಿಪ್ಪ ।
*ಬೀರ್ಗಳೆಯಪೊನ್ನೂರ ಕೋಂಟೆಯ
ನಳವಿಯೊಳಂ ಕೊಂಡು ಸಾಸವಂ ಮಿಗೆ ಮೆರೆದಂ ॥ ೯

ಮತ್ತಮದಲ್ಲದೊಂದವಸರದೊಳ್ ಮಲೆಯಾಳದವರ್ಮಾಯಾವಿಗಳ ಸೈನ್ಯವಂ ಸಹಾಯಮಂ ಮಾಡಿಕೊಂಡೈದಿ ಚಂದ್ರಗಿರಿಯ ಕೋಂಟೆಯಂ ವೇಢೈಸಿರಲ್ ಗರಜಿನ ಬಸವಪ್ಪದೇವರೊಡನೆ ಸೈನ್ಯಸಮೂಹಮಂ ತೆರಳ್ಚಿ ಕಳುಹಿ ಮಾಯಾವಿಗಳ ಸೈನ್ಯವಂ ಸಂಹರಿಸಿ ಮದೋದ್ರೇಕದಿಂದಿರ್ದ ಮಲೆಯಾಳರಂ ನಿಗ್ರಹಂಗೆಯ್ದು ಚಂದ್ರಗಿರಿಯ ಕೋಂಟೆಯಂ ಸ್ವಾಧೀನಂಗೆಯ್ದು ಮಾಯಾವಿಗಳ್ಕೊಂಡ ವಸುಧಾರಕೋಂಟೆಯಂ ಮಗುಳ್ದು ಬಿರಂಗದೊಳ್ಸ್ವಾಧೀನಂಗೆಯ್ದು ಬಲ್ಪುಗೆಯ್ದು ಉಭಯಸಂಸ್ಥಾನಗಳ್ಗಮನ್ಯೋನ್ಯವಿರೋಧಂ ಪುಟ್ಟಿವರ್ತಿಸದಂತು ನಿಯೋಗಿ ಶರಜಾ ನಾಗಪ್ಪಯ್ಯನ ಮುಖದೊಳ್ಕ್ರಿಯಾಪೂರ್ವಕವಾಗಿ ಭಾಷಾಪತ್ರಿಕೆಯಂ ರಚಿಯಿಸಿ ನಿರ್ವೈರವಂ ನಿಮಿರ್ಚಿಸಿದನಂತುಮಲ್ಲದೆಯುಂ ॥ ೧೦

ಕಡುಗಲಿಗಳಪ್ಪ ಮೊಗಲ
ರ್ಕಡುಹಿಂ ಕೊಂಡಾನೆವಟ್ಟ ಮಹದೇವಪುರಂ ।
*ಜಡೆಯ ಹೊನ್ನಾಳಿಯೊಪ್ಪುವ
ಮಿಡಿಜೆಯ ಕೋಂಟೆಗಳ ಮಗುಳ್ದವಂ ಸಾಧಿಸಿದಂ ॥ ೧೧

ಇಂತು ಮೊಗಲರಧೀನಮಾದ ಪರಿಸ್ತರಣಂಗಳಂ ಸ್ವಾಧೀನಂಗೆಯ್ದನಂತುಮಲ್ಲದೆಯುಂ ॥ ೧೨

ಕರಿತುರಗಪತ್ತಿಸಹಿತಂ
ದುರುಶೌರ್ಯೋದ್ರೇಕದಿಂದಮೈದಿದ ಯವನೇ ।
ಶ್ವರ ಸವಣೂರ ನಬಾಬನ
ಗರುವಿಕೆಯಂ ತೀರ್ಚಿ ರಣದೆ ಮುರಿದೋಡಿಸಿದಂ ॥ ೧೩

ಇಂತು ಬಲಶಾಲಿಯಾದ ಸವಣೂರ ನಬಾಬನಂ ಗುರುವಪ ಮಂತ್ರಿಯ ಮುಖದಿಂ ಯುದ್ಧರಂಗದೊಳ್ಪಿಂಗೆಸಿ ಸುಖಸಂಕಥಾ ವಿನೋದದಿಂ ರಾಜ್ಯಪ್ರತಿಪಾಲನಂಗೆಯ್ಯುತಿರ್ದನಂತುಮಲ್ಲದೆಯುಂ ॥ ೧೪

ಮೆರೆವ ಶಿವತತ್ತ್ವರತ್ನಾ
ಕರಮೆಂದೆನಿಪಾ ಸುಭಾಷಿತಸುರದ್ರುಮಮಂ ।
ಬುರುತರಕಾವ್ಯದ್ವಯಮಂ
ವಿರಚಿಸಿ ಸದ್ಯಶಮನಾಂತನಾಬಸವನೃಪಂ ॥ ೧೫

ಇಂತು ಸಂಸ್ಕೃತಗ್ರಂಥನಿಬಂಧದ್ವಯಮಂ ವಿರಚಿಸಿ ಮತ್ತಮದಲ್ಲದನಂತರಂ ಗೀರ್ವಾಣಕರ್ಣಾಟಕಭಾಷೆಗಳಂ [1] ॥ ೧೬

ಅನುಪಮಸೂಕ್ತಿಸುಧಾಕರ
ಮೆನಿಪಾ ವಸ್ತುಕಸುಕಾವ್ಯಮಂ ವಿರಚಿಸಿ ಸೌ ।
ರಸಿಕರಕಲ್ಪದ್ರುಮನೆಂ
ದೆನಿಪೀ ಬಿರುದಾಂತು ಮೆರೆದನಾಬಸವನೃಪಂ ॥ ೧೭

ಮತ್ತಮದಲ್ಲದೆ ॥ ೧೮

[1] ಕರ್ಣಾಟಕ ಮಿಶ್ರಭಾಷೆಯೊಳ್ (ಕ.)

ದಾಸೋಽಹಂ ಪುರವರ್ಗಂ
ಭಾಸುರಮಠಮಾನ್ಯಸತ್ರಮೆಂಬಿವು ಮೊದಲಾ ।
ದಾ ಸಕಲಧರ್ಮವುಮಂ ಚಿ
ತ್ರೋಽಕ್ಕಶಂ ಬಸವಾವನೀಶನುರೆ ವಿರಚಿಸಿದಂ ॥ ೧೯

ಮತ್ತಮದಲ್ಲದೆ ಪ್ರತಿವರ್ಷದೊಳ್ ಕಾರ್ತಿಕಮಾಸದೊಳ್ ಸೋಮವಾರಂಗಳೊಳ್ [1] ಜಂಗಮಪಾದಪೂಜೆಯುಂ ಮಾಳ್ಪ ಪದ್ಧತಿಯುಂ ರಚಿಸಿ ಸಕಲಜನಹಿತಾರ್ಥಂ ವೇಣುಪುರೀನದಿಗೆ ಶಿಲಾಸೇತುವಂ ಕಟ್ಟಿಸಿ ಪರಮಹಂಸಪಕೀರರ್ಗಂ ಪ್ರತಿದಿನದೊಳ್ ರೊಟ್ಟಿಗಳನೀವ ಧರ್ಮಮುಮಂ ಮತ್ತಂ ಪಸಿದವರ್ಗನ್ನಮಂ ಶಿಶುಗಳ್ಗೆ ಪಾಲ್ಬೆಣ್ಣೆಗಳನೀವಂತು ಕಟ್ಟಳೆಯುಮಂ ರಚಿಸಿ ಮತ್ತಂ ತಮ್ಮ ಮಾತೃ ಚನ್ನಮ್ಮಾಜಿಯವರ ತದ್ದಿವಸದೊಳ್ ಪ್ರತಿವರ್ಷ ಶ್ರಾವಣ ಶುದ್ಧ ೧೪ಯ ದಿವಸದೊಳನೇಕ ಜಂಗಮಾತಿಥಿ ಪರಮಹಂಸ ಪಕೀರ ರಾಮದಾಸ ಜೋಗಿ ಪರದೇಶಿ ಮುಂತಾದ ಜನರ್ಗನ್ನದಾನ ವಸ್ತ್ರದಾನಂಗಳಂ ಮಾಳ್ಪಂತು ಸ್ಥಿರಮಾದ ಕಟ್ಟಳೆಯುಂ ರಚಿಯಿಸಿ ಮತ್ತಂ [2] ಸ್ವರಾಷ್ಟ್ರಂಗಳೊಳಕಾಲಚಕ್ರದೊಳತ್ತುವುತ್ತಾರಪಗುದಿಯುನೆತ್ತದಂತು ನಿಯಾಮಕಮಂ ರಚಿಸಿ ಕೆಳದಿಯ ವೀರಭದ್ರದೇವಸ್ಥಾನದ ಶಿಲಾಮಯದ ಕೆಲಸಗತಿಯುಂ [3] ಸಂಪೂರ್ಣಮಾಗಿಸಿ ಮತ್ತಂ ತಮ್ಮ ಸೇವಕ ಗುರಿಕಾರ ಹರಿಕಾರರ ಮುಖದಿಂದೆಯುಮಗ್ರಹಾರಾದಿಧರ್ಮಂಗಳನಾಗಿಸಿ ಶಾಶ್ವತಧರ್ಮಕೀರ್ತಿಗಳನುಪಾರ್ಜಿಸಿದನಂತುಮಲ್ಲದೆಯುಂ ॥ ೨೦

ವಿಲಸತ್ಸಮಸ್ತಶಾಸ್ತ್ರಂ
ಗಳನುರೆ ಸಂಗ್ರಹಿಸಿ ಸರ್ವವಿದ್ವಜ್ಜನಸಂ ।

1 ವಿಶೇಷಧರ್ಮಂಗಳ್ನಡೆವಂತು ಮತ್ತಂ ವೇಣುಪುರೀ (ಖ)

2 ಸ್ವರಾಷ್ಟ್ರದೊಳತ್ತುವುತ್ತಾರಪಗುದಿಯ (ಖ)

3 ಸಾಂಗವಾಗಿ ರಚಿಸಿ (ಕ)

ಕುಲವುಂ ರಕ್ಷಿಸಿ ಧರ್ಮದೊ
ಳಳಯುಂ ಪಾಲಿಸಿದನೊಲ್ದು ಬಸವಮಹೀಶಂ[1] ॥ ೨೧

ಈ ಬಸವಪ್ಪನಾಯಕರ್ ತಮಗೆ ಪಟ್ಟವಾದ ಶಾಲಿವಾಹನ ಶಕ ವರ್ಷ ೧೬೭೦ನೆಯ ಈಶ್ವರ ಸಂವತ್ಸರದ ಶ್ರಾವಣ ಶುದ್ಧ ೧೪ಯು ಆರಭ್ಯ ಜಯ ಸಂವತ್ಸರದ ಆಶ್ವಯುಜ ....ವರ್ಷ ೧೬ ತಿಂಗಳು ೫ ದಿನ ೧೧ ಪರ್ಯಂತಂ ರಾಜ್ಯವಾಳಿದರ್.

---

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೭೬ನೆಯ ಜಯ ಸಂವತ್ಸರದ ಪುಷ್ಯ ಬಹುಳ ೧೦ಯಲ್ಲಿ ಬಸವಪ್ಪನಾಯಕರ ಜ್ಯೇಷ್ಠಪುತ್ರರಾದ ಸೋಮಶೇಖರನಾಯಕರ್ಗೆ ವೇಣುಪುರದರಮನೆಯಲ್ಲಿ ರಾಜಪಟ್ಟಂ. ಈ ಸೋಮಶೇಖರನಾಯಕರ್ ರಾಜ್ಯವಾಳಿದ ವಿವರಣವುಂ ಪದ್ಯರೂಪದಿಂ ಪೇಳ್ವೆನದೆಂತೆಂದೊಡೆ:

ಶ್ರೀಮದ್ಬಸವಮಹೀಶಲ
ಲಾಮಾನ್ವಯದುಗ್ಧವಾರ್ಧಿಪೂರ್ಣಶಶಾಂಕಂ ।
* ಸೋಮಶೇಖರನೃಪಂ ರಿಪು
ಭೀಮಂ ಬಳಿಕೆಸೆವೆ ರಾಜ್ಯರಮೆಗರಸಾದಂ ॥ ೨೨

---

1 ಈ ಬಸವಪ್ಪನಾಯಕರ ಕಾಲದಲ್ಲಿ ಖದುಕುಗಳ ಮಾಡಿದವರು :— ಪ್ರಧಾನಿ ಗುರುಬಸವಪ್ಪದೇವರು, ಗರಜಿನ ಶಾಂತದೇವರು, ಸಬ್ಬನೀಸ ಕೋಳಿವಾಡದ ಬೊಮ್ಮರಸಯ್ಯ, ಶರಜಾ ಹೂವಯ್ಯ, ಚಿಟನೀಸ ಭದ್ರಯ್ಯ, ಪಟ್ಟ ರಂಗಪ್ಪಯ್ಯ, ಪಟ್ಟ ಲಕ್ಷ್ಮೀಪತಯ್ಯ, ನೆಲ್ಲೂರ ವೆಂಕಟಪ್ಪಯ್ಯ, ಗಾಜನೂರ ಲಕ್ಷ್ಮಯ್ಯ, ಆ ಮಲ್ಲಪ್ಪಯ್ಯ, ಶರಜಾ ತಿರುಮಲಯ್ಯ, ಶರಜಾ ವೆಂಕಟಯ್ಯ, ಚಿಕ್ಕ ತಿಮ್ಮಯ್ಯನ ಕೂಸಪ್ಪಯ್ಯ, ಕೋಳಾಲದ ವೆಂಕಟಕೃಷ್ಣಯ್ಯ, ಆ ವೆಂಕಟೇಶಯ್ಯ, ಹೊನ್ನಾಳಿ ಸುಬ್ಬಯ್ಯ, ರಾಯಸದ ಅಶ್ವತ್ಥಯ್ಯ, ಶರಜಾ ನಾಗಪ್ಪಯ್ಯ, ಆ ನರಸಪ್ಪಯ್ಯ, ಚೆನ್ನಪ್ಪಯ್ಯ, ಮನೆವಾರ್ತೆ ಹುದಾರ ವೀರಪ್ಪ ಮುಂತಾದವರು.

ಈ ಬಸವಪ್ಪನಾಯಕರಿಗೆ ಬಿದುರೂರ ಕೊಪ್ಪಲ ಮಠದಲ್ಲೂ ಸಮಾಧಿಯಾಯಿತು. (ಕ)

ಅದೆಂತೆಂದೊಡೆ ಮೋನಪ್ಪಸೆಟ್ಟರ ಮಗ ನಿರ್ವಾಣಯ್ಯನವರ್, ಗುರುವಪ್ಪ, ಹುಜೂರು ಪಾರಪತ್ಯಗಾರ ಗರಜಿನ ಶಾಂತಪ್ಪೊಡೆಯರ್ ಪಡವ ಸಿದ್ದಪ್ಪ, ಮಹದೇವಪುರದ ದೇವಪ್ಪ, ಸುಬೇದಾರ ಸಿದ್ದಪ್ಪ, ಕೋಹಿಲೆ ಲಿಂಗಪ್ಪ, ಬೆಳ್ಳೂರೆ ಚನ್ನಪ್ಪಯ್ಯ, ಕರಣಿಕ ಕೋಳಾಲದ ವೆಂಕಟೇಶಯ್ಯ, ಗಾಜನೂರ ಲಕ್ಷ್ಮರಸಯ್ಯ, ಆರಗದ ಪರಮೇಶ್ವರಯ್ಯ, ಬಾರಕೂರ ಸೂರಯ್ಯ, ಜಾಪೂರ ಮಲ್ಲಪ್ಪಯ್ಯ, ರಾಯಸದ ಸೂರಯ್ಯ, ಅಶ್ವತ್ಥಯ್ಯ, ಗಂಗಾಧರಯ್ಯ, ಸಬ್ನೀಸ ಕೃಷ್ಣಪ್ಪಯ್ಯ, ಕೋಳಿವಾಡದ ಬೊಮ್ಮರಸಯ್ಯನವರ ಮಗ ತಮ್ಮರಸಯ್ಯ ಮುಂತಾದ ಮಂತ್ರಿ ಮನ್ನೆಯ ನಿಯೋಗಿ ಸಾಮಾಜಿಕಜನರ್ಗೆ ತತ್ತದ್ಯೋಗ್ಯತಾನುಸಾರಪರಿ ದುಚಿತಾಧಿಕಾರಂಗಳನಿತ್ತು ತಮ್ಮ ಜನಕ ಬಸವಪ್ಪನಾಯಕರಾಳಿಬರು ತ್ತಿದ ರಾಜ್ಯ ರಾಷ್ಟ್ರ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಪುರ ಜನ ಪರಿಜನ ಬಂಧುಜನ ಸೇವಕಜನರಂ ಸಂರಕ್ಷಿಸುತ್ತುಂ, ತಮ್ಮ ಅನುಜ ವೀರಭದ್ರನಾಯಕರಂ ಪ್ರೀತಿಯಿಂ ನಡೆಸಿಕೊಳುತ್ತುಂ, ಮಾವ ನಿರ್ವಾ ಣಯ್ಯನವರ್ಗೆ ಸರ್ವಾಧಿಕಾರವನಿತ್ತು ಸದ್ಧರ್ಮದಿಂ ರಾಜ್ಯಪ್ರತಿಪಾಲ ನಂಗೆಯ್ಯುತ್ತುಮಿರಲಾ ಕಾಲದೊಳಿತ್ತಂ ॥ ೭೩

[1] ವೈರಿಗಳುಪಟಳದಿಂ ನಮು
ಣೂರ ನಬಾಬಂ ಸ್ವದೇಶದೊಳ್ಕಿತ್ತರಿಸ ।
ಲ್ಕಾರದೆ ಸಹಾಯಮಂ ತಾಂ
ಹಾರುತೆ ರಾಯಸವನ್ನೈದೆ ಬರೆದಟ್ಟಲೊಡಂ ॥ ೭೪

ಕೋಹಿಲೆಯ ಸಿದ್ದಪನಕೂ
ಡಾಹವನಿಸ್ಸೀಮಸುಭಟರಂ ತೆರಳಿಸಿ ಸ ।
ನ್ನಾಹದೊಳ್ಪದಿದ ಶತ್ರು
ವ್ಯೂಹವನಂಕದೊಳ್ ನದೆದು ಮುರಿದೋಡಿಸುತುಂ ॥ ೭೫

1 ಮನ್ಮಥಸಂವತ್ಸರದಲ್ಲು (ಕ)

ಕುಜನರನಲೆದು ಬಳಿಕ್ಕಂ
ನಿಜಪದದೊಳ್ ತನ್ನ ಬಾಬನಂ ನಿಲಿಸಿ ನೃಪ ।
ವ್ರಜದೊಳ್ಮಿಗೆ ಪರಮೋನ್ನತ
ಭುಜಬಲಮಂ ಮೆರೆದನಾನೃಪಾಲಕವರ್ಯಂ ॥ ೨೬

ಆ ಸವಣೂರ ಸಂಸ್ಥಾನಮಂ ಕ್ರಮದಿಂ ಮುನ್ನಾಳ್ದ ವಿಜಾಪುರದ ಪಾತುಶಾಹರ ಬಗೆ:—ವಜೀರ ರಗಟೀ ಬಲೂಲಖಾನಂ ; ಅವನ ಮಗಂ ಚಿಕ್ಕ ಬಬೂಲಖಾನಂ ; ಅವನ ಮಗನಬ್ದುಲ್ಲರಹೊ ಯೆಂಬವಂ ; ಡಿಳ್ಳಿಯ ನರಂಗಜೇಬ ಪಾತುಶಾಹಂ ವಿಜಾಪುರದ ಸಂಸ್ಥಾನಮಂ ಸ್ವಾಧೀನಂಗೈದನಂತರಮಾ ಅಬ್ದುಲ್ಲರಹೋ ಯೆಂಬವಂಗೆ ದಿಲಾಲನೆಂದು ಪ್ರತಿನಾಮವನಿತ್ತು ನೀಂ ಮಲೆನಾಡು ಮುಂತಾದ ದಾಕ್ಷಿಣಾತ್ಯ ರಾಜ್ಯದ ಮೇಲುಪರಾಂಬರಿಕೆಯೊಳಿಹುದೆಂದು ನಿಯಾಮಕಂ ಗೆಯ್ದು ನಿಲಿಸಲವಂ ತತ್ಸವಣೂರೊಳ್ ಬಲಿಷ್ಠನಾಗಿ ನಿಂದಂ. ಆ ದಿಲಾಲನ ಮಕ್ಕಳ್ ಆಬ್ದುಲ್ಲಮಹಮ್ಮದ್, ಕರೀಮ, ಸತಾರ, ಗಫಾರರೆಂದು ನಾಲ್ವರ್; ಅವರೊಳ್ ಗಫಾರನ ಮಗಂ ಮದೀಜಂ ; ಇಂತಿವರ್ಸವಣೂರನಾಳ್ದವರ್ ; ಇಂತು ನೆಗಳ್ತೆವೆತ್ತ ಸವಣೂರ ನಬಾಬನ ವಂಶಸಂಜಾತರೊಳ್ ಆಬ್ದುಲ್ಲಮಹಮ್ಮದ್ಖಾನನ ಶತ್ರುವರ್ಗಮಂ ವಾರೆದೆಗೆಸಿ ಸಂಸ್ಥಾನದೊಳ್ನಿಲಿಸಿ ಸವಣೂರ ನಬಾಬಂ ಕಳುಪಿದ ಪತ್ತೆಲಸ್ಕರಿ ಯೆಂಬಾನೆ ತುರುಗ ವುಚಿತ ವುಡುಗೊರೆಗಳಂ ಪರಿಗ್ರಹಿಸಿ ಪರಮ ಪ್ರಖ್ಯಾತಿಯಂ ಪಡೆದನಂತುಮಲ್ಲದೆಯುಂ ॥ ೨೭

ಸೀಮೋಲೋಕನದಿಚ್ಛೆಯಿಂ ಜಡೆಯಕ್ಕೈತಂದಲ್ಲಿರಲ್ಕೇಳ್ದತಿ
ಪ್ರೇಮಂಬೆತ್ತು ಸಮಸ್ತಸೈನ್ಯಸಹಿತಂ ಪುತ್ರಾದ್ಯರಿಂ ಕೂಡಿಯುಂ ।
ತಾಮೆಳ್ತಂದು ಸದಾಶಿವೋರ್ವಿಪತಿಯಂದಾ ಸೋದೆಯಿಂ ಬೇಟಿಗೊಂ
ಡಾಮಾನೋನ್ನತಸೋಮಶೇಖರಧರಾಭೃಚ್ಛೌರ್ಯಮಾರ್ತಾಂಡನಂ ॥

ಇಂತು ಸೋದೆಸದಾಶಿವನಾಯಕಂ ತಾನೈತಂದು ಗುಡ್ಡಾಪುರದ ಕೆರೆಯ ಬಯಲೊಳ್ 1 ಭೇಟಿಯಂಕೊಂಡನಂತರಂ ॥ ೨೮

1 ಬಳಿಯೊಳ್ (ಬ)

ಕರದೊಯ್ದು ವಾನವಾಸೀ
ಪುರದೊಳ್ಮಜ್ಜನಸುಭೋಜನಾದ್ಯುಪಚಾರೋ |
ತ್ಕರದಿಂ ಮನ್ನಿಸಿ ದಿವ್ಯಾಂ
ಬರಭೂಷಣಗಜಹಯಾದಿಗಳನೊಸೆದಿತ್ತಂ || ೩೦

ಅವನಂಗೀಕರಿಸಿ ಬಳಿ
ಕ್ಕವನಿಪಕುಲತಿಲಕ ಸೋಮಶೇಖರಭೂಪಂ |
ತನೆ ಸೇವೆಯ ನಭಿವೀಕ್ಷಿಸು
ತವಿಳಂಬವರ್ಷದೊಳ್ ವೇಣುಪುರಮಂ ಪೊಕ್ಕಂ || ೩೧

ಮತ್ತಮದಲ್ಲದೆ ಹೇವಿಳಂಬಿ ಸಂವತ್ಸರದೊಳ್ || ೩೨

* ದುರುಳ್* ವ್ಯಸೂರಿ ಮನ್ನೆಯ
ನುರುಮದಮಂ ತವಿಸವೇಳ್ಕನುತ್ತಗ್ರಜನೊಳ್ |
ಗುರುವಪನಾಳೋಚನೆಯಂ
ವಿರಚಿಸಿ ತದ್ರಾಜಕಾರ್ಯಮಂ ಮಿಗೆ ತೊಡಗಲ್ || ೩೩

ಬಲವತ್ಸಹಾಯವಿಲ್ಲದೆ
ನೆಲೆಗೊಳದೀ ಕಾರ್ಯಮಾಸಹಾಯಕೆ ತಮ್ಮಿಂ |
ತೊಲಗದೆ ನಿಲ್ವೊಡಮೊರ್ವಂಗೆ
ಬಿಳಿಜೋಡಿಯ ಬರಮನಾಯಕನೆ ಮಿಗೆ ಪಾತ್ರಂ || ೩೪

ಎಂದಾಳೋಚನೆಯಂ ತಾಂ
ಕುಂದದೆ ನಿಶ್ಚಯಿಸಿ ರಾಯಸದ ಸೂರಪಗಾ |
ಪೊಂದಿಗೆಯನೊರೆದು ಬೀಳ್ಕೊಡೆ
ಮುಂದಾಗಿರಲಾತನೈದಿ ಚಿಂತನಕಲ್ಲಂ || ೩೫

ಬರಮಣನಾಯಕನಂ ಕಂ
ಡೊರೆಯಲ್ಕೀ ರಾಜಕಾರ್ಯದಿರವನೊಪಂಬ |
ಟ್ಟಿರುವವೊಲಂತಾಗಲ್ಕಂ
ದೊರೆಯಲ್ಲಿಟಿವೆಂದು ಸೂರಪಂ ಬರೆದಟ್ಟಲ್ || ೩೬

ಕುಟಿಲನೆಂದರಿಯದಾನುಡಿ
ದಿಟಮೆಂದೇ ಬಗೆದು ನಂಬಿ ಗುರುವಪನಾಗಲ್ ।
ಕಟಕಸಹಿತೈದಿ ಬೇಟೆಯ
ನಟನೆಯೊಳಂ ಕೊಂಡು ಚನ್ನಗಿರಿಗಡಿಯೆಡೆಯೊಳ್ ॥ ೩೭

ಇಂತು ಬೇಟೆಗೊಂಡು ಮುಂತಣ ರಾಜಕಾರ್ಯವಿಷಯಂಗಳನೊರೆದಿದಕ್ಕೆ ನೀಂ ಸಹಾಯಮುಮಂ ವಿರಚಿಸಿದೆಯಾದೊಡೆ ಸೂರಯ್ಯನಕೂಡೊರೆದುಕಳುಪಿದಂತೆ ನಿನ್ನ ಕಜ್ಜಂಗಳೇನಿರ್ದೊಡಂ ವಹಿಸಿ ನಡೆಸಿದಪೆವಾವುದರಲ್ಲಿಯುಂ ನಾವಿರ್ವರುಮೇಕಮತರಾಗಿ ಮಾಯಾವಿಗಳ ಮದನಿವಾರಣಮಂ ಮಾಳ್ಪವೆಂದುಸಿರಲೀಮಂತ್ರಾಳೋಚನೆಯಂ ಕೇಳ್ದದಕ್ಕೆ ಮಾರುತ್ತರಂಗೊಡದಾ ಬರಮನಾಯಕನತ್ಯಂತದುರಾಸೆ ಪುಟ್ಟೆ ವಕ್ರೋಕ್ತಿಗಳಂ ನುಡಿದು ವಾಗ್ವಾದದಿಂ ಕೆಣಕಿ ಗಜಬಜಮಂ ಪುಟ್ಟಿಸಿ ಮುನ್ನಂ ಮಾಡಿದ ತಹಬಂದುಕಟ್ಟುಗಳ್ಮುರಿದುವೆಂಬ ಭಾವಮಂ ಮಾಡಿ ಮುನ್ನೊರೆದಂತಸಿಬಲದಿಂ ತನ್ನೆಡೆಗೈತಂದ ಗುರುವಪಮಂತ್ರಿಯುಂ ವೇಢೈಸವೇಳ್ಕೆಂದು ಯೋಚಿಪುದರೊಳ್ ಸಂಧಿ ವಿಸಂಚಿಸಲಾಗಳಾ ಅವನ ಕಪಟವೃತ್ತಿಯಂ ಗುರುವಪಮಂತ್ರಿಯರಿದಾಗಣ ವೇಳೆಯೊಳವನೇನೇನನಪೇಕ್ಷಿಸಿನುಡಿದನದಕಂತಾಗಲಿದೇತರಕಜ್ಜಮೆಂದೊಡಂಬಟ್ಟಾತನಾಗಿ ತತ್ಕಿರಾತಪತಿಯೊಳ್ಮಧುರವಚನಮಂ ನುಡಿದಧಿಕಮಾದುಡುಗೊರೆವುಚಿತಗಳನಿತ್ತುಪಿರಿದು ಮನ್ನಿಸಿ ಕಳುಹಿ ತಾಂ ಪಿಂದೆಗೆದು ಬಂದು ಕತಿಪಯದಿನಂಗಳ್ಪೋಗಲೊಡನೆ ॥ ೩೮

ಧುರಧೀರಂ ಚಿಂತನಕ
ಲ್ಲರೆಯಂ ಬಿಳಿಚೋಡಿಬರಮನಾಯಕನೆಸೆವಾ ।
ಹರಪುರದರಸನ ಸುಪರಿ
ಸ್ತರಣಗಳಂ ಕೊಂಡು ದಾಳಿಯಿಡಲತಿಚಲದಿಂ ॥ ೩೯

ಪಿಂತೆ ಕ್ರಮದಿಂ ಚಿಂತನಕಲ್ಲುದುರ್ಗದ ಸಂಸ್ಥಾನಮಂ ಕಸ್ತೂರಿತಿಮ್ಮಪ್ಪನಾಯಕ, ಸರ್ಜಪ್ಪನಾಯಕ, ಹಿರಿಯಚಿಕ್ಕಣ್ಣನಾಯಕ, ಹಿರಿಯಮೆದಕೆರೆನಾಯಕ, ಮೆದಕೆರೆನಾಯಕ, ಚಿಕ್ಕಣ್ಣನಾಯಕ,

ಮೆದಕೆರೆನಾಯಕ, ರಂಗಪ್ಪನಾಯಕ, ರಘುವೆಪ್ಪನಾಯಕ, ರಂಗಪ್ಪನಾಯಕರೆಂಬುವರಾಳ್ದರ್. ಆತರುವಾಯುವೊದುರ್ಗವನಾಳುತಿರ್ದ ಬಿಳಿಚೋಡಿಬರಮನಾಯಕನತ್ಯಂತಗರ್ವೋದ್ರೇಕದಿನಾದಿಯೊಳುಚ್ಚಂಗಿಯೆಂಬ ಸ್ಥಳದೊಳಿರ್ದನಂತರಂ, ಹರಪುರ(ಪ್ರತಿನಾಮ ಹರಪನಹಳ್ಳಿ)ವೆಂಬ ಕೋಟೆಯಂ ಬಲಿಸಿ ಆಕೋಟೆಯೊಳಿರ್ದು ರಾಜ್ಯಂಗೆಯ್ದು, ದಾದೆನಾಯಕ, ರಂಗರಾಜಯ್ಯ, ಹಿರಿಯಬಸಂತರಾಯ, ಇಮ್ಮಡಿಬಸವಪ್ಪನಾಯಕ, ಕೊಟ್ಟೂರಪ್ಪನಾಯಕ, ಹಿರಿಯಬಸವಪ್ಪನಾಯಕ, ಕೊಟ್ಟೂರಪ್ಪನಾಯಕರೆಂಬಿವರಾಳ್ದನಂತರಂ ಬಸವಪ್ಪನಾಯಕನಾಳ್ದು ಬರುತ್ತಿರಲ್ (ಮುಂಪೇಳ್ದ ಚಿಂತನಕಲ್ಲುಬರಮಣ್ಣನಾಯಕಂ) ಆ ಹರಪನಹಳ್ಳಿಬಸವಪ್ಪನಾಯಕನ ಪರಿಸ್ತರಣಗಳಂ ಕೊಂಡು ರಾಜ್ಯಂಗಳನಾಕ್ರಮಿಸುತ್ತುಂ ಮಿಕ್ಕುಮೀರಿ ಕೈಗೆಯ್ಯುತ್ತುಂ ಬರಲಾ ಬರಮನಾಯಕನ ದಟನಾಂಪೊಡಶಕ್ಯಮಾಗಿ ಹರಪನಹಳ್ಳಿಯ ಬಾಗಳಿಬಸವಪ್ಪನಾಯಕಂ ದೈನ್ಯೋಕ್ತಿಯಿಂ ರಾಯಸಮಂ ಬರೆದು ಕಳುಪಿ ತಮ್ಮ ಸಂಸ್ಥಾನಮಂ ನುದ್ಧರಿಸವೇಳ್ಕುಂದು ಪೇಳಿಸಲಂತಾಗಲೆಂದು ಗುರುವಪ್ಪ ಮಂತ್ರಿಯೊಡನಸಂಖ್ಯಾತಮಾದ ಸೈನ್ಯಮಂ ತೆರಳ್ಚಿ ಕಳುಹಿ ಯುದ್ಧರಂಗದೊಳಾ ಬರಮನಾಯಕನ ಪರಾಕ್ರಮಾತಿಶಯಮಂ ಮುರಿದಾ ಪರಿಸ್ತರಣಗಳಂ ಕೊಂಡು ಬಸವಪ್ಪನಾಯಕಂಗಿತ್ತು ಪರಮಪ್ರಖ್ಯಾತಿಯಂ ಪಡೆದಿಂತಿರುತ್ತುಮಿರಲ್ಮಿಗುಳ್ದು ಬರಮನಾಯಕಂ ಗುತ್ತಳದ ಹನುಮಂತಗೌಡಂ ಹಿಂದೂರಾಯರ ವಂಶೋದ್ಭವನಾದ ಸಿದ್ದೋಜಿ ಮುಂತಾದವರಂ ಸಹಾಯಕ್ಕೆ ಬರಿಸಿಕೊಂಡೈದಿ ರಣರಂಗಕಿದಿರ್ಚಿ ನಿಲಲಾಹವದೊಳಾ ಹನುಮಂತಗೌಡನಂ ಮಸೆಗಾಣಿಸಿಯನಂತರಂ ॥ ೪೦

ಚಿಂತನಕಲ್ಲರಸನ ಮದ
ಮಂ ತಗ್ಗಿಸಿ ಧುರದೊಳಾಂತ ಸಿದ್ದೋಜಿಯರಸ ।
ದ್ದಂತಿಯುಮಂ ಪಿಡಿದೊಪ್ಪುವ [1]
ಸಂತೆಯಬೆನ್ನೂರ ಕೋಟೆಯಂ ವಶಗೈದಂ ॥ ೪೧

---

1 ಹೇವಿಳಂಬಿಸಂವತ್ಸರದ ಮಾಘಮಾಸದಲ್ಲು (ಕ)

ಇಂತು ಚಿಂತನಕಲ್ಲ ಬರಮನಾಯಕನ ಪದಮಂ ತಗ್ಗಿಸಿ ಸಂತೆಬೆನ್ನೂರ ಕೋಟೆಯುಂ ಕೊಂಡು ಸುಖದಿಂ ರಾಜ್ಯವಾಳುತ್ತಿರಲಾಪ್ರಸ್ತಾವದೊಳ್ ॥ ೪೨

ಮರಳ್ದಾ ಬರಮಣನಾಯಕ
ನುರುಬೆಗೆ ನಿತ್ತರಿಸಲಮ್ಮದಳವಳಿದು ತರೀ ।
ಕೆರೆರಾಯದುರ್ಗದರಸ
ಮರ್ಗೆರೆವುಗೆ ಮನ್ನಿಸುತುಮಭಯಮಿತ್ತತ್ರಿಪಯೆಯಿಂ ॥ ೪೩

ಇಂತಭಯಮಿತ್ತ್ರಪರಿಮಿತಸೇನಾಸಮೂಹಮಂ ತೆರಳ್ಚಿ ಕಳುಹಿ ಬರಮನಾಯಕಂಗೆ ಸಹಾಯಮಾಗಿ ಬಂದ ದರದಾಖುಲ್ಲಿಯಂ ಯುದ್ಧದೊಳ್ಪಿಂದೆಗೆಸಿ ತರಿಕೆರೆಯ ಸಂಸ್ಥಾನಮಂ ಕ್ರಮದಿಂ ಮುನ್ನಾಳ್ದ ಕಾಪಿನಾಯಕ, ಬುಳ್ಳನಾಯಕ, ಕೆಂಗಾನಾಯಕ, ರಡ್ಡಿ ಹನುಮಪ್ಪ ನಾಯಕ, ಕುಂಟ ಹನುಮಪ್ಪನಾಯಕ, ಇಮ್ಮಡಿ ಹನುಮಪ್ಪನಾಯಕ, ಸಿಚ್ಚ ಮದವಣಿಗ ಹನುಮಪ್ಪನಾಯಕ, ಶರಜಾ ಹನುಮಪ್ಪನಾಯಕ, ಸೀತಾರಾಮಪ್ಪನಾಯಕ, ಪಟ್ಟಾಭಿರಾಮಪ್ಪನಾಯಕರೆಂಬಿವರಾಳ್ದನಂತರಮಾಸಂಸ್ಥಾನಮನಾಳುತಿರ್ದ ಹನುಮಪ್ಪನಾಯಕನುಮಂ, ರಾಯದುರ್ಗದ ಸಂಸ್ಥಾನಮಂ ಕ್ರಮದಿಂ ಮುನ್ನಾಳ್ದವರನಂತರಮಾಸಂಸ್ಥಾನಂ ವಿಸ್ಖಲಿತಮಾಗುತ್ತಿರಲ್ಸಹಾಯಮಾಗಿ ಬಂದದರರಸನುಮಂ, ಇಂತುಭಯಸಂಸ್ಥಾನಾಧಿಪತಿಗಳುಮಂ ಸ್ವಸ್ಥಾನಂಗಳೊಳ್ ನಿಲಿಸಿ ಪರಮಪ್ರಖ್ಯಾತಿಯುಂ ಪಡೆದನಂತುಮಲ್ಲದೆಯುಂ ॥ ೪೪

ಶೃಂಗಪುರಸ್ವಾಮಿಗಳು
ತ್ತುಂಗಮೆರಕ್ಕಧಿಕಮಾದ ಋಣಮಾಗಿರೆ ತ ।
ತ್ಸಂಗತಿಯುಂ ಕೇಳ್ದಕ್ಷಿಗೆ
ಪಿಂಗದೆ ಶರಜಾಖ್ಯವೆಂಕಟಯ್ಯನೊಲವಿಂ ॥ ೪೫

ತೆರಳಿಸುತುಂ ಪ್ಲವಸಂವ
ತ್ಸರದೊಳ್ ಶೃಂಗೇರಿಯಿಂದೆ ತತ್ಸ್ವಾಮಿಗಳಂ ।

ಬರಿಯಿಸಿ ತಚ್ಛೃತ್ರದ ಭೂ
ಸುರವೋಚಕಪಕ್ಷದಾತ್ರಯೋದಶಿದಿನದೊಳ್ ॥ ೪೬

ಇಂತು ಶೃಂಗಪುರದಿಂ ಸಚ್ಚಿದಾನಂದಭಾರತೀಸ್ವಾಮಿಗಳಂ ಬರಿಸಿ ಬಣ್ಣದ ಚಾವಡಿಯು ಸದರೊಳ್ ಬೇಟಿಗೊಂಡು ಭಿಕ್ಷಾದ್ಯುಪಚಾರಂಗಳಂ ನಿರ್ಮಿಸಿ, ಋಣಭಾರಮಂ ತೀರ್ಚಿಯಧಿಕಸನ್ಮಾನಂಬಡಿಸಿ ತೆರಳ್ಚ ಕಳುಪಿ, ಬಳಿಕಾಪ್ಲವಸಂವತ್ಸರದ ಮಾರ್ಗಶಿರ ಶುದ್ಧ ತದಿಗೆಯೊಳ್ ತಮ್ಮನುಜರಾದ ವೀರಭದ್ರನಾಯಕಗೊರ್ವ ಕುಮಾರನುದಿಸಲಾ ಕುಮಾರಂಗೆ ಬಸವಪ್ಪನಾಯಕನೆಂದು ನಾಮಕರಣಮಂ ರಚಿಸಿ ಪೋಷಣೆಯಂ ಮಾಡಿ ಅಧಿಕವ್ಯಾಮೋಹದಿಂ ನಡೆಸಿಕೊಳುತ್ತುಂ ಮತ್ತಮಾ ಸಂವತ್ಸರದ ಫಾಲ್ಗುಣ ಬಹುಳ ತದಿಗೆಯೊಳ್ ನಿರ್ವಾಣಯ್ಯನವರ ಕುಮಾರಿ ನೀಲಮ್ಮಾಜಿಯುವರನತ್ಯಂತೋತ್ಸವದಿಂ ವಿವಾಹವಾಗಿ ಸುಖಮಿರುತಿರ್ದು ॥ ೪೭

ಮಗಗಂ ಪೆಸರಿಟ್ಟರೆ ಪದ
ಯುಗದರ್ಶನಗೈದ ಹರಪುರಾಧೀಶ್ವರಗಂ ।
ದಗಣಿತಪೊನ್ನಡಂಗೋರೆತೊಡ
ವುಗಳನವನಿತ್ತು ಪೆರ್ಮೆಯಿಂ ಮನ್ನಿಸಿದಂ ॥ ೪೮

ಇಂತು ಮನ್ನಿಸಿದನಂತರಮಾಹರಪುರದ ಸಂಸ್ಥಾನಕ್ಕೊದಗಿದ ಹೇರಳಋಣಭಾರಮಂ ತೀರ್ಚಿ ಕಳುಪಲಾವಾರ್ತೆಯಂ ಕೇಳು ಸೇನಾಸಮೂಹಂವೆರಸ್ಯೆತಂದ ಗುತ್ತಳದ ಹನುಮಂತನಾಯಕನಂ [1] ಗಗನಮಹಲ ಚಾವಡಿಯೊಳ್ ಬೇಟಿಗೊಂಡು [2] ಸನ್ಮಾನಂಬಡಿಸಿ ತೆರಳ್ಚಿಸಿದನಂತರಂ ॥ ೪೯

---

1 ಗೌಡನಂ (ಬ)

2 ತದೃಣಭಾರಮಂ ತೀರ್ಚಿಸಿ ಕಳುಪಲೀವಾರ್ತೆಯಂಕೇಳ್ದನಂತರಮೈತಂದ ಬಳ್ಳರೆ ಶೋಭಕೃತ್ಸಂವತ್ಸರದ ಆಶ್ವೀಜ ಬಹುಳ ೩ ಯಲ್ಲು ರಾಮಪ್ಪನಾಯಕನನಧಿಕಸನ್ಮಾನಂಬಡಿಸಿ (ಕ)

ಶುಭಕೃದ್ವತ್ಸರದೊಳ್ಭಿ [1]
ವಿಭು ತಾಂ ಕೊಲ್ಲೂರಿಗೈದಿ ಮೂಕಾಂಬಿಕೆಯಂ ।
ವಿಭವದೆ ಪೂಜಿಸಿ ಬೀಳ್ಕೊಂ
ಡಭಿವೃದ್ಧಿಯನೀವ ಕೆಳದಿಪುರಮಂ ಸಾರ್ದಂ ॥ ೫೦

ರಾಮೇಶವೀರಭದ್ರ
ಸ್ವಾಮಿಯಪದಯುಗವ ಭಜಿಸಿ ಬಳಿಕಲ್ಲಿಂದಂ ।
ಸೋಮಶೇಖರನೃಪಂ ತೆರ
ಳ್ದಾ ಮಂಜುಲವೇಣುಪುರವನಂದುರೆ ಸಾರ್ದಂ ॥ ೫೧

ಅಲ್ಲಿಂ ತೆರಳ್ದು ತನ್ನೃಪ
ಮಲ್ಲಂ ತಾಂ ತೀರ್ಥರಾಜಪುರಕ್ಕೈದಿ ಬಳಿ ।
ಕ್ಕಲ್ಲಿಂದಂ ಮುಂತೈದಿ ಸ
ಮುಲ್ಲಾಸದೆ ಶೃಂಗಪುರವನಂದುರೆ ಸಾರ್ದಂ ॥ ೫೨

ಮತ್ತಮದಲ್ಲದಾ ಸೋಮಶೇಖರರಾಜೇಂದ್ರಚಂದ್ರಂ ಶೃಂಗಪುರದೊಳ್ ಶಾರದಾಂಬಾಪೀಠಸನ್ನಿಧಿಯೊಳ್ ಸೇವ ಚೌಕಿಯೊಳ್ ಸರ್ವಸಂಭ್ರಮದಿಂ ಸಚ್ಚಿದಾನಂದಭಾರತೀಸ್ವಾಮಿಯವರಂ ಬೇಟಿಗೊಂಡಾಪುರದೊಳ್ ನಾಲ್ದಿವಸಮಿರ್ದಾಯತೀಂದ್ರನನುಚಿತಮಾದುಡುಗೊರೆಮುಂತಾದುಪಚಾರಗಳಿಂ ಸನ್ಮಾನಿಸಿಯವರಿಂ ತಾನುಂ ಸನ್ಮಾನಂಬೆತ್ತನಂತರಮಲ್ಲಿಂ ತೆರಳ್ದು ॥ ೫೩

ಚಳಕದೆ ಕಳಸದ ಘಟ್ಟವ
ನಿಳಿದಾ ಭೂಮೀಶವರ್ಯ ಸುಬ್ರಹ್ಮಣ್ಯಾ ।
ಸ್ಥಳಕೈದಿ ಪೆರ್ಮೆಯಿಂ ಮಂ
ಜುಳಸುಬ್ರಹ್ಮಣ್ಯದೇವರಂ ಭಜಿಯಿಸಿದಂ ॥ ೫೪

ಪೊರಮಟ್ಟಲ್ಲಿಂ ಕೋಟೀ
ಶ್ವರಕ್ಕೈದುತೆ ದಿವ್ಯಕೋಟಿಲಿಂಗೇಶ್ವರನಂ ।

1 ಶುಭಕೃತುಸಂವತ್ಸರದ ಆಶ್ವೀಜ ಬ ೫ ಲ್ಲು ವಿಭುತಾಂ (ಕ)

ಧರಣೀಶಂ ಪೂಜಿಸಿ ವಸು
ಪುರದೆ ಮಹಾದೇವಲಿಂಗಮಂ ಭಜಿಯಿಸಿದಂ ॥ ೫೫

ಅಲ್ಲಿಂದಂ ತೆರಳ್ದೊಪ್ಪುವ
ಕೊಲ್ಲೂರಿಂಗೈದಿ ತನ್ನೃಪಾಲಂ ಪುರಜಿ ।
ದ್ವಲ್ಲಭೆ ಮೂಕಾಂಬೆಯ ಪದ
ಪಲ್ಲವಮಂ ಪರಮಭಕ್ತಿಯಿಂದರ್ಚಿಸಿದಂ ॥ ೫೬

ಬಳಿಕಲ್ಲಿಂ ಗೋಕರ್ಣ
ಕ್ಕೆಳದಾ ಕ್ಷೇತ್ರದ ಮಹಾಬಳೇಶ್ವರನಂ ತಾಂ ।
ನಲವಿಂದರ್ಚಿಸಿ ಕೇರಳ
ಕಿಳದೊಡನೆಳ್ತಂದು[1] ವೇಣುಪುರಮಂ ಸಾರ್ದಂ ॥ ೫೭

ಮತ್ತಮದಲ್ಲದಾನೃಪಾಲಪುಂಗವಂ ಪರಶುರಾಮಕ್ಷೇತ್ರದತ್ತಣಿಂ ಮಾತೃಗಳ್ವೆರಸಿರ್ದಪೂರ್ವಕುಮಾರರಂ ಬರಿಸಿಯವರ್ಗೆ ಷಡಕ್ಷರಿ ಪಂಚಾಕ್ಷರಿ ಯೆಂದು ಪೆಸರಿಟ್ಟು ಲಿಂಗಧಾರಣಮಂ ಮಾಡಿಸಿ ಪೋಷಿಸಿಯವರ್ಗೆ ವಿದ್ಯಾಭ್ಯಾಸಮಂ ಮಾಡಿಸಿ ಷಡಕ್ಷರಿಯೆಂಬ ಸಣ್ಣವನ ವಾಕ್ಪಟುತ್ವಮಂ ನೋಡಿ ಚಿತ್ತಾಸಕ್ತಿಯಿಟ್ಟು ವರ್ತಿಸುತ್ತಿರ್ದೊಂದವಸರದೊಳ್ ॥ ೫೮

[2] ರಾಣೋಜೀನ್ಸೋರ್ಪಡೆಯಂ
ಮಾಣದೆ ತಾಂ ಪೈಜೆಯುಳ್ಳಿಖಾನಂವೆರಸ ।
ಕ್ಷೀಣಬಲನೈದಿ ರಾಜ್ಯ
ಪ್ರಾಣಿಗಳಂ ಭಾಧಿಸುತ್ತುಮೊಳಪುಗಲಾಗಲ್ ॥ ೫೯

ಸಂಗರರಂಗದೊಳವರಂ
ಭಂಗಿಸಿ ಪಿಂದೆಗೆಸಿ ಚತುರನಹ ರಾಯಸದಾ ।

---

1 ಕ್ರೋಧಿಸಂವತ್ಸರದವೈಶಾಖ ಬ ೩ ಯೊಳ್ (ಕ)
2 ಆನಂದಸಂವತ್ಸರದಲ್ಲಿ. (ಕ. ಬ.)

ಗಂಗಾಧರಯ್ಯನ ಮುಖದೆ
ಪೊಂಗಳುಮಂ ಕೊಡಿಸಿ ಸೀಮೆಯುಂ ದಾಂಟಿಸಿದಂ ॥ ೬೦

ಮತ್ತಮದಲ್ಲದೊಂದವಸರದೊಳ್ ತರಿಕೆರೆಯರಸನಪ್ಪ ಪಟ್ಟಾಭಿರಾಮಪ್ಪನಾಯಕನಿಂ ದಿವಾಣಕ್ಕೆ ಸಲ್ವರ್ಥಕ್ಕೋಸುಗಂ ದರದಾಖುಲ್ಲಿಯೆಂಬ ವಜೀರಂ ಭೂರಿಸೈನ್ಯಂವೆರಸೆಳ್ತಂದು ಸೀಮೆಯುಂ ಲೂಟಿಸಿ ತರಿಕೆರೆಗಿಳಿದು ಪರಮೋಪದ್ರವಮಂ ರಚಿಸುತ್ತಿರಲಲ್ಲಿಗೆ ಸೈನ್ಯಮಂ ತೆರಳ್ಚಿಸಿ ಕಳುಪಿ ಅವನಿಂ ಸಲ್ವರ್ಥಮಂ ತಾನೆ ವಹಿಸಿಕೊಂಡು ಕೊಡಿಸಿ ದರದಾಖುಲ್ಲಿಯುಂ ಪಿಂದೆಗೆಸಿ ಪಟ್ಟಾಭಿರಾಮಪ್ಪನಾಯಕನಂ ಸಂಸ್ಥಾನದೊಳ್ನಿಲಿಸಿ ಪ್ರಖ್ಯಾತಿಯುಂ ಪಡೆದನಂತುಮಲ್ಲದೆಯುಂ ॥ ೬೧

ಸೇನಾಸಮೂಹಕೊಪ್ಪಿಗೆ
ತಾನಪ್ಪಂತೇಕಕಾಲದೊಳ್ವಿಕ್ರಯಕಂ ।
ದಾನ್ಯಪವೆರನಿಪ್ಪತ್ತೊಂ
ದಾನೆಗಳಂ ಕೊಂಡು ಪಾಕರವನಾಗಿಸಿದಂ ॥ ೬೨

ಆರೆಯುಗ ಮೊಗಲರುಪಟಳ
ಕಾರದೆಯುಳವೆಳದು ರಾಯದುರ್ಗದ ರಾಜಂ ।
ಹಾರಿ ಸಹಾಯುವ ದೈನ್ಯಂ
ದೋರಿಯೆ ಬಿನ್ನವಿಸಿ ಕಳುಹೆ ಕೇಳ್ದವನಾಗಳ್ ॥ ೬೩

ಹಾರೋವೇದಪನಂ ನ
ಲ್ಲೂರಾ ಲಕ್ಷ್ಮೀಪತಿಪ್ರಮುಖಸಚಿವರುಮಂ ।
ಆರೈದವರಿರ್ವರೊಡನೆ
ವಾರಣತುರಗಾದಿಸೈನ್ಯಮಂ ತೆರಳಿಸುತಂ ॥ ೬೪

* ಸಮರಸಂಧಾನಮುಖದಿಂ
ದಮದಾರೆಯುರಂ ತುರುಷ್ಕಸೈನ್ಯವ್ರಜಮಂ ।
* ಕ್ರಮದೆ ಪಿಂದೆಗೆಸಿ ಧಾತ್ರೀ
ರಮಣರೊಳತ್ಯಂತಕೀರ್ತಿಯುಂ ಮಿಗೆ ಪಡೆದಂ ॥ ೬೫

ಮೆತ್ತಮದಲ್ಲದೆ, ಪುಂಗನೂರಾಣ್ಮನಾಸೋಮಶೇಖರನಾಯಕನ ಪಾಲನ ಪ್ರಭಾವಾತಿಶಯಮಂಕೇಳ್ದು ತನಗಿವರೊಳಗಣನುಸಂಧಾನವಿದ್ದೊಡೆ ಬಲವಾಗಿರ್ದಪುದೆಂದಾಳೋಚಿಸಿ ಅದಕ್ಕೆ ತಕ್ಕಂತುಚಿತಲಿಖಿತಮಂ ಬರೆಸಿ ನಿಯೋಗಿಗಳಂ ಕಳುಪಿರಲವರ್ಗಳಂ ಮನ್ನಿಸಿ ದಿಲಾಸನಿತ್ತು ರಾಯಸಮಂ ಬರೆಸಿ ಚಿನ್ನಭಂಡಾರದ ರಂಗಪ್ಪಯ್ಯನ ಕಯ್ಯೊಳುಚಿತವುಡುಗೊರೆಗಳನಿತ್ತು ಕಳುಪಿಯುವರ ಮನದಿಷ್ಟಮಂ ಸಲ್ಲಿಸಿದನಂತುಮಲ್ಲದೆಯುಂ ॥ ೬೬

ಮುರುಳರಪ ನಾಯಿಂಮಾರರ
ನುರುಕೂಡಿಸಿ ಕುಹಕಗೆಯ್ಯುತಿಪ ಕುಂಬಳೆಯೂ ।
ವರಸಾಮಂತರನುರೆ ಪಿಡಿ
ತರಿಸುತೆ ದುರ್ಗದೊಳಗಂಕೆಯಂ ಮಾಡಿಸಿದಂ ॥ ೬೭

ತೊಳಪರ್ಕಲಗೋಡರಸುಗ
ಳೊಳತೋಟಿಯು ನಿಲಿಸಿ ವೆಂಕಟೇಂದ್ರನನಲ್ಲಿಂ ।
ತಳುವದೆ ಬರಿಯಿಸಿ ತದನುಜ
ಗೊಲವಿಂದಂ ರಾಜ್ಯಪಟ್ಟಮಂ ಕಟ್ಟಿಸಿದಂ ॥ ೬೮

ಇಂತು ಬೇಲೂರ ಸಂಸ್ಥಾನದೊಳುನ್ಮದಾವಸ್ಥೆಯಿಂದವ್ಯವಸ್ಥಿತನಾಗಿ ವರ್ತಿಸುತಿರ್ದ ವೆಂಕಟಾದ್ರಿನಾಯಕನಂ ಕದಲ್ಚಿ ತದನುಜಗೋಪಾಲನಾಯಕನಂ ಸಂಸ್ಥಾನದೊಳ್ ನಿಲಿಸಲ್ ತದೀಯನಿಯೋಗಿಮಲ್ಲಪನ ಕುಮಂತ್ರದಿಂದೈದಿದ ಮಾಯಾವಿಗಳ ಸೈನ್ಯಮಂ ಕೂಡಿಕೊಂಡೈದಿದ ಸುಬ್ಬರಾಯನೆಂಬ ಸೇನಾಧಿಪತಿಯಂ ರಾಯಪಾಳ್ಯದ ಚನ್ನವೀರಪ್ಪನ ಮುಖದಿಂ ರಣರಂಗದೊಳ್ಪಿಂದೆಗೆಸಿ ಗೋಪಾಲನಾಯಕನಂ ಸಂಸ್ಥಾನದೊಳ್ ನಿಲಿಸಿ ಪರಮಪ್ರಖ್ಯಾತಿಯಂ ಪಡೆದನಂತುಮಲ್ಲದೆಯುಂ ॥ ೬೯

ವರಡಿಳ್ಳೀಶ್ವರನಾಜ್ಞೆಯಿಂದುರೆ ಸಿಜಾಮಂ ಲೇಖನಂಗೆಯ್ಸಿ ನೀಂ
ಮಿರಿಜಾಅದ್ದುಮುಖಾನನಂ ತೆಗೆಸಿ ಸೀರೇದುಜ್ಜ್ವಲತ್ಕೋಂಟೆಯೊಳ್ ।
ಮೆರೆವಾ ತಾಯುರಖಾನನಂ ನಿಲಿಪುದೆಂದಟ್ಟಲ್ಸುಬೇದಾರಶೇ
ಖರನಂ ಲಿಂಗಪನಂ ರಿಪುದ್ವಿಪಮಹೋದ್ಯತ್ಸಿಂಹನಂ ಬೀಳ್ಕೊಡಲ್॥ ೭೦

ಇಂತು ಸುಬೇದಾರ ರೋಹಿಲೆಗಂಗನ ಕೋಟೆಲಿಂಗಪ್ಪನಂ ತೆರಳ್ಚಿಸಿ ಕಳುಪಲಾತನಸಂಖ್ಯಾತಸೇನೆವೆರಸು ಮಾಯಾವಿಗಳ ನಾಡೊಳಗಣ ಕಂದುಗೆರೆ ಚಿಕ್ಕನಾಯಕನ ಹಳ್ಳಿಯ ಪ್ರಾಂತದೊಳ್ಪಾಳಯಮಂ ಬಿಡಿಸಿ ಮಿರಿಜಾಅದ್ದಮಂಗೆ ಸಹಾಯಮಾಗ್ಯೈದಿದ ಮೈಸೂರವರ ಸೇನಾಸಮೂಹ ಮಂ ಬಹುಮುಖದೊಳ್ಸಂಹರಿಸಿ ಪಲಾಯನಂಗೊಳಿಸಿ ಮತ್ತಮಲ್ಲಿಂದಂ ತೆರಳ್ದೈದಿ, ಸೀರೆದ ಪರಿಸ್ತರಣಕ್ಕೆ ಮುತ್ತಿಗೆಯನಿಕ್ಕಿಸಿ ಕ್ರೋಧಿಸಂವತ ರದ ಆಷಾಢಶುದ್ಧ ೧ ಶ್ರಿಯೆೞ್ ಸೀರೆಯ ಕೋಂಟೆಯಂ ಕೊಂಡು ಮಿರಿಜಾ ಅದ್ದಮನಂ ವಾರೆದೆಗೆಸಿ ಆ ಸ್ಥಳದೊಳ್ ತಾಯರಖಾನನಂ ನಿಲಿಸಿ ಪಾತು ಶಾಹನ ಕಜ್ಜಮಂ ಬಲ್ಪುಗೆಯ್ಸಿ ಬರಲ್ ಬಳಿಕ್ಕಂ ವೇಣುಪುರವರದೊ ಳಡೆವಿಡದೆ ಪಗಲಿರುಳ್ ಮೂರುದಿನಂಬರಂ ನವಬತ್ತುಗಳ ನಿನಾದಮಂ ಪೂರ್ಣಂಗೆಯ್ಸಿ ತತ್ಪುರದ ಪ್ರತಿಗೃಹಂ ತಪ್ಪದೆ ಸಕ್ಕರೆಯಂ ತಿದ್ದಿಸಿ ಬಳಿಕ್ಕಂ ಶಾದುಲ್ಲಖಾನನ ಪೌಜುವೆರಸು ಸುಬೇದಾರಲಿಂಗಪ್ಪನಂ ಮಾಯಾವಿಗಳ ಸೀಮೆಯ ಮೇಲೆ ದಾಳಿವರಿಸಲಾತಂ ಪಟ್ಟಣದ ಕೋಂಟೆಯ ಸಮೀಪಮಂ ಸಾರ್ದು ನೀರಜಿಬಿಯಂ (?) ಕಟ್ಟಲವ ರ್ಗಳ್ ಭಯಸ್ಥರಾಗಿ ಪರಸಂಧಾನಮಂ ನಿಶ್ಚಯಿಸಲಾಗಲೆಂದವರ್ಗಳಿಂ ಭೂರಿದ್ರವ್ಯಾಭರಣಾಂಬರವಸ್ತುವಾಹನಂಗಳಂ ಕೊಂಡು ತಂದೊಪ್ಪಿಸ ಲೀವಾರ್ತೆಯಂ ಲಿಖಿತಮುಖದಿಂ ಚಿಕಲಿಸಖಾನಂಗೆ ತಿಳುಪಲಾಸಿಜಾಮಂ ಕೇಳ್ದು ಸಂತಸಂದಳೆದು.ಕಳುಪಿದಶ್ವಮುಚಿತಮುಡುಗೊರೆಗಳಂ ಪರಿಗ್ರ ಹಿಸಿ ನಾಲ್ದೆಸೆಯ ದೊರೆಗಳೊಳ್ಪರಮಪ್ರಸಿದ್ಧಿಯಂ ಪಡೆದೊಡನಾ ಚಿಕ ಲೀಸಖಾನನುಮತಿಯಿಂ ॥ ೭೧

ಮೆರೆವ ತುರುಷ್ಕರ ವಶವಾ
ಗಿರುವಜ್ಜಂಪುರದ ಪೊಳೆಯಪೊನ್ನೂರ ಸುವಿ ।
*ಸ್ತರದ ಸಾಸುವೆಯಹಳ್ಳಿಯ
ವರಕೋಟಾತ್ರಯುವನಾನೃಪಂ ವಶಗೈದಂ ॥ ೭೦

ಮತ್ತಮದಲ್ಲದೆ ಕ್ರೋಧಿನಾಮಸಂವತ್ಸರದ ಫಾಲ್ಗುಣಮಾಸದೊಳ್

ರಾಜಿಪ ಕೊಲ್ಲೂರ್ಗೆ ತೆರ
ಳ್ದು ಜನಪತಿವರ್ಯನೆಸೆವ ಮೂಕಾಂಬಿಕೆಯುಂ ।
ಪೂಜಿಸುತಿರುತಿರಲಿತ್ತಂ
ಭೂಜಾನಿಗಳರೆಯಪಾತುಶಾಹನ ಮುಖದಿಂ ॥ ೭೪

ಇಂತು ಪಾತುಶಾಹನನುಜ್ಞೆಯಿಂದಾರೆಯರರಸನೆನಿಪ ಶಾಹುರಾಜನ ವಜೀರಂ ಶ್ರೀಪತಿರಾಯನಂ ಕೂಡಿಕೊಂಡು ತತ್ಸೈನ್ಯಸಮೂಹಮಾತ್ಮಸೈನ್ಯಂವೆರಸು ॥ ೭೫

* ಅತಿಧನಾಪೇಕ್ಷೆಯಿಂದ
ಪ್ರತಿಮಂ ಚಿಕಲೀಸಖಾನನೈತರೆ ಮುನ್ನಂ ।
ಧೃತಿಗೆಡಿಸಿ ಲಿಂಗಪನ ಮುಖ
ದೆ ತದರ್ಥವ ಸಲಿಸಿ ರಾಜ್ಯಮಂ ರಕ್ಷಿಸಿದಂ ॥ ೭೬

ಮತ್ತಮದಲ್ಲದಾಸೋಮಶೇಖರನಾಯಕಂ ರಾಕ್ಷಸಸಂವತ್ಸರದ ಮಾರ್ಗಶಿರ ಶುದ್ಧ ಸಪ್ತಮಿಯಲ್ಲಿ ನಾಲಕಿಯೆಂಬ ಮನೋಹರಮಾದ ಮಹಾಯಾನಮನಾರೂಢನಾಗಿ ಸಮಸ್ತಸೈನ್ಯಸಹಿತಂ ಸರ್ವಸಂಭ್ರಮದಿಂ ಮಹಾನವಮಿಯ ಬಯಲ್ಗೆ ತೆರಳ್ದು ಸ್ಥಾನದೊಳೋಲಗಂಗೊಟ್ಟು ಸ್ಥಳಪರಸ್ಥಳದ ಮನ್ನೆಯರ್ಕಳಿಂದುಚಿತವುಡುಗೊರೆ ಮೊದಲಾದುಪಚಾರಂಗಳಿಂ ಸನ್ಮಾನಂಬೆತ್ತು ಮರಳ್ದು ರಾಜಾಲಯಮಂ ಸಾರ್ದು ವರ್ತಿಸುತ್ತುಮಿರಲ್ ನಳಸಂವತ್ಸರದ ಚೈತ್ರದೊಳ್ ॥ ೭೭

ನಾಲಕಿಯನೇರ್ದು ವಾರ್ತೆಯ
ಕೇಳಿ ಕನಲ್ದು ನಿಜಾಮನೈತರೆ ಧುರದೊಳ್ ।
ತೇಲಿಸಿ ಪಣಮಿತ್ತುರೆ ಪಿಡಿ
ದೂಳಿಗಮಂ ನಡೆಸಿ ಮೆರೆದನತಿಚಲಪದಮಂ ॥ ೭೮

ಮತ್ತಮದಲ್ಲದೆ ಪಿಂತೆ ಪರಾಭವಸಂವತ್ಸರದೊಳ್ ॥ ೭೯

* ಶಾಹುರಾಜನ ಹುಕುಮದಿಂ
ಮೋಹರಸಹಿತೈದಿ ತಗುಳ್ದ ಬಾಜೀರಾಯುಂ ।
ಗಾಹವಮಂ ಪೊನ್ನಂ ನಿ
ರ್ವಾಹಕಲಿಂಗಪನ ಮುಖದೊಳಿತ್ತು ತೆಗೆಸಿದಂ ॥ ೮೦

* ಕೀಲಕಾಬ್ದದೊಳ್ ತದ್ಭೂ
ಪಾಲಂ ಕೊಲ್ಲೂರಿಗೈದಿ ಮೂಕಾಂಬಿಕೆಯುಂ ।
ಲೀಲೆಯೊಳರ್ಚಿಸಿ ಭೂಸುರ
ಜಾಲವನತಿತುಷ್ಟಿಬಡಿಸಿದಂ ಭೋಜನದಿಂ ॥ ೮೧

ಮೆರೆವ ಸಹಸ್ರಸುವಾಸಿನಿ
ಯರಿಗಂ ವರಕಂಚುಕಂಗಳಂ ನಲಿದಿತ್ತಾ ।
* ದರಿಸಿ ಮೂಕಾಂಬಿಕೆಗೆ ತ
ದ್ಧರಣಿಪನುನ್ನತರಥೋತ್ಸವವನಾಗಿಸಿದಂ ॥ ೮೨

ನೆರೆ ರಂಗಪೂಜೆಯುಂ ಭೂ
ಸುರತರವರಲಕ್ಷದೀಪಪೂಜೆಯನನುವಿಂ ।
ವಿರಚಿಸಿ ತನ್ಮೂಕಾಂಬೆಯ
ಚರಣಾಬ್ಜವನಧಿಕಭಕ್ತಿಯಿಂದರ್ಚಿಸಿದಂ ॥ ೮೩

ವರಮೂಕಾಂಬಿಕೆಯಡಿದಾ
ವರೆಯುಂ ಬೀಳ್ಕೊಂಡು ತನ್ನೃಪಾಲಂ ಕೆಳದೀ ।
ಪುರಮಂ ಸಾರುತೆ ರಾಮೇ
ಶ್ವರಲಿಂಗವನಧಿಕಭಕ್ತಿಯಿಂದರ್ಚಿಸಿದಂ ॥ ೮೪

ಶ್ರೀವೀರಭದ್ರನೆಸೆವಡಿ
ದಾವರೆಯುಂ ಪರಮಭಕ್ತಿಯಿಂ ಪೂಜಿಸಿ ತ ।
ದ್ದೇವರದೇವಂಗವನಿಪ
ದೇವಂ ತಾಂ ಕೆಂಡದರ್ಚನೆಯನರ್ಪಿಸಿದಂ ॥ ೮೫

ಇಂತಾ ಕೆಳದಿಯ ವೀರಭದ್ರೇಶ್ವರಂಗೆ ಕೆಂಡದರ್ಚನಾದಿಪೂಜೆಗಳಂ ಸಮರ್ಪಿಸಿ ಬೀಳ್ಕೊಂಡನಂತರಂ ವೇಣುಪುರದರಮನೆಯಂ ಸಾರ್ದುವರ್ತಿಸುತ್ತುಮಿರಲ್ಕೆ ಭುಜಬಲಪರಾಕ್ರಮಾತಿಶಯದೇಳ್ಗೆಯಂ ಕೇಳ್ದು ಸಂದರ್ಶನೌತ್ಸುಕ್ಯದಿಂ ನಿಜಕುಟುಂಬಸಹಿತಮಾಗೆಳ್ತಂದ ಪ್ರಸಿದ್ಧನಿಯೋಗಿಯೆನಿಪ್ಪ ಕರ್ಣಿಕೋನಯ್ಯನಂ ಬೇಟಿಗೊಂಡು ಭೂಸ್ವಾಸ್ಥ್ಯಮುಮನುಚಿತಮಾದುಡುಗೊರೆಗಳುಮನಿತ್ತು ಮನ್ನಿಸಿ ಬೀಳ್ಕೊಟ್ಟು ಸುಖದಿಂ ರಾಜ್ಯಂಗೆಯ್ಯುತ್ತುಮಿರ್ದನಂತುಮಲ್ಲದೆಯುಂ ॥ ೮೬

ಬಳಿಕ ಕಿರಾತಾದಿಗಳುಪ
ಟಳದಿಂದಳವಳಿದ ಗುಡಿಯ ಕೋಂಟೆಯಧೀಶಂ ।
ಗೊಲವಿಂ ಸಹಾಯಮುಮಂ ರಚಿ
ಸಿ ಲಸದ್ವಿಖ್ಯಾತಿಯಾಂತನಾನೃಪವರ್ಯಂ ॥ ೮೭

ಮತ್ತಮದಲ್ಲದೆ ॥ ೮೮

ಅಗಣಿತಸೈನ್ಯಸಮೇತಂ
ಸೊಗಯಿಪ ಪೊನ್ನಾಳಿಗೈದಿ ರಾಜ್ಯಮನಲೆವಾ ।
ಸುಗುಣಾಬಾಯಿಯ ದಂಡಂ
ತೆಗೆಸಿ ವಿರಾಜಿಸುತೆ ರಾಜ್ಯಮಂ ರಕ್ಷಿಸಿದಂ ॥ ೮೯

ಮತ್ತಮದಲ್ಲದೆ ॥ ೯೦

ವೇಣುಪುರವರದ ಪಶ್ಚಿಮ
ದಾಣದೊಳತಿರಮ್ಯಮಾದ ರಾಜಾಲಯಮಂ ।
ಜಾಣರಿನೊಪ್ಪಮೆನಲ್ನಿ
ರ್ಮಾಣವನಾಗಿಸಿದನಾನೃಪಾಲವರೇಣ್ಯಂ ॥ ೯೧

ಮತ್ತಮಾರಾಜಾಲಯಮುಮಂ ॥ ೯೨

ದಾಳಿಂಬಂ ನವರಂಗಂ
ಪೇಳಲ್ಕಂ ಬಿರಿದುದೆಂಬ (?) ನಾಮಾಂಕಿತದಿಂ ।

ಮೇಳವಿಸಿದ ಚೌಕಿಯ ಸಾ
ಧಾಳಿಗಳಂ ರಚನೆಗೆಯ್ದಿದಂ ಸಂತಸದಿಂ ॥ ೯೩

ಇನಿತಲ್ಲದೆ ಕೆರೆ ಕಾಳ್ಪುರ
ಮಿನಿಗರ್ಬು ಸುಪುಷ್ಪವಾಟ ಕೋಳಮುರುಶಾಲೀ ।
ವನ ವಾಪಿ ಕೂಪ ತೋಪುಗ
ಳನುದಿನಮುಜ್ಜ್ವಲಿಸೆ ರಚನೆಗೆಯ್ದಿದನನುವಿಂ ॥ ೯೪

ಇಂತು ರಚನೆಗೆಯ್ದು ಬಳಿಕ್ಕಾ ಸ್ಥಳಕ್ಕೆ ಚಂದ್ರಶೇಖರಪುರವೆಂದು ನಾಮಾಂಕಿತಮಂ ಮಾಡಿಯದಕ್ಕೆ ತಕ್ಕ ಕೆಲವು ಸೀಮೆ ಭೂಮಿಗಳಂ ವಿಂಗಡಿಸಿ ಮನಬಂದ ವೇಳೆಯೊಳ್ತಾನಲ್ಲಿಗೆ ವಿನೋದದಿಂ ವೈಹಾಳಿಯನೆಸಗಿ ವಿಹರಿಸುತ್ತುಂ, ಮತ್ತಂ ವೇಣುಪುರದರಮನೆಯಂ ಕಾಜಿನ ಭವಂತಿ, ಹೊಸ ಭವಂತಿ, ಐವಂಕಣದುಪ್ಪರಿಗೆ, ವಸಂತಮಹಲ್ ಚಂದ್ರಮಹಲ್ಗಳೆಂಬೀಸ್ಥಾನಗಳಂ ವಿಸ್ತಾರಂಗೆಯ್ದು ಕಟ್ಟಿಸಿ ಪೊಸತಾಗಿ ಗಜತುರಗಶಾಲೆಗಳಂ ಕಟ್ಟಿಸಿ ಮತ್ತಮಾ ವೇಣುಪುರದೊತ್ತಿನೊಳಾ ವೇಣುಪುರಕ್ಕುಪಪುರಮಾಗಿರ್ಪಂತು ಸಾಧಾರಣ ಸಂವತ್ಸರದಲ್ಲಿ ನಾಗಪಟ್ಟಣಮೆಂಬ ಪೇಟೆಯಂ ನಿರ್ಮಾಣಂಗೆಯ್ದು, ಶ್ರೀಮನ್ನೀಲಕಂಠೇಶ್ವರಸ್ವಾಮಿಯ ದೇವಸ್ಥಾನದ ರಂಗಮಂಟಪಂ ಮುಂತಾದ ಕೆಲವು ಪ್ರದೇಶಂಗಳಂ ಜೀರ್ಣೋದ್ಧಾರಮಂ ಮಾಡಿಸಿ ತಚ್ಛಿಖರಮಂ ಚಾಮೀಕರರಸಲಾಂಛನಲಾಂಛಿತಮಾದ ಲೋಹಪತ್ರಪಟ್ಟಿಕೆಗಳ ಕೆಲಸಗತಿಯಿಂ ರಂಜಿಪಂತು ರಚನೆಗೆಯ್ದು, ಮತ್ತಮದಲ್ಲದೆ ಮುತ್ತಿನಸತ್ತಿಗೆ ಕರಿಬೆಗರಿಯ ಪಚ್ಚೆಯ ಸುವರ್ಣದ ಸುರುಗಿದಂಡೆ, ಚಿನ್ನದ ಶಿಖರ ಮುಂತಾದ ವಿಚಿತ್ರನೂತನಪದಾರ್ಥಂಗಳಂ ನಿರ್ಮಾಣಂಗೆಯ್ದು ಮತ್ತಂ ಭುವನಗಿರಿಯ ದುರ್ಗದರಮನೆಯ ಭವಂತಿಗಳೊಳ್ ಶಾರಾಬ್ದಾರನಾಗಪ್ಪನ ಮುಖದಿಂ ಶಿಲಾಸ್ತಂಭಂಗಳಂ ನಿಲಿಸಿ ಜೀರ್ಣೋದ್ಧಾರಮಂ ಮಾಡಿಸಿ ಗಾಳಿಯುಪ್ಪರಿಗೆಯಂ ಕಟ್ಟಿಸಿ, ಇಂತಾ ರಾಜಾಲಯಮಂ ದೃಢತರಮನಾಗಿಸಿ ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರ್ದನಂತುಮಲ್ಲದೆಯುಂ ॥ ೯೫

* ಪಿಂಗಳಾಬ್ದದೊಳ್ ತನ್ನೃಪ
ಪುಂಗವನುರುಭುವನಗಿರಿಯನೈದೆ ಬಳಿಕ್ಕಂ ।
ಶೃಂಗಪುರಕ್ಕಾಗಿಯೆ ಮೇ
ಲ್ಬಂಗಾಡಿಯ ಘಟ್ಟವಿಳಿದು ಮುಂತೈದುತ್ತುಂ ॥ ೯೬

ಸುರುಚಿರಸುಬ್ರಹ್ಮಣ್ಯ
ಕ್ಕಿರದಾನೃಪವರ್ಯನೈದಿ ಸುಬ್ರಹ್ಮಣ್ಯೇ ।
ಶ್ವರನಂ ಸದ್ಭಕ್ತಿಯೊಳಂ
ದಿರದರ್ಚಿಸಿ ತಳರ್ದು ಮಂಗಲೂರಂ ಸಾರ್ದಂ ॥ ೯೭

ಎಸೆವ ಕೊಡೆಯಾಲದಿಂದಂ
ವಸುಪುರಕ್ಕೈತಂದು ತನ್ಮಹಾಲಿಂಗೇಶಂ ।
ಗೊಸೆದು ಮಹಾಪೂಜೆಯ ವಿರ
ಚಿಸಿ ಬೀಳ್ಕೊಂಡಾ ಹೊಸಂಗಡಿಯ ಸಾರ್ದಿರುತುಂ ॥ ೯೮

ಆ ರಾಜೇಂದ್ರಂ ಶಂಕರ
ನಾರಾಯಣಕ್ಕೈದಿ ನಿಂದು ತತ್ಸ್ವಾಮಿಯ ಪಾ ।
* ದಾರವಿಂದಗಳನರ್ಚಿಸಿ
ಭೂರಮಣಂ ಸೈನ್ಯವೆರಸು ಮುಂತೈದುತ್ತುಂ ॥ ೯೯

* ಸಾರಿ ಕುಂದಾಪುರವ ಬೈ
ದೂರನಭೀಕ್ಷಿಸುತೆ ಸಾರ್ದು ಗೋಕರ್ಣಕ್ಕಾ ।
ಧಾರಿಣಿಯಧಿಪತಿ ಭಾಗ್ಯಕು
ಬೇರಂ ರಿಪುಭಯವಿದೂರನತಿಭಕ್ತಿಯೊಳಂ ॥ ೧೦೦

ಪಿಂಗದೆ ಮಹಾಬಲೇಶ್ವರ
ಲಿಂಗವನರ್ಚಿಸಿ ಬಳಿಕ್ಕಮಲ್ಲಿಂ ತೆರಳ್ದು ।
ತುಂಗಯಶೋನಿಧಿ ಕೊಲ್ಲೂ
ರಿಂಗೈದುತೆ ಪೂಜೆಗೆಯ್ದು ಮೂಕಾಂಬಿಕೆಯಂ ॥ ೧೦೧

ಭಜಿಯಿಸಿ ತತ್ಪದಮಂ ಬಳಿ
ಕ ಜನಪಶಾರ್ದೂಲನೇದ್ರ್ ಘಟ್ಟವನಖಿಲ ।
ಪ್ರಜೆಯಿಂ ಕಾಣಿಕೆಗೊಳುತುಂ
ನಿಜಸ್ಯೆನ್ಯಂವೆರಸು ಸಾಗರಕ್ಕೈತಂದಂ ॥ ೧೦೨

ಆನಂದಪ್ಪುರಕ್ಕಾಗಿ ಮ
ಹಾನಂದದೊಳ್ಪದುತುಂ ಮಹಾದೇವಪುರ ।
ಕ್ಕಾನರಪತಿ ಪೊನ್ನಾಳಿಗೆ
ತಾನೈದುತ್ತೆಸೆವ ಸೀಮೊಗೆಯುನುರೆ ಸಾರ್ದಂ ॥ ೧೦೩

ಭೂಮಿಪವರೇಣ್ಯನಾಹವ
ಭೀಮಂ ರಿಪುಗಜವಿದಾರಣೋದ್ಧತಸಿಂಹಂ ।
* ಸೋಮಶೇಖರನೃಪಂ ತ
ತ್ಸೀಮೊಗ್ಗೆಯೊಳಿರ್ದು ಸಾಂಬಶಿವನೊಳ್ ಬೆರೆದಂ ॥ ೧೦೪

ಆ ಸೋಮಶೇಖರೇಂದ್ರಮ
ಹೀಶಂ ತಾನಿಂತು ಸರ್ವಪೃಥ್ವೀಶ್ವರರೊಳ್ ।
ಭಾಸುರಕೀರ್ತಿಯನಾಂತು ವಿ
ಲಾಸದಿ ವರ್ತಿಸುತೆ ರಾಜ್ಯಮಂ ಪಾಲಿಸಿದಂ ॥ ೧೦೫

ಈ ಸೋಮಶೇಖರನಾಯಕರ್ ಪಟ್ಟವಾದ ಶಾಲಿವಾಹನ ಶಕ ವರ್ಷ ೧೬೩೬ ನೆಯ ಜಯ ಸಂವತ್ಸರದ ಪುಷ್ಯ ಬಹುಳ ೧೦ ಆರಭ್ಯ ಸಿದ್ಧಾರ್ಥಿ ಸಂವತ್ಸರದ ವೈಶಾಖ ಬಹುಳ ೩ಯಲ್ಲಿಗೆ ವರ್ಷ ೨೪ ತಿಂಗಳು ೪ ದಿನ ೨೩ ಪರ್ಯಂತಂ ರಾಜ್ಯವಾಳಿ ಶಿವೊಗ್ಗೆ ಮಂಡಳಿಮಠದಲ್ಲಿ ಐಕ್ಯವಾದರ್.[1]

ದಶಮಾಶ್ವಾಸಂ ಸಂಪೂರ್ಣಂ



1. ಅಲ್ಲಿಂ ಬಿಮರ ಶಾರ್ಗ ತೆರಳ್ಚಿಸಿ ಕೊಂಡು ಖರಲ್ ಆ ಬಹುಳ ೫ ಗುರುವಾರ ಕೊಪ್ಪಲಮಠದಲ್ಲಿ ಸಮಾಧಿಯಾಯಿತು.

ವಿಶ್ವಾವಸು ಸಂವತ್ಸರದ ಜ್ಯೇಷ್ಠ ಬಹುಳ ೨ಯಲ್ಲು ಇವರ ಅನುಜ ವೀರ·

# ಏಕಾದಶಾಶ್ವಾಸಂ

ಆ ಸೋಮಶೇಖರ ನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೬೧ನೆಯ ಸಿದ್ಧಾರ್ಥಿ ಸಂವತ್ಸರದ ಜ್ಯೇಷ್ಠ ಬಹುಳ ೨ ಯೊಳ್ (ವೀರಭದ್ರನಾಯಕರ ಪುತ್ರರಾದ ಬಸವಪ್ಪನಾಯಕರ್ಗೆ ರಾಜಪಟ್ಟಂ.)

ಪದುಳದಿ ಸೋಮಶೇಖರಧರಾಧಿಪನಿಂತಿಳೆಯಾಳ್ದನಂತರಂ
ತದನುಜವೀರಭದ್ರನೃಪನಾತ್ಮಭವಂ ರಿಪುವರ್ಗಭೈರವಂ ।
ಸದಮಳದಾನಧರ್ಮನಯನೀತಿಸಮಸ್ತಕಲಾವಿಶಾ
ರದಬಸವಾವನೀಶನರಸಾದನಿಳಾತಳಕಿಂದ್ರವೈಭವಂ ॥ ೧

ಇಂತೆಸೆವ ಬಸವೇಂದ್ರನೃಪಾಲಂ ತನ್ನ ಹಿರಿಯಪ್ಪನಾದ ಸೋಮಶೇಖರನಾಯಕರಾಳಿಬರುತ್ತಿರ್ದ ರಾಜ್ಯ ರಾಷ್ಟ್ರ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಮಂತ್ರಿ ನಿಯೋಗಿ ಸಾಮಾಜಿಕ ಸುಭಟ ಸಾಮಂತ ಬಾಂಧವ ಭೃತ್ಯಜನ ಪುರಜನ ಪರಿಜನಂಗಳಂ ಸಂರಕ್ಷಿ

---

ಭದ್ರನಾಯಕರ್ಗೆ ಕೊಪ್ಪಲ ಮಠದಲ್ಲು ಸಮಾಧಿಯಾಯಿತು.

ಈ ಸೋಮಶೇಖರನಾಯಕರ ಕಾಲದಲ್ಲು ಬದುಕುಗಳ ಮಾಡಿದವರ ವಿವರ:— ನಿರ್ವಾಣಯ್ಯನವರು, ಅವರ ತಮ್ಮ ಗುರುವಪ್ಪನವರು, ಗರಜಿನ ಶಾಂತದೇವರು, ರೋಹಿಲೆ ಸಿದ್ದಪ್ಪ, ಸುಬೇದಾರ ಗಂಗನಹಳ್ಳಿ ರೋಹಿಲೆಲಿಂಗಪ್ಪ, ನಲ್ಲೂರ ಲಕ್ಷ್ಮೀಪತಿಯಯ್ಯ, ಆ ಗೋವಿಂದಯ್ಯ, ಕರಣಿಕ ಕೋಳಾಲದ ವೆಂಕಟಯ್ಯ, ಗಾಜನೂರ ಲಕ್ಷ್ಮರಸಯ್ಯ, ಮಾದಪ್ಪೊಡೇರು, ಆತನ ತಮ್ಮ ವೆಂಕಟಪತಿಯಯ್ಯ, ಪರಮೇಶ್ವರಯ್ಯ ವಸುಧಾರ ಲಿಂಗಪ್ಪಯ್ಯ, ಹಾರೋರ ಮಲ್ಲಪ್ಪಯ್ಯ, ಸಬ್ನೀಸ ಕೃಷ್ಣಪ್ಪಯ್ಯ, ಬೆಳ್ಳರೆ ಚನ್ನಪ್ಪಯ್ಯ, ಆರಗದ ಪರಮೇಶ್ವರಯ್ಯ, ಮಹದೇವಮಠದ ದೇವಪ್ಪ, ಇಕ್ಕೇರಿ ಗೋಪಾಲಯ್ಯ, ಪಟ್ಟೆ ಮರಿಯಪ್ಪಯ್ಯ, ರಘುನಾಥಯ್ಯ, ಬಾರಕೂರ ಸೂರಪ್ಪಯ್ಯ, ಗಾಜನೂರ ಬಾಸಪ್ಪ, ರಾಯಸದ ಗಂಗಾಧರಯ್ಯ, ವಿಶ್ವೇಶ್ವರಯ್ಯ, ವೆಂಕಟರಾಮಯ್ಯ, ಗಗೆನಮಹಲ ಚಾವಡಿ ಉಪ್ಪರಿಗೆ ಜಕಪ್ಪಯ್ಯ, ಮನೆವಾರ್ತೆ ಹುದ್ದಾರ ವೀರಪ್ಪ, ಬೈರಯ್ಯ, ಯಾಡವ ಸಿದ್ದಪ್ಪ, ಕೇರಿಗೆಗೊಪ್ಪದ ಬಸವಯ್ಯ, ಮುಂತಾದವರು.

ಸುತ್ತುಂ [1] ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರಲೊಡನೆ ಕ್ವಚಿತ್ಕಾಲದೊಳ್ ॥ ೨

ಮಲಮೂತೆ ನೆನೆದ ದುರ್ಮತ
ಕೆಳಗಾದಾರಗದ ಕುಮತಿ ಪರಮೇಶ್ವರನಂ ।
ಚಲಿಸದೆ ತತ್ಸಹಭವನಂ
ಚಳಕದೆ ಪಿಡಿತರಿಸಿ ಶಾಸ್ತಿಯುಂ ಮಾಡಿಸಿದಂ ॥ ೩

ಹುಗುಡಿಯ ಭೈರಪನಂ ಬ
ಲ್ವಿಗಡರುಮಂ ಬಂಧಿಸಿಕ್ಕಿ ಮಲತಾಯಿಯುಮಂ ।
ತೆಗೆವಂಕೆಯೊಳಿಟ್ಟಿರೆ ಖತಿ
ಯೊಗೆದಾಕೆ ಗತಾಸುವಾಗಲತಿಮೂರ್ಛಿತೆಯಿಂ ॥ ೪

ಬಳಿಕಾ ಬಲತಾಯಿಗೆ ಕೊ
ಪ್ಪಲ ಮಠದೊಳ್ಸಾಂಗಮೆನೆ ಸಮಾಧಿಕ್ರಿಯೆಯುಂ ।

---

1 ತನ್ನ ಮಾತೃ ಮಲ್ಲಮ್ಮಾಜಿಯವರ ಸಪತ್ನಿ ಚನ್ನಮ್ಮಾಜಿಯವರ್ಗೆ ಪಿರಿಯತನವನಿತ್ತು ನಡೆಸಿಕೊಳುತ್ತುಂ ನಿರ್ವಾಣಯ್ಯನವರ ಕುಮಾರ ಗುರುವಪ್ಪಂಗೆ ಪಿರಿಯಧಿಕಾರವನಿತ್ತು ಮತ್ತಂ ಮಹದೇವಪುರದ ದೇವಪ್ಪ, ತಮ್ಮ ಹಿರಿಯಪ್ಪ ಸೋಮಶೇಖರನಾಯಕಮರ್ನ್ನಂ ಲಿಂಗಧಾರಣಮುಂ ಮಾಡಿಸಿ ಪೋಷಿಸಿದ ಷಡಕ್ಷರಯ್ಯ, ಪಂಚಾಕ್ಷರಯ್ಯ ಶಿವಲಿಂಗಪ್ಪ, ಸೌಂದರದಾಸ, ಮರಿಯಪ್ಪಸೆಟ್ಟರ ಬಸವಲಿಂಗಪ್ಪ, ಬಸವಸೆಟ್ಟರ ಮಗ ಉಳುವಪ್ಪ, ಸಾತಗೆರೆ ನಿರ್ವಾಣಪ್ಪನೆಂಬಿವರಂ ಪ್ರಮುಖರಂ ಮಾಡಿಕೊಂಡು ಕರಣಿಕ ಕೋಳಾಲದ ವೆಂಕಟೇಶಯ್ಯ, ಆ ಮರಿಯಪ್ಪ, ರಾಯಸದ ಸೂರಯ್ಯನ ಮಗ ವೆಂಕಟನಾರಣಪ್ಪ, ಸಬ್ಬನೀಸ ಕೃಷ್ಣಪ್ಪಯ್ಯ, ಜಕ್ಕಪ್ಪಯ್ಯ ರಾಯಸದ ಗಂಗಾಧರಯ್ಯ, ಆ ವಿಶ್ವೇಶ್ವರಯ್ಯ, ಆರಗದ ಪರಮೇಶ್ವರಯ್ಯ, ಬೊಮ್ಮರಸಯ್ಯನವರ ಮಗ ತಮ್ಮರಸಯ್ಯ, ಗಾಜನೂರ ಭಾಸಪ್ಪ, ಸುಬೇದಾರ ರೋಹಿಲೆ ಲಿಂಗಪ್ಪ, ರಾಮಪ್ಪ, ದಳವಾಯಿ ವೀರಭದ್ರಯ್ಯ, ಅಂಡಿಗೆ ಶಾಂತಪ್ಪ, ಮುಂತಾದ ಮಂತ್ರಿ ಮನ್ನೆಯ ಸಾಮಾಜಿಕ ನಿಯೋಗಿ ಗುರಿಕಾರ ಜನರ್ಗೆ ತತ್ತದ್ಯೋಗ್ಯತಾನುಸಾರವಮರಿತಧಿಕಾರಂಗಳನಿತ್ತು ನಡೆಸಿಕೊಳುತ್ತುಂ ಸುಖಸಂಕಥಾವಿನೋದಗೋಷ್ಠಿಗಳಿಂ ಸದ್ಧರ್ಮದಿಂ (ಕ).

ತ್ತಳುವದೆ ನಿರ್ಮಿಸಿದನಾ
ಗಳೆ ತನ್ನ ನೃಪವರ್ಯನಾಗವೋಕ್ತಕ್ರಮದಿಂ ॥ ೫

ಇಂತು ನಿಷ್ಕಾರಣಂ ತನಗೆ ವಿಘಾತಿಯುಂ ನೆನೆದ ದುಷ್ಟಜನರ್ಗೆ
ಶಾಸ್ತಿಗೈಸಿ ರಾಜಮುದ್ರಾಧಿಕಾರಮುಂ ಸ್ವಾಧೀನಂಗೈದು ಮಾತೃ ಮಲ್ಲ
ಮ್ಮಾಜಿಯುವರಂ ಸಂತಸಂಬಡಿಸುತ್ತುಂ ವರ್ತಿಸುತ್ತುಮಿರ್ದು[1] ॥ ೬

ಆ ರಾಜಾಧೀಶಂ ಕೊ
ಲ್ಲೂರಿಂಗಂ ತೆರಳ್ದು ದೇವಿಮೂಕಾಂಬೆಯುನಾ ।
ಲ್ದಾರಾಧಿಸಿ ಕೆಳದಿಗೆ ತೆರ
ಳ್ದು ರಾಮೇಶ್ವರನ ವೀರಭದ್ರೇಶ್ವರನಂ ॥ ೭

* ಭಜಿಸಿ ಸದ್ಭಕ್ತಿಯಿಂ ನೃಪ
ತಿಜನಾಗ್ರೇಸರನೆನಿಪ್ಪ ಬಸವಮಹೀಶಂ ।
ನಿಜಸೈನ್ಯಂವೆರಸು ತೆರ
ಳ್ದು ಜಗದ್ವಿಖ್ಯಾತವೇಣುಪುರಮಂ ಪೊಕ್ಕಂ ॥ ೮

ಇಂತು ವೇಣುಪುರಮಂ ಸಾರ್ದು ವರ್ತಿಸುತ್ತಿರ್ದಾ ಮಾಘ
ಬಹುಳ ತದಿಗೆಯೊಳ್ ಕೋಟಿಪುರದ ಸಿದ್ದಪ್ಪ ಸೆಟ್ಟರ ಪುತ್ರ ಶಿವಯ್ಯನ
ಕುಮಾರಿ ಚನ್ನಮ್ಮಾಜಿ ಪಾಳ್ಯದ ಶಿವಲಿಂಗಪ್ಪನವರ ಕುಮಾರಿ ಚನ್ನವೀ
ರಮ್ಮಾಜಿ ಎಂಬಿರ್ವರ್ ಕನ್ಯಾರತ್ನಂಗಳನತ್ಯಂತೋತ್ಸವದಿಂ ವಿವಾಹಮಾಗಿ
ತದ್ಧರ್ಮಪತ್ನಿಯರ್ವೆರಸು ರಾಜ್ಯಭಾರವಿಚಾರತತ್ಪರನಾಗಿ, ಶಿವಲಿಂಗ
ಪ್ಪನವರ್ಗೆ ಸರ್ವಾಧಿಕಾರಮನಿತ್ತು ನಡೆಸಿಕೊಳುತ್ತುಂ ॥ ೯

ಮದಮುಖಮುಷ್ಕರಾತನಿಕರಾಧಿಪಚಿಂತನಕಲ್ಲಧೀಶನಾ
ಮೆದೆಕೆರೆನಾಯಕಂ ಹರಪುರಾಧಿಪನಂ ಮುರಿದೊತ್ತಿ ನಿಲ್ವೊಡಾ ।
ಸ್ಪದಗಳನೀಯದಂತವನ ರಾಜ್ಯವನಾಕ್ರಮಿಸುತ್ತುಮಾಜಿರಂ
ಗದೊಳದಿರಾಂತುಪದ್ರವಗಳಂ ರಚಿಸುತ್ತಿರೆ ಶೌರ್ಯದೇಳ್ಗೆಯಿಂ ॥ ೧೦

1 ಮಾರ್ಗಶಿರ ಶುದ್ಧ ಪೂರ್ಣಿಮೆಯೊಳ್ (ಕ)

ಮೊದೆಕೆರೆನಾಯಕನುರವಣೆ
ಗಿದಿರಾಂಪೊಡಶಕ್ಯಮಾಗಿ ಹರಪುರದರಸಂ ।
ಸದಯಂಬಸವುರ್ವಿಪಂಗೀ
ಹದನಂ ಬಿನ್ನೈಸಿ ಕಳುಪಿ ಮರೆವುಗಲಾಗಲ್ ॥ ೧೧

ಇಂತು ಹರಪುರಾಧಿಪನೆನಿಪ ಬಸಂತರಾಯಂ ಮೊದೆಕೆರೆನಾಯಕ ನದಟನಾಂಪೊಡಶಕ್ಯಮಾಗಿ ನಿಮ್ಮ ಪುತ್ರವರ್ಗದ ಮನೆತನದವರೆನಿಸಿ ವರ್ತಿಸುತ್ತಿರ್ಪೆಮ್ಮ ಸಂಸ್ಥಾನಮನುದ್ಧರಿಸವೇಳ್ಕುಂದು ಲಿಖಿತಮುಖದಿಂ ಬಿನ್ನವಿಸಿ ಕಳುಪಲ್ಕೇಳ್ದು ಸಿದ್ದೋಜಿಯೊಡನನುಸಂಧಾನಮಂ ರಚಿಸಿ ತತ್ಸೈನ್ಯಮಂ ಬರಿಸಿ ಸುಬೇದಾರ ಲಿಂಗಪ್ಪನೊಡನೆ ಅಸಂಖ್ಯಾತಸೇನಾಸಮೂಹಮಂ ತೆರಳ್ಚಿಸಿ ಕಳುಪಿ ತನ್ಮದೆಕೆರೆನಾಯಕನ ರಾಜ್ಯಮಂ ನಿಪಾತನಂಗೆಯ್ಸಿದನಂತುಮಲ್ಲದೆಯುಂ ॥ ೧೨

ಹೊದಿಗೆರೆಯು ಸುಕೋಟೆಯುನವ
ನಾದಂ ಕೊಂಡೊಡನೆ ಮುರಿವ ಮೊರವಂಜಿಯು ಬ ।
ಲ್ಪಾದ ಪರಿಸ್ತರಣವೆನೆಸೆ
ವಾ ದುಮ್ಮಿಯೆನಿಪ್ಪ ಕೋಂಟೆಯುಂ ವಶಗೈದಂ ॥ ೧೩

ಮತ್ತಮದಲ್ಲದೆ ॥ ೧೪

ವಿಖ್ಯಾಟಾದ ನಂದಿಗಾವೆಯು
ಕೋಟೆಯುನುರೆ ಕೊಂಡು ತತ್ಕಿರಾತನ ಫೌಜಂ ।
ಲೂಟಿಸಿ ಬಸವನೃಪಂ ಕ
ರ್ಣಾಟಾಧಿಪನತಿಪರಾಕ್ರಮಮನುರೆ ಮೆರೆದಂ ॥ ೧೫

ಇಂತು ಹೊದಿಗೆರೆ ನಂದಿಗಾವೆ ಮೊರವಂಜಿಯೆಂಬ ಕೋಂಟೆಗಳಂ ಸ್ವಾಧೀನಂಗೆಯ್ಯಲೀವರ್ತಮಾನಮಂ ಕೇಳ್ದು ಪತ್ತೆಸಿಂಗನೊಡನನುಸಂಧಾನಮಂ ರಚಿಸಿ ರಘೋಜಿಭೋಸಲ್ಯಾ ಮುಂತಾದ ಪಟುಪರಾಕ್ರಮಶಾಲಿಗಳಂ ಯುಕ್ತಮಾದಸಂಖ್ಯಾತಸೇನಾಸಮೂಹಂಬೆರಸತ್ಯಂತಗ

ರ್ವೋದ್ರೇಕದಿಂ ದಾಳಿಯಿಡುತ್ತುಂ ತೆರಳ್ದೈತಂದು ಸಂತೆಬೆನ್ನೂರ ಪರಿಸ್ತರಣಮಂ ವೇಷ್ಟೈಸಿ ತಳಸುರಂಗಗಳಂ ನಡೆಸುತಿರ್ದ ತನ್ನೆದೆಕೆರೆ ನಾಯಕನ ಪ್ರತಾಪಾತಿಶಯಮಂ ಮುರಿದು ಮುತ್ತಿಗೆದೆಗೆಸಿ ಪಲಾಯನಂಗೊಳಿಸಿ ದುರ್ಗಮಂ ಪೊಗಿಸಿ ಭುಜಬಲಪರಾಕ್ರಮಾತಿಶಯಮಂ ಮೆರೆದನಂತುಮಲ್ಲದೆಯುಂ ॥ ೧೬

ವರವೇಣುಪುರದ ಮಧ್ಯದ
ವರಬಾಳೆಯಕೊಪ್ಪದೆಡೆಯ ಪಶ್ಚಿಮದೆಸೆಯೊಳ್ ।
ಸುರುಚಿರಮಠಮಂ ಭೂಮೀ
ಶ್ವರಮಣಿ ಬಸವಾವನೀಶ್ವರಂ ಕಟ್ಟಿಸಿದಂ ॥ ೧೭

ಇಂತು ಮಠಮಂ ನಿರ್ಮಾಣಂಗೆಯ್ಸಿ ಆ ಸ್ಥಳಕ್ಕೆ ಭದ್ರರಾಜಪುರವೆಂದು ನಾಮಾಂಕಿತಂಗೆಯ್ದು ಭೂರಿಭೂಸ್ವಾಸ್ಥ್ಯಮಂ ಕಲ್ಪಿಸಿ ದುರ್ಮತಿ ಸಂವತ್ಸರದ ಕಾರ್ತಿಕ ಮಾಸದೊಳ್ ಡಂಬಳದ ಸಿದ್ಧೇಶ್ವರ ದೇವರ ಗದ್ದುಗೆ ತೋಂಟದ ಸ್ವಾಮಿಗಳ್ಗೆ ಶಿವಾರ್ಪಿತವಾಗಿ ಧಾರೆಯನೆರೆದು ಶಾಶ್ವತವಾದ ಧರ್ಮಕೀರ್ತಿಯಂ ಸಂಪಾದಿಸಿದನಂತುಮಲ್ಲದೆಯುಂ[1] ॥ ೧೮

[2] ಉಡುಪಿನ ಬಳಿಯೊಳ್ತ್ರಲಪಿನ
ಪೊಡವಿಯೊಳಂ ಪಶ್ಚಿಮಾಂಬುಧಿಯ ತೀರದೊಳು ।
ಗ್ಗಡವೆನೆ ದರಿಯಾಬಾಡಿನ
ಗಡಮಂ ನಿರ್ಮಾಣಗೆಯ್ಸಿದಂ ಬಸವನೃಪಂ ॥ ೧೯

ಈ ಪರಿಯಲ್ಲದೆ ಪಡುವಣ
ಕೂಪಾರದ ತೀರದೊಳ್ವಿರಾಜಿಸುತಿರ್ಪಾ ।

---

1 ಇಲ್ಲಿಂದ ಮುಂದೆ ೪೮ನೆಯ ಕಂದದ ವರೆಗೂ ಇರತಕ್ಕ ಭಾಗವು ಓಲೆಯ ಪುಸ್ತಕದಲ್ಲಿಲ್ಲ. ಇದನ್ನು ನೋಡಿದರೆ ಪ್ರಕ್ಷಿಪ್ತವೆಂದು ತೋರುತ್ತದೆ.

2 ರುಧಿರೋದ್ಗಾರಿ ಸಂವತ್ಸರದೊಳ್.

ಕಾಪಿನ ಸಮೀಪದೊಳ್ತ
ದ್ಭೂಪಂ ನೆಲೆಗೊಳಿಸಿದಂ ಮನೋಹರಗಡಮಂ ॥ ೨೦

ಈ ಪರಿಯಲ್ಲದೆ ॥ ೨೧

ಭೂನುತಕಲ್ಯಾಣಪುರ
ಸ್ಥಾನದೊಳತಿರಮ್ಯಮಾಗೆ ಬಸವಮಹೀಶಂ ।
ತೋನಸೆಯೆಂಬ ಸುಕೋಟೆಯ
ತಾನುರೆ ನಿರ್ಮಾಣಗೆಯ್ಸಿದಂ ಸಂತಸದಿಂ ॥ ೨೨

ಮತ್ತಮದಲ್ಲದೆ । ೨೩

ವರಕುಂದಾಪುರದೆಡೆಯೊಳ್
ಸ್ಥಿರಮಪ್ಪಂತೆಸೆವ ಬೆಣ್ಣೆಗೆರೆಯೆನಿಪ ಪುರಿ ।
ಸ್ಫುರಣವನತಿಶಯಮೆನಲೆಸೆ
ವರಮನೆಯಂ ರಚನೆಗೆಯ್ಸಿದಂ ಬಸವನೃಪಂ ॥ ೨೪

ಮತ್ತಮದಲ್ಲದೆ ॥ ೨೫

ಇಂದ್ರವಿಭವನಿಭವಿಭವನ
ರೇಂದ್ರಂ ತಾಂ ಮಂಗಲೂರ ತಾಣವೆ ಶಿವರಾ ।
ಜೇಂದ್ರಗಿರಿಯೆಂಬ ಗಡಮಂ
ಸಾಂದ್ರಯಶಂ ರಚನೆಗೆಯ್ಸಿದಂ ಪೊಸಬಗೆಯಿಂ ॥ ೨೬

ಮತ್ತಮದಲ್ಲದಾ ಬಸವನರೇಂದ್ರಂ ಪರಶುರಾಮಕ್ಷೇತ್ರದೊಳಸೆವ ಸಿದ್ಧಾಪುರದ ಪೇಟೆಯ ಸಮೀಪದೊಳೊಪ್ಪುವ ಸ್ಥಳದೊಳ್ .........
ಆ ಸ್ಥಳಕ್ಕೆ ಮಂತ್ರರಾಜಪುರವೆಂದು ನಾಮಾಂಕಿತಮಂ ಮಾಡಿ ಷಡಕ್ಷರಯ್ಯನ ಮುಖದಿನಾ ಸ್ಥಳದೊಳತ್ಯದ್ಭುತಮಾದ ಮಠಮಂ ಕಟ್ಟಿಸಿ ವಿಶೇಷ ಭೂಸ್ವಾಸ್ಥ್ಯಮಂ ಬಿಡಿಸಿ ಶಿವಜಂಗಮಧರ್ಮಾರ್ಥವಾಗಿ ಆ ಮಠಮಂ ಗುರುನಂಜುಂಡಸ್ವಾಮಿಗಳ್ಗೆ ಧಾರೆಯನೆರೆದು ಶಿವಾರ್ಪಿತಮಾಗೆ ಸ್ಥಿರ

ಶಾಸನಮಂ ಬರೆಸಿತ್ತು ಸ್ವಧರ್ಮಕೀರ್ತಿಯಂ ಸಂಪಾಧಿಸಿದನಂತುಮಲ್ಲದೆಯುಂ ॥ ೨೭

ಆ ಮಂತ್ರರಾಜಪುರದೊಳ್
ಶ್ರೀಮತ್ಸಿದ್ಧೇಶ್ವರಂಗೆ ಪ್ರತಿವರ್ಷದೊಳು ।
ದ್ದಾಮರಥೋತ್ಸವವಿಭವಂ
ನೇಮದೆ ನಡೆವಂತೆ ಕಟ್ಟಳೆಯುನಾಗಿಸಿದಂ ॥ ೨೮

ಮತ್ತಮಂತಲ್ಲದೆ ॥ ೨೯

* ಮಿರುಗುವಾನಂದಪುರದೊಳ್
ಮುರಿಗೆಯ ದೇವರ್ಗೆ ವರರಥೋತ್ಸವಮಂ ವ ।
ತ್ಸರವತ್ಸರದೊಳ್ನಡೆಸುವ
ಪರಿಯುನೊಡರ್ಚಿಸಿದನಿಂತು ಬಸವಮಹೀಶಂ ॥ ೩೦

ಮತ್ತಮಂತಲ್ಲದೆ ॥ ೩೧

ಡಂಬಳದೊಳ್ಸಿದ್ಧೇಶ್ವರ
ಗಿಂಬಾದಭಿನವರಥೋತ್ಸವಂ ಪ್ರತಿವರ್ಷಂ ॥
ತಾಂ ಬಿಡದೆ ನಡೆವ ಪದ್ಧತಿ
ಯುಂ ಬಸವನರೇಂದ್ರನಾಜ್ಞೆಯಿಂ ವಿರಚಿಸಿದಂ ॥ ೩೨

ಮತ್ತಮಂತಲ್ಲದೆ ॥ ೩೩

ಪೊಸತೆಂವಿನಾಪರಿಚಾರುತಿಯೆ
ನಿಸಿ ಚಂಪಾಷಷ್ಠಿಯುಲ್ಲಿ ಸುಬ್ರಹ್ಮಣ್ಯಾಂ ।
ಗೆಸೆವ ತದುತ್ಸವಮಂ ನಡೆ
ಯಿಸಿದಂ ಪ್ರತಿವರ್ಷಗಳೊಳ್ ತನ್ನಪ ತೆರದಿ ॥ ೩೪

* ಪ್ರಜೋತ್ಪತ್ತ್ಯದಾರಂಭಾ (ಶ)

ಮತ್ತಮದಲ್ಲದೆ ॥ ೩೫

ನೆರೆ ಷಣ್ಣವತಿಸಹಸ್ರೋ
ತ್ತರಲಕ್ಷಸುಜಂಗಮಕ್ಕಭೀಷ್ಟಪದಾರ್ಥೋ |
ತ್ಕರಗಳನೊದವಿಸಿ ನೀಡಿಸಿ
ಪಿರಿದೆನೆ ಸಂತುಷ್ಟಿವಡಿಸಿದಂ ಬಸವನೃಪಂ ॥ ೩೬

ಇಂತು ಲಕ್ಷದಮೇಲೆ ತೊಂಬತ್ತಾರು ಸಾವಿರ ಜಂಗಮಮೂರ್ತಿಗಳ್ಗೆ ನಾನಾವಿಧ ಭಕ್ಷ್ಯ ಭೋಜ್ಯ ರಸಾಯನ ಫಲಂಗಳ್ ಮುಂತಾದ ಇಚ್ಛಾಪದಾರ್ಥಂಗಳಂ ನೀಡಿಸಿ ಸಂತುಷ್ಟಿವಡಿಸಿಯವರ್ಗೆ ನಾನಾವಿಧ ವಿಚಿತ್ರತರ ವಸ್ತ್ರ ಕಂಬಳಿ ಕಂಥೆ ಶಿವಧಾರ ವಿಭೂತಿ ಯಾಧಾರ ಭಸ್ಮ ರುದ್ರಾಕ್ಷಿ ಆಗಮ ಶಿವಶಾಸ್ತ್ರ ಲಿಖಿತಪುಸ್ತಕ ಪಾವಡ ಛತ್ರ ಪಾದುಕೆ ಹಸ್ತಾಧಾರ ದಂಡ ಮುಂತಾದ ಇಚ್ಛಾಪದಾರ್ಥಂಗಳಂ ಕೊಡಿಸಿ ಪೇಟೆಯಲ್ಲಿ ಆರಾಧನಪೂರ್ವಕಂ ಮಹೋತ್ಸವಮೆರೆವಣಿಗೆಗಳಂ ಮಾಡಿಸಿ ಶಾಶ್ವತಧರ್ಮಕೀರ್ತಿಗಳಂ ಸಂಪಾದಿಸಿ ರಾಜ್ಯಂಗೆಯ್ಯುತಿರ್ದ ಬಸವನರೇಂದ್ರನೊಂದವಸರದೊಳ್ ॥ ೩೭

ಬಿಂಕದೆ ಸ್ವೈನ್ಯಸಮೇತಂ
ವೆಂಕಟರಾಯಂ ದಲೈದಿ ರಾಜ್ಯವನಲೆಯು |
ತ್ತಂಕದೊಳಿದಿರ್ಚೆ ಗಡಿಯೊ
ಳ್ತೆಂಕಿಸೆಯೊಡಮಡಿಸಿ ಸೀಮೆಯುಂ ದಾಂಟಿಸಿದಂ ॥ ೩೮

ಇಂತು ದಾಳಿವರಿಯುತ್ತೈದಿ ಸುರಭಿಪುರಮಂ ಸೂರೆಗೊಂಡು ಕುಂಬಸೆಪ್ರಾಂತದೊಳಿಳಿದು ಪರಮೋಪದ್ರವಮಂ ರಚಿಸುತಿರ್ದಾರೆಯುರ ವಜೀರ ವೆಂಕಟರಾಯನಂ ಪಿಂದೆಗೆಸಿ ರಾಜ್ಯಂಗೆಯ್ಯುತ್ತಿರಲತ್ತಂ ರಕ್ತಾಕ್ಷಿ ಸಂವತ್ಸರದ ಪುಷ್ಯಮಾಸದೊಳ್ ॥ ೩೯

ತಪ್ಪದೆ ಶಾಮುವ [1] ನೇಮದೊ
ಳೊಪ್ಪುವ ಸಾಗರದೊಳಿಳಿದ ಬಾಪೂರಾಯನೆ |

---

1 ಶಾಹುರಾಜನ (ಕ)

ನಿಪ್ಪಸಿ ಉಭಯದಿಂದಂ
ತಪ್ಪಿಸಿ ಗಡಿಯಿಂದೆ [1] ರಾಜ್ಯಮಂ ಪಾಲಿಸಿದಂ ॥ ೪೦

ಇಂತೈದಿ ರಾಜ್ಯಮಂ ಬಾಧಿಸುತಿರ್ದ ಬಾಪೂರಾಯನಂ ತೊಲಗಿಸಿ ರಾಜ್ಯಮನಾಳುತ್ತುಮಿರಲೊಡನೆ ಪ್ರಭವಸಂವತ್ಸರದ ಚೈತ್ರಮಾಸದೊಳೈತಂದು ॥ ೪೧

ನಾನಾಜಿಯನುಜನಗಣಿತ
ಸೇನಾಢ್ಯಂ ದಾಳಿಯಿಡೆ ಸದಾಶಿವರಾಯಂ ।
ತಾನವನಂ ಸಂಗರಸಂ
ಧಾನದೆ ಪಿಂದೆಗೆಸಿ ರಾಜ್ಯಮಂ ರಕ್ಷಿಸಿದಂ ॥ ೪೨

ಇಂತು ರಾಜ್ಯಮನಲೆಯುತಿರ್ದಾರೆಯರ ವಜೀರ ಸದಾಶಿವ ರಾಯನಂ ಪಿಂದೆಗೆಸಲೊಡನಾಂಗಿರಸ ಸಂವತ್ಸರದ ಫಾಲ್ಗುಣಮಾಸ ದೊಳಂ ಮಗುಳ್ದು ಭಾವ ಸಂವತ್ಸರದ ಚೈತ್ರಮಾಸದೊಳಂ ಪೊಳಯ ಪೊನ್ನಾಳಿಯ ಪ್ರಾಂತಕ್ಕೈತಂದು ನಿಂದು ॥ ೪೩

ನಾನಾರಾಯನೆರಳ್ಸೂಳ್
ತಾನೈತಂದಿಳಿದು ದಾಳಿಯಿಡುತಿರಲಾಗಳ್ ।
[2] ನಾನಾನಯಭಯ ಧನಸಂ
ಧಾನದೆ ಪಿಂದೆಗೆಸಿ ರಾಷ್ಟ್ರಮಂ ರಕ್ಷಿಸಿದಂ ॥ ೪೪

ಇಂತಡಿಗಡಿಗೆಳ್ತಂದು ರಾಷ್ಟ್ರಮಂ ಬಾಧಿಸುತಿರ್ದಾರೆಯರ ವಜೀರರಂ ಪಿಂದೆಗೆಸಿ ರಾಜ್ಯಮಾಳುತಿರ್ದ ಬಸವನಾಯಕಂ [3] ಸಿದ್ಧಾರ್ಥಿ ರಕ್ತಾಕ್ಷಿ ಪ್ರಭವ ವಿಭವ ಶುಕ್ಲ ಪ್ರಮೋದೂತ ಪ್ರಜೋತ್ಪತ್ತಿ ಸಂವತ್ಸರಂಗಳೊಳ್ ಸೈನ್ಯಸಮೇತಂ ವೇಣುಪುರದಿಂ ತೆರಳ್ದು ಕೊಲ್ಲೂರ್ ಕೋಟೇಶ್ವರ ವಸು

---

1 ಬಂಗ ನರಸಿಂಗರಾವುಮಂ ತೆರಳ್ಚಿ (ಕ)

2 ರಾಯಸದ ವಿಶ್ವೇಶ್ವರಯ್ಯನರಸಿಂಗರಾಯರಂ ಕಳುಹಿ (ಕ)

3 ಇಲ್ಲಿಂದ ೬೪ನೆಯ ಕಂದದ ವರೆಗೂ ಇರತಕ್ಕ ಭಾಗವು ಓಲೆಯ ಪುಸ್ತಕದಲ್ಲಿಲ್ಲ

ಪುರ ಶಂಕರನಾರಾಯಣ ಕಮಲಶಿಲೆ ಕೆಳದಿ ಮುಂತಾದ ಪುಣ್ಯಕ್ಷೇತ್ರ
ಸ್ಥಳಂಗಳನೈದಿ ತತ್ತದ್ದೇವತಾದರ್ಶನಂಗೈದು ಮಹಾಪೂಜೆ ಮುಂತಾದುಪ
ಚಾರಂಗಳನೊಡರ್ಚಿಸುತ್ತುಮಲ್ಲಿಂ ತೆರಳ್ದು ಬಂದು ಮಂತ್ರರಾಜಪುರದ
ರಥೋತ್ಸವಮನೀಕ್ಷಿಸುತ್ತುಮಲ್ಲಿಂ ಮುಂತಳ್ದು ಕೊಡೆಯಾಲ ಮಂಗ
ಲೂರ್ ಕುಂದಾಪುರ ಕಾರ್ಕಳ ಮುಂತಾದ ಸ್ಥಳಂಗಳನವಲೋಕನಂಗೆ
ಯ್ಯುತ್ತುಂ ವೈಹಾಳಿಯನೆಸಗುತ್ತೆ ಮರಳ್ದು ವೇಣುಪುರದರಮನೆಯಂ
ಸಾರ್ದು ಸಂತತಂ ಶಿವಪೂಜೆ ಸತ್ಪುರಾಣ ಶ್ರವಣ ಸುಖಸಂಕಥಾವಿನೋದ
ಗೋಷ್ಠಿಗಳಿಂ ಗುರುಲಿಂಗಜಂಗಮಸೇವಾತತ್ಪರನೆನಿಸಿ ವರ್ತಿಸುತ್ತು
ಮಿರಲ್ ತರಿಕೆರೆಯವರ್ ಮಾಯಾವಿಗಳೊಡನನುಸಂಧಾನಮಂ ರಚಿಸು
ತಿರ್ಪರೆಂಬ ವರ್ತಮಾನಮಂ ಕೇಳ್ದು ಸಬ್ಬನೀಸ ಕೃಷ್ಣಪ್ಪಯ್ಯ
ನೊಡನೆ ಸೇನಾಸಮೂಹಮಂ ತೆರಳಿಸಿ ಕಳುಹಿ ‖ ೪೫

೭೮

ಪಿರಿಯ ತರೀಕೆರೆಯಧಿಪನ
ಗರುವಿಕೆಯುಂ ಮುರಿದು ಶೋಭಿಪುಬ್ರಾಣಿಯ ಭಾ ।
ಸುರರಂಗಯ್ಯನ ಹನುಮನ
ನರದುರ್ಗತ್ರಯಮನಾನ್ನೃಪಂ ವಶಗೈದಂ ‖ ೪೬

ಇಂತು ಕೋಟಾತ್ರಯಂಗಳಂ ಸ್ವಾಧೀನಂಗೈಯಲ್ಕದವಳಿದು ವೇಣುಪುರವರಕ್ಕೆಳ್ತಂದು ಸಂದರ್ಶನಂಗೆಯ್ದು ತನ್ನ ಸಂಸ್ಥಾನದ ಆರಭಾರಸುಖದುಃಖಾದಿವಿವರಣಂಗಳನುಸಿರ್ದು ದೈನ್ಯೋಕ್ತಿಗಳಂ ನುಡಿದಾ ತರಿಕೆರೆಯ ನಾಯಕನಂ ನಯೋಕ್ತಿಯಿಂ ಮನ್ನಿಸಿ ಗಜಾಶ್ವವಸ್ತ್ರಾಭರಣಾದಿಗಳನಿತ್ತು ಸನ್ಮಾನಿಸಿ ಕಳುಹಿ ಸುಖದಿಂ ರಾಜ್ಯಂಗೆಯ್ಯುತ್ತುಮಿರ್ದನಂತುಮಲ್ಲದೆಯುಂ ‖ ೪೭

ಹರಪುರದರಸನುಮಂ ಭಾ
ಸುರತರಸವಣೂರ ಪತಿ ನಬಾಬನ ಫೌಜಂ ।

ಬರಿಸಿ ಬಹುಸೈನ್ಯಸಹಿತಂ
ತೆರಳಿಸಿ ವರಸಬ್ಬುನೀಸಕೃಷ್ಣಪ್ಪನುಮಂ ॥ ೪೮

ಪದುಳಿಸಿ ಮಾಯಕೊಂಡದೆಡೆಯೊಳ್ ಬಹುಸೈನ್ಯಸಮೇತನಾಗುತು
ನ್ಮದದಿನಿದಿರ್ಚಿ ಮಾರ್ಮಲೆತು ......... ವೊಳಪೊಕ್ಕುಪೊರ್ದದಾ ॥
ಮದಕೆರೆನಾಯಕಾಖ್ಯನೃಪನಂ ರಣದೊಳ್ವಶಗೆಯ್ದು ಶಿಕ್ಷೆಗೆ
ಯ್ಸಿದ [1] ನಮರಾಳಿ ಮೆಚ್ಚಲದಟಂ ಮೆರೆದಂ ಬಸವೇಂದ್ರಭೂಮಿಪಂ॥೪೯

ಇಂತು ಮದಕೆರೆನಾಯಕನಂ ಜಯಿಸಿದ ಮಹೋತ್ಸವಕಾಲದೊಳ್ ನಿಜಸೈನ್ಯಸಮೇತನಾಗುತ್ತುಮೊಳ್ತಂದು ಸಂದರ್ಶನಂಗೆಯ್ದ ಹರಪುರವರಸನಂ ಸನ್ಮಾನಿಸಿ ಗಜಾಶ್ವವಸ್ತ್ರಾಭರಣಾದಿಗಳನಿತ್ತು ಬಹಳಸಂತೋಷಂಬಡಿಸಿ ಕಳುಪಿ ರಾಜ್ಯಂಗೆಯ್ಯುತ್ತುಮಿರಲೊಂದವಸರದೊಳ್ ॥

ಮದಕೆರೆನಾಯಕನ ಸುತಂ
ಮದಮುಖರಕಸ್ತೂರಿರಂಗನಾಯಕನೈತಂ ।
ದಿದಿರ್ಚಿಸಿ ಸಂತೆಯಬೆನ್ನೂ
ರಮಭುತಮಾಗಿರ್ಪ ಕೋಂಟೆಯಂ ವೇಷ್ಟೈಸಲ್ ॥ ೫೧

ಕದನದೆ ಬಹಿರಾಮತವೋ
ಹಿಮಖಾನವಜೀರನವಟನುರೆ ಮುರಿಗೊಡನಾ ।
ಮದಕೆರೆನಾಯಕಸುತನಂ
[2] ಸದೆದೋಡಿಸಿ ಜಯಮನಾಂತನಾ ಬಸವನೃಪಂ ॥ ೫೨

ಮತ್ತಮದಲ್ಲದೊಂದವಸರದೊಳ್ ಸಂದರ್ಶನಾಪೇಕ್ಷೆಯಿಂ ನಿಜಸೈನ್ಯಸಮೇತನಾಗ್ಯೆತಂದು ಬೇಟಿಗೊಂಡು ತಮ್ಮ ಸಂಸ್ಥಾನಗ ಸುಖದುಃಖಾದಿಗಳ ವಿವರಣಮನುಸಿರ್ದ ರಾಯದುರ್ಗದರಸನ ದೈನ್ಯೋಕ್ತಿಗಳಂ ಲಾಲಿಸಿ ಆವುದೊಂದು ಕಜ್ಜಕಮಾವಿರ್ಪೆಮೆಂದು ಧೈರ್ಯಂಪೇಳ್ದು ದಿಲಾಸೆ

1 ವಿಭವ ಸಂವತ್ಸರದ ಫಾಲ್ಗುಣಮಾಸದೊಳ್.
2 ಶುಕ್ಲಸಂವತ್ಸರದ ಜ್ಯೇಷ್ಠಮಾಸದೊಳ್.

ನಿತ್ತು ಚಿತ್ರಾಭರಣಾಂಬರಾದಿಗಳಿಂ ಪಿರಿದು ಸನ್ಮಾನಿಸಿ ಬೀಳ್ಕೊಟ್ಟನಂತು ಮಲ್ಲದೆಯುಂ ॥ ೫೩

ಅಳವಿಯೊಳದಿರ್ಚಿ ದರಿಗಳ
ತಲೆಗಳುಮಂ ಕೇಣಿಗೊಂಡು ರಾರಾಜಿಪಗು ।
ತ್ತಳದಧಿನಾಥನ [1] . . . . . .
ಹೊಳೆಯು ಪರಿಸ್ಫುರಣವುಂ ಕರಂ ವಶಗೈದಂ ॥ ೫೪

ಮತ್ತಮದಲ್ಲದೊಂದವಸರದೊಳ್ ನಾಯಿಮಾರರ್ಕಳ್ಮಾರ್ಮಲೆತು ॥

ವರಚಂದ್ರಗಿರಿಯ ಸುಪರಿ
ಸ್ಫುರಣವನಾಕ್ರಮಿಸಿರಲ್ಕೆ ಸೈನ್ಯಸಮೇತಂ ।
ಧುರವಿಜಯನನಿಕ್ಕೇರಿಯ
ಮರಿಯಪನಂ ಕಳುಹಿ [2] ಮಗುಳ್ದದಂ ವಶಗೆಯ್ದಂ ॥ ೫೬

ಇಂತು ನಾಯಿಮಾರರಾಕ್ರಮಿಸಿದ ಚಂದ್ರಗಿರಿಯ ಕೋಂಟೆಯುಂ ವಶಗೆಯ್ದು ಸುಖಮಿರುತ್ತುಂ ॥ ೫೭
ಪನ್ನಿರ್ಛಾಸಿರಸಂಖ್ಯೆಯ
ಪೊನ್ನುಗಳುಮನಿತ್ತು ಪದಕಕೊಪ್ಪುವ ಧರೆಗ ।
ತ್ಯುನ್ನತವಾಗಿಹ ಪಚ್ಚೆಯ
ರನ್ನವನಾ ಬಸವನೃಪತಿ ಸಂಪಾದಿಸಿದಂ ॥ ೫೮

ಮತ್ತಮೊಂದವಸರದೊಳ್ ॥ ೫೯
ವರಕರಿಯ ಮೇಲೆ ಮದುವೆಯ
ಮೆರೆವಣಿಗೆಯ ಮಾಡೆ ಜನರಿಗಪ್ಪಣೆಯಿಂ ತಾ ।
ನಿರದಿತ್ತ ಬಿಳಗಿಯರಸಗೆ
ಪರಮೆತಚರಶೀಲವಂತನೆನಿಪಪ್ಪಣಿಸಿಂ ॥ ೬೦

1 ಪ್ರಜೋತ್ಪತ್ತಿಸಂವತ್ಸರದೊಳ್.
2 ಶ್ರೀಮುಖ ಸಂವತ್ಸರದೊಳ್,

* ದೊರೆತನಂ ನಡೆಯದೊಲ್ವಿ
ಡ್ಡುರವೊಡಸಿಸೆ ತಾನೆ ಬಂದು ಬಿಳಿಗಿಯ ಭೂಪಂ ।
ನೆರೆ ಬೇಟಿಗೊಂಡು ದೈನ್ಯದೊ
ಳೊರೆಯಲ್ಕಪ್ಪಣನ ಮುಖದೆ ಬಂದಾದೆಸೆಯಂ ॥ ೬೧

ಲಾಲಿಸಿಯಪ್ಪಣನುಸುರಿದ
ಶೀಲಂ ನಡೆವಂತು ಮಾಡಿ ತತ್ಪ್ರತಿಷ್ಠೆಯುಮಂ ।
ತೇಲಿಸಿಯವರಂ ಮನ್ನಿಸಿ
ಲೀಲೆಯೊಳಂ ಬಸವನೃಪವರಂ ಬೀಳ್ಕೊಟ್ಟಂ ॥ ೬೨

ಮತ್ತಮದಲ್ಲದೆ ॥ ೬೩

ಶ್ರೀಮುಖದ ಮಾಘಮಾಸದೊ
ಳಾಮಹಿಪಂ ಸಕಲಜನಹಿತಾರ್ಥಂ ಪರಮೋ ।
*ದ್ದಾಮಶಾಸ್ತ್ರೋಕ್ತವಿಧಿಯಿಂ
ನೇಮದೊಳಂ ಗ್ರಾಮಶಾಂತಿಯಂ ವಿರಚಿಸಿದಂ ॥ ೬೪

ಇಂತು ಗ್ರಾಮಶಾಂತಿಯನೊಡರ್ಚಿಸಿ ಸುಖದಿಂ ರಾಜ್ಯಂಗೆಯ್ಯು ತಿರ್ದಾ ಬಸವನರೇಂದ್ರಚಂದ್ರಂ ತನಗೆ ಸಂತಾನಮಿಲ್ಲವುದರಿಂ ಚಿಂತಿಸಿ ಮುಂದೆ ಸಂಸ್ಥಾನಾಧಿಪತಿತ್ವಕರ್ತರಂ ಕಾಣದಾಳೋಚಿಸಿ ಭಾವ ಸಂವತ್ಸರದ ಭಾದ್ರಪದ ಶುದ್ಧ ನವಮಿಯ ದಿವಸದೊಳ್ ನಿರ್ವಾಣಯ್ಯನವರ ಮಗ ಗುರುವಪ್ಪನವರ ಕುಮಾರನಾದ ಚನ್ನಪ್ಪನವರಂ ಸರ್ವಸಂಭ್ರಮದಿಂ ಪಲ್ಲಕ್ಕಿಯಮೇಲರಮನೆಗೆ ಬಿಜಯಂಗೆಯ್ಸಿ ತಂದು ಮನೆದೇವರ ಸನ್ನಿಧಿಯೊಳ್ ಆ ಕುಮಾರನಂ ತಮ್ಮ ಪತ್ನಿ ವೀರಮ್ಮಾಜಿಯವರ ಮಡಿಲೊಳಿಡಿಸಿ ಗೃಹೀತಪುತ್ರನಂ ಮಾಡಿಕೊಂಡಾ ಚನ್ನಪ್ಪನವರ್ಗೆ ಚನ್ನಬಸವಪ್ಪನಾಯಕನೆಂದು ನಾಮಕರಣಮಂ ರಚಿಸಿ, ಓದು ಸಾಧನೆ ಮುಂತಾದ ರಾಜೋಪಯುಕ್ತವಾದ ವಿದ್ಯಾಭ್ಯಾಸಂಗಳನೊಡರ್ಚಿಸುತ್ತಾಕುಮಾರನಂ ಪೋಷಿಸಿ ಸಂತಸವಡುತ್ತುಂ ॥ ೬೫

ಇಂತಾ ಬಸವನೃಪಾಲಂ
ಸಂತತಮರಿಜಾಲಕಾಲನತಿಶುಭಶೀಲಂ ।
ಸಂತಸದೆ ಸುಜನರೊಡಬಡು
ವಂತಿರೆ ಕರವೊಳ್ದನೊಪ್ಪುವವನೀತಳಮಂ ॥ ೬೬

---

ಆ ತರುವಾಯು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೭೭ನೆಯ ಭಾವ ಸಂವತ್ಸರದ ಕಾರ್ತಿಕ ಶುದ್ಧ 1 ೫ ರವಿವಾಸರದೊಳ್ ॥

ಉನ್ನತಸದ್ಗುಣಗಣಸಂ
ಪನ್ನಂ ಬಸವೇಂದ್ರನೃಪನ ತರುವಾಯಿಯೊಳಂ ।
ಚನ್ನಬಸವೇಂದ್ರನವನಿಪ
ರನ್ನಂ ರಂಜಿಸುವ ರಾಜ್ಯಕಧಿಪತಿಯಾದಂ ॥ ೬೭

ಆ ಚನ್ನಬಸವಪ್ಪನಾಯಕನೃಪಾಲಂ ಮಾತೃ ಚನ್ನವೀರಮ್ಮಾಜಿಯುವರ್ನಿರೂಪಿಸಿದ ಬುದ್ಧಿಮಾರ್ಗಂಬಿಡಿದು ವರ್ತಿಸುತ್ತುಂ, ತಂದೆ ಬಸವಪ್ಪನಾಯಕರಾಳಬರುತ್ತಿರ್ದ ರಾಜ್ಯ ರಾಷ್ಟ್ರ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಮಂತ್ರಿ ನಿಯೋಗಿ ಸಾಮಾಜಿಕ ಸಾಮಂತ ಮಿತ್ರ ಸುಭಟ ಪುರಜನ ಪರಿಜನ ಸೇವಕಜನಪರ್ಯಂತಾದ ಸಮಸ್ತ ಜನರಂ ಸಂರಕ್ಷಿಸುತ್ತುಂ ಸದ್ಧರ್ಮದಿಂ ರಾಜ್ಯವನಾಳುತ್ತುಮಿರಲ್, ಯುವ ಸಂವತ್ಸರದ ಫಾಲ್ಗುಣ ಮಾಸದೊಳ್ ನಾನಾರಾಯನ ಪ್ರೇರಣೆಯಿಂ ಮಾಧೋಜಿಪುರಂದರನೆಂಬ ವಜೀರಂ ಭೂರಿಸೈನ್ಯಸಮೇತನಾಗಿ ದಾಳಿವರಿಯುತ್ತೈದಿ ॥ ೬೮

ಇಕ್ಕೇರಿಯ ಕೋಂಟೆಗೆ ಬಂ
ದಿಕ್ಕಿರೆ ಮುತ್ತಿಗೆಯ ಸಮರಸಂಧಾನದೊಳಾ ।

---

1 ೫ಯಲ್ಲಿ ಬಿದರೂರು ಭದ್ರರಾಜಪುರದ ವಟ್ಟದೇವರ ಮಠದ ಭೂಮಿಯಲ್ಲು ಕ್ರಿಯಾಸಮಾಧಿ; ಇದೇ ಶುದ್ಧ ಪಂಚಮಿ ರವಿವಾಸರದೊಳ್ (ಕ)

ಇಕ್ಕೇರಿಯ ಮುತ್ತಿಗೆಯುಂ
ಗಕ್ಕನೆ ತೆಗೆಸುತ್ತೆ ಸೀಮೆಯುಂ ದಾಂಟಿಸಿದಂ ॥ [1] ೬೯

ಇಂತು ದಾಳಿವರಿಯುತ್ತೈದಿ ರಾಜ್ಯಮಂ ಬಾಧಿಸುತಿರ್ದ ಮಾಧೋಜೀಪುರಂದರನಂ ಪಿಂದೆಗೆಸಿ ರಾಜ್ಯಮಾಳುತಿರ್ದನಂತುಮಲ್ಲದೆಯುಂ ॥ ೭೦

* ಮೆರೆವ ಡಂಬಳದ ಸಿದ್ಧೇ
ಶ್ವರಗಂ ವಿಲಸದ್ರಥೋತ್ಸವಾದ್ಯುಪಚಾರೋ ।
ತ್ಕರಗಳ್ ನಡೆವಂತಿರೆ ಸ
ದ್ಧರಣಿಯನುತ್ತಾರಗೆಯ್ಸಿದಂ ತದ್ಭೂಪಂ ॥ ೭೧

ಇಂತು ಡಂಬಳದ ಸಿದ್ಧೇಶ್ವರದೇವರ್ಗೆ ಭೂಸ್ವಾಸ್ಥ್ಯಮನುತ್ತಾರಂಗೆಯ್ಸಿ ಸುಖದಿಂ ರಾಜ್ಯಮಾಳುತ್ತಿರಲ್ ಕ್ವಚಿತ್ಕಾಲದೊಳ್ ॥ ೭೨

ಮಹಾದೇವಪುರದ ದೇವಪ
ನೈದಲ್ಪಂಚತ್ವಮಂ ಕುವೃತ್ತಿಯಿನಾಸ ।
* ರ್ವಾಧಿಕಾರಮನೆ ನಡೆಸಿದ
ನಾದರದಿಂ ಬಸವಲಿಂಗಮಾರ್ಯನ ಮುಖದಿಂ ॥ ೭೩

ಇಂತು ಬಸವಲಿಂಗಮಂತ್ರಿಯ ಮುಖದೊಳ್ ಸರ್ವಾಧಿಕಾರಮಂ ನಡೆಸುತ್ತುಂ ವರ್ತಿಸುತ್ತುಮಿರಲ್ ಕ್ವಚಿತ್ಕಾಲಂ ಪೋಗಲೊಡನೆ ॥ ೭೪

ವರನಾನಾಜೇರಾಯನ
ನಿರೂಪದಿಂದಧಿಕಮಾದ ಸೈನ್ಯಸಮೂಹಂ ।
* ವೆರಸು ಗೋಪಾಲರಾಯಂ
ತೆರಳ್ದೈತಂದೊಡನೆ ನಿಲಲವಂ ಗಡಿಮುಖದೊಳ್ ॥ ೭೫

ಮತ್ತಮಾಗಲ್ ॥ ೭೬

---

1 ಇಲ್ಲಿಂದ ಮುಂದಕ್ಕೆ "ಇರುತಿರುತುಂ" ಎಂಬ ೮೭ನೆಯ ಪದ್ಯದ ವರೆಗೂ ಇರತಕ್ಕ ಭಾಗವು ಓಲೆಯ ಪುಸ್ತಕದಲ್ಲಿಲ್ಲ.

* ಬಸವಲಿಂಗಾಖ್ಯಮಂತ್ರಿ
ಪ್ರಸರಶಿರೋಮಣಿಯನಧಿಕಚತುರಾಗ್ರಣಿಯಂ ||
ಬಸೆದಖಿಲಸೈನ್ಯಮಂ ಕೂ
ಡಿಸಿ ತೆರಳಿಸಿ ಕಳುಪಿ ಚನ್ನಗಿರಿಗಡಿಯೆಡೆಯೊಳ್ || ೭೭

ಇರೆ ಬೇಟಿಮುಖದೆ ಕಾರ್ಯದ
ನಿರುಗೆಯನರಿದುಚಿತವಚನರಚನೆಗಳಿಂದಂ |
ಗುರುವಾತ್ಸಲ್ಯವೆ ತೋರಿಸಿ
ನೆರೆ ಸಂತಸವಡಿಸಿ ತೆಗೆಸಿ ಗಡಿಮುಖದಿಂದಂ || ೭೮

ವರಮೈಸೂರ ಮುಖಕ್ಕಂ
ಮರೆವಾ ಗೋಪಾಲರಾಯನಂ ಬಲಸಹಿತಂ |
ತೆರಳಿಸಿ ನಿಜರಾಜ್ಯವನಂ
ದುರೆ ರಕ್ಷಿಸಿ ಜಸವನಾಂತನಾ ನೃಪತಿಲಕಂ [1] || ೭೯

ಇಂತು ದಾಳಿಯಿಡುತ್ತೈದಿದ ಗೋಪಾಲರಾಯನಂ ಪೊಱದೆಗೆಸಿ ರಾಜ್ಯಂಗೆಯ್ಯುತ್ತಿರಲೊಂದವಸರದೊಳ್ || ೮೦

ಬೇಲೂರ ಕೃಷ್ಣಪೇಂದ್ರಂ
ಮೂಲಚ್ಯುತನಾಗಿ ಬಂದು ಕೊಡಗನ ದೆಸೆಯಿಂ |
ಮೇಲಹ ಕಳಸದ ಕೋಟೆಯೊ
ಳಾಲೋಚಿಸುತಲ್ಲಿ ನಿಂದು ತನ್ನಯ ಕಥೆಯಂ || ೮೧

ಚನ್ನಬಸವೇಂದ್ರನೆಡೆಗಂ
ಬಿನ್ನಪವಂ ಬರೆದು ನಿಮ್ಮ ಪೊಂದಿದ ಸುತನಾ |
ದೆನ್ನಂ ಸಂಸ್ಥಾನದೊಳಂ
ಚೆನ್ನಾಗಿರೆ ನಿಲಿಸಿ ಪೊರೆಯಬೇಹುದೆನುತ್ತುಂ || ೮೨

---

1 ಧಾತು ಸಂವತ್ಸರದ ಫಾಲ್ಗುಣದೊಳ್

ಬಿನ್ನವಿಸಿ ಕಳುಪಿ ಲಾಲಿಸಿ
ತನ್ನಂ ಮರೆವೊಕ್ಕನಾವನಾಗಿರಲವನಂ ।
* ನನ್ನಿಯುದ್ಧರಿಪುದಿದು ನೃಪ
ರನ್ನರ್ಗಂ ನೀತಿಯೆಂದು ನಿಶ್ಚಯಿಸುತ್ತುಂ ॥ ೮೩

ಇಂತೆಂದು ನಿಶ್ಚಯಂಗೆಯ್ದೊಡನೆ ರಾಯಸದ ಶಂಕರನಾರಾಯ ಣಯ್ಯನೊಡನೆ ಭೂರಿಸೈನ್ಯಮಂ ತೆರಳ್ಚಿಸಿ ಕಳುಹಿ ಬಲಮಂ ವೇಢೈಸಿದ ಕೊಡಗಸೈನ್ಯಮಂ ಪಿಂದೆಗೆಸಿಯಾ ಕೊಡಗರ ವೀರರಾಜನಂ ನಾನಾವಿ ಧನಯಭಯೋಕ್ತಿಗಳಿಂದೊಡಬಡಿಸಿ [1] ಕುಮಾರಕೃಷ್ಣಪ್ಪನಾಯಕನಂ

[1] ಅರ್ಕಲಗೋಡ ಕೃಷ್ಣಪ್ಪನಾಯಕನ ಕುಮಾರ ವೆಂಕಟಾದ್ರಿನಾಯಕನ ಪತ್ನಿ ಗೊಣವೂರ ಲಿಂಗಮ್ಮನೆಂಬಾಕೆಗೆ ಗೃಹೀತಪುತ್ರನಾದ ಮೂಲಪುರುಷ, ಬೇಲೂರ ವೆಂಕಟಾದ್ರಿನಾಯಕನ ಪಟ್ಟದ ಪ್ರಥಮಸ್ತ್ರೀಯಲ್ಲು ಜನಿಸಿದ ಕೃಷ್ಣಪ್ಪ ನಾಯಕನ ಕುಮಾರನಾದ ಕುಮಾರ ವೆಂಕಟಪ್ಪರಸರ ಪುತ್ರನಾದ ಕುಮಾರ ಕೃಷ್ಣಪ್ಪನಾಯಕನಂ ವಾರೆದೆಗೆಸಿ ಮೂಲಪುರುಷ ಬೇಲೂರ ವೆಂಕಟಾದ್ರಿನಾಯಕನ ತೃತೀಯಸ್ತ್ರೀಯಲ್ಲು ಜನಿಸಿದ ರಂಗಪ್ಪನಾಯಕನ ಕುಮಾರನಾದ ದೊಡ್ಡಯ್ಯರಸಿನ ಪುತ್ರನಾದ ಕೃಷ್ಣಪನಾಯಕನಂ ಬೇಲೂರ ಸಂಸ್ಥಾನದ ರಾಜತ್ವಕ್ಕೆ ನಿಲಿಸಿದಂ.

ಇನ್ನು ವೆಂಕಟಾದ್ರಿನಾಯಕನ ಪತ್ನಿಯಾದ ಗೊಣವೂರ ಲಿಂಗಮ್ಮಗೆ ಗೃಹೀ ತಪುತ್ರನಾದ ಕುಮಾರಕೃಷ್ಣಪ್ಪನೆಂದೊಡಾರೆಂಬುದಂ ವಿವರಣವಾಗಿ ಪೇಳ್ವೆನದೆಂ ತೆಂದೊಡೆ :— ಮೂಲಪುರುಷ ಬೇಲೂರ ವೆಂಕಟಾದ್ರಿನಾಯಕಂಗೆ ಮೂವರ್ ಸ್ತ್ರೀ ಯರ್, ಅವರೊಳ್ ಪಟ್ಟದ ಪ್ರಥಮಸ್ತ್ರೀಯಲ್ಲಿ ಜನಿಸಿದ ಪುತ್ರನ ಹೆಸರು ಕೃಷ್ಣಪ್ಪ ನಾಯಕ; ಆ ಕೃಷ್ಣಪ್ಪನಾಯಕನ ಮಗ ಕುಮಾರ ವೆಂಕಟಪ್ಪರಸರು; ಆಕುಮಾರ ವೆಂಕಟಪ್ಪರಸರ ಮಗನ ಹೆಸರು ಕುಮಾರಕೃಷ್ಣಪ್ಪನಾಯಕ; ಆ ಕುಮಾರಕೃಷ್ಣ ಪ್ಪನಾಯಕನು ಕುಟುಂಬಸಮೇತನಾಗಿ ಕೊಡಗರ ವೀರರಾಜನ ಮೇಲುಪರಾಂ ಬರಿಕೆಯ ಮೇಲೆ ಮೈಸೂರವರ ಸೀಮೆಯೊಳಗಣ ಮೊಳವಿ ಮಟ್ಟಸಾಗರವೆಂಬ ಸ್ಥಳದಲ್ಲಿ ಇರುತ್ತಿರ್ದರು; ಇನ್ನು ಬೇಲೂರು ವೆಂಕಟಾದ್ರಿನಾಯಕನ ದ್ವಿತೀಯ ಸ್ತ್ರೀಯಲ್ಲಿ ಜನಿಸಿದ ಕುಮಾರನ ಹೆಸರು ಅರ್ಕಲಗೋಡ ಕೃಷ್ಣಪ್ಪನಾಯಕ, ಆ ಕೃಷ್ಣಪ್ಪನಾಯಕಗೆ ಮೂವರು ಕುಮಾರರು, ಅವರಾರೆಂದೊಡೆ ಜ್ಯೇಷ್ಠಪುತ್ರ ವೆಂಕಟಾದ್ರಿನಾಯಕ, ದ್ವಿತೀಯ ಪುತ್ರನ ಹೆಸರು ಗೋಪಾಲನಾಯಕ, ತೃತೀಯ

ಭಲ್ಯದಿಂ ಹೊರದೆಗೆಸಿ ತಮ್ಮಂ ಮರೆವೊಕ್ಕ ಕೃಷ್ಣಪ್ಪನಾಯಕನಂ
ಬೇಲೂರ ಸಂಸ್ಥಾನದ ರಾಜತ್ವಕ್ಕೆ ನಿಲಿಸಿ ಪರಮಪ್ರಖ್ಯಾತಿಯಂ ಪಡೆದ
ನಂತುಮಲ್ಲದೆಯುಂ ‖ ೮೪

---

ಪುತ್ರನ ಹೆಸರು ಬೇಲೂರಯ್ಯ; ಹಾಗೆ ಮೂವರು ಪುತ್ರರು; ಆ ಮುವ್ವರು ಕುಮಾ
ರರೊಳಗೆ ಗೋಪಾಲನಾಯಕ ಬೇಲೂರಯ್ಯನೆಂಬ ಇಬ್ಬರಿಗೂ ಸಂತಾನವಿಲ್ಲ;
ಈ ಇಬ್ಬರೊಳಗಾ ಗೋಪಾಲನಾಯಕನೆಂಬಾತನಂ ಹಿರಿಯಬಸವಪ್ಪನಾಯಕರ
ಜ್ಯೇಷ್ಠಪುತ್ರನಾದ ಸೋಮಶೇಖರನಾಯಕರು ಬೇಲೂರ ರಾಜ್ಯಾಧಿಕಾರಕ್ಕೆ ನಿಲಿಸಿ
ಆತನ ಅಣ್ಣ ವೆಂಕಟಾದ್ರಿನಾಯಕನು ಉನ್ಮಾದಾವಸ್ಥೆಯಿಂದ ವರ್ತಿಸುತ್ತಿರಲಾಗಿ
ಆತನಂ ಬಿದುರೂರಿಗೆ ಕರೆಸಿಕೊಂಡು ಇಟ್ಟುಕೊಂಡು ಈ ಪ್ರಕಾರಮಿರುತ್ತಾ
ಮಿರಲಾಗಿ ಅರಕಲಗೂಡ ಚಾಮಯ್ಯನ ಅಳಿಯ ಮಲ್ಲಣ್ಣನೆಂಬಾತನು ಆ ವೆಂಕ
ಟಾದ್ರಿನಾಯಕನ ಕಿರಿಯತಮ್ಮನಾದ ಬೇಲೂರಯ್ಯನೆಂಬಾತನಂ ಕೂಡಿಕೊಂಡು
ಮೈಸೂರವರ ಬಳಿಗೆ ಹೋಗಿ ಬೇಲೂರಯ್ಯನ ಕಾಣಿಸಿಕೊಟ್ಟು ಆತನಂ
ಅವರ ಬಳಿಯಲ್ಲಿ ಇಟ್ಟು ತಾನು ಮೇಣುಪುರದಲ್ಲು ಇದ್ದ ವೆಂಕಟಾದ್ರಿನಾಯಕನ
ಬಳಿಗೆ ಬಂದು ನಿನಗೆ ರಾಜ್ಯಪಟ್ಟವಂ ಕಟ್ಟಿಸುತ್ತೇನೆ ನೀನು ಸುಮ್ಮನೆ ಈ
ಸ್ಥಳದಲ್ಲಿ ಯಾಕೆ ಇರುತ್ತಿದ್ದೀಯೆಂದು ಕುಬೋಧೆಯಂ ಬೋಧಿಸಿ ರಾಜತ್ವದ
ದುರಾಸೆಯಂ ಪುಟ್ಟಿಸಿ ಪಟ್ಟಣಕ್ಕೆ ತೆರಳಿಸಿಕೊಂಡು ಹೋಗಿ, ಅರಸಂ
ಕಾಣಿಸಿ ಕೆಳದಿಪುರಂಗಳು ರಾಜತ್ವಕ್ಕೆ ನಿಲಿಸಿದ ಗೋಪಾಲನಾಯಕನಂ
ಮಾರದೆಗೆಸಿ ಹಿರಿಯನಾದ ಈ ವೆಂಕಟಾದ್ರಿನಾಯಕನನ್ನೇ ರಾಜಾಧಿಕಾರಕ್ಕೆ ನಿಲಿಸಿ
ಕೊಡಬೇಕೆಂದು ಬಹುವಿಧದಿಂದ ಮೈಸೂರನವರನೊಡಂಬಡಿಸಿ, ಆ ಮಲ್ಲಣ್ಣನು
ವೆಂಕಟಾದ್ರಿನಾಯಕನೊಡನೆ ಮೈಸೂರವರ ಫೌಜುಸುಬೇದಾರ ಕೋಣನೂರ
ಸುಬ್ಬರಾಯನೆಂಬಾತನಂ ಸಹ ತೆರಳಿಸಿಕೊಂಡು ಬಂದು ಐಗೂರ ಸಮೀಪದಲ್ಲು
ಕೊಡಲಿಪೇಟೆ ಯೆಂಬ ಸ್ಥಳದಲ್ಲು ಪಾಳ್ಯಮನಿಳಿದು ಮುಸಲತಿಯಾದಲ್ಲಿ ಆ ವರ್ತ
ಮಾನವನ್ನು ಗೋಪಾಲನಾಯಕಂ ಚಿನ್ನಹವಂ ಮಾಡಿ ಕಳುಪಲಾಗಿ ಆಗ
ಗೋಪಾಲನಾಯಕಗೆ ಸಹಾಯವಾಗಿ ರಾಯಪಾಳ್ಯದ ಬೈದೂರ ಚನ್ನವೀರಪ್ಪನ
ಸಂಗಡ ಸೈನ್ಯವಂ ಕೂಡಿಸಿ ತೆರಳ್ಚಿಸಿ ಕಳುಪಲಾಗಿ ಆ ಉಭಯ ಸೈನ್ಯಕ್ಕೂ ಕೈ
ಗಲಸಿ ಮುಸಲತ್ತಿಯಲ್ಲು ಸಹಾಯಕ್ಕೆ ಬಂದ ಮಾಯಾವಿಗಳ ಸೈನ್ಯವು ಪಲಾಯನಂ
ಬಡೆದು ಹೋಗಲಾಗಿ ಆಗಲಾ ವೆಂಕಟಾದ್ರಿನಾಯಕ ಮಲ್ಲಣ್ಣನೆಂಬವ ಸಹಾ
ಮೈಸೂರವರ ಸೀಮೆಯೊಳಗಣ ಗೊರವೂರೆಂಬ ಸ್ಥಳದಲ್ಲು ಇರುತ್ತಿದ್ದಲ್ಲಿ, ವೆಂಕ

ಮುರಿಗೆಯ ಸಮಯದೆ ವರ್ತಿಸು
ತಿರುತಿಹ ವರಚನ್ನವೀರದೇವರನುರುಹಂ ।
ಗರದ ಮಠದಾಧಿಪತ್ಯಕೆ
ಚಿರಮೆನೆ ನೆಲೆಗೊಳಿಸಿ ನಿಲಿಸಿದಂ ತದ್ಭೂಪಂ ॥ ೮೫

ಟಾದ್ರಿನಾಯಕನ ಹವಾಲೆಯಲ್ಲು ಇರುವಹಾಗೆ ಮಾಯಾವಿಗಳು ಬಂದು ಆನೆಯ ಹಾಕಿಕೊಟ್ಟಿದ್ದರು. ಹೀಗಿರುತ್ತಿದ್ದು ಕೆಲವು ದಿವಸದ ಮೇಲೆ ತಾವು ಹವಾಲೆಗೆ ಹಾಕಿಕೊಟ್ಟ ತಮ್ಮ ಬಗೆ ಆನೆಯನ್ನು ತಿರುಗಿ ತರಹೇಳಿ ಗುರುಮನುಷ್ಯರ ಕಳುಹಲಾಗಿ ವೆಂಕಟಾದ್ರಿನಾಯಕನು ಆ ಆನೆಯಂ ಕೊಡದೆ ಚಂಡಿಸಲಾಗಿ ಆ ವೆಂಕಟಾದ್ರಿನಾಯಕನಂ ಕೋವಿಗುಂಡಿನಲ್ಲು ಇಡಿಸಿ ಕೊಲಿಸಿ ತಮ್ಮ ಬಗೆ ಆನೆಯನ್ನು ತೆಗೆದುಕೊಂಡು ಹೋಗಲಾಗಿ ಆಗ ಮಾಯಾವಿಗಳು ಈ ವರ್ತಮಾನವಂ ಕೇಳ್ದು ಈ ವೆಂಕಟಾದ್ರಿನಾಯಕನು ಹೇಗಾದರೂ ತಮ್ಮ ಹೊಂದಿದವನು ಈತನ್ನು ದುರ್ಬೋಧೆಕೇಳಿ ದುರ್ಬುದ್ಧಿಯಿಂ ಮೃತವಾದನು , ಈತಗೆ ಸಂತಾನವಿಲ್ಲವೆಂಬುದಂ ತಿಳಿದು ಆ ವೆಂಕಟಾದ್ರಿನಾಯಕನ ಪತ್ನಿ ಗಣಗೂರ ಲಿಂಗಮ್ಮ ನೆಂಬಾಕೆಗೆ ಒಳಗೆ ಬರೆದ ವಿವರಪ್ರಕಾರ ಮೂಲಪುರುಷ ಬೇಲೂರ ವೆಂಕಟಾದ್ರಿನಾಯಕನ ಪಟ್ಟದ ಸ್ತ್ರೀಯಲ್ಲು ಜನಿಸಿದ ಕೃಷ್ಣಪ್ಪನಾಯ್ಕನ ಮೊಮ್ಮಗನಾದ ಕುಮಾರಕೃಷ್ಣಪ್ಪನಾಯಕನೆಂಬುತನಂ ಗಣಗೂರು ಲಿಂಗಮ್ಮಗೆ ಸಾಕುಕೊಡಿಸಿ ಆಕೆಗೆ ಗೃಹೀತಪುತ್ರನಂ ಮಾಡಿಸಿ ಮೇಲುಪರಾಂಬರಿಕೆಮೇಲೆ ಇಟ್ಟುಕೊಂಡು ಇದ್ದರು.

ಇನ್ನು ಮೂಲಪುರುಷ ಬೇಲೂರ ವೆಂಕಟಾದ್ರಿನಾಯಕನ ತೃತೀಯಪತ್ನಿಯಲ್ಲು ಜನಿಸಿದ ಪುತ್ರನ ಹೆಸರು ರಂಗಪ್ಪನಾಯಕ ; ಈ ರಂಗಪ್ಪನಾಯಕನು ಉಚ್ಚಂಗಿಯೆಂಬ ಸ್ಥಳದಲ್ಲು ಮುಸಲತಿಯಲ್ಲು ಕೋವಿಗುಂಡಿನ ಘಾಯದಿಂದ ಮೃತನಾದನು. ಆ ರಂಗಪ್ಪನಾಯಕನ ಮಕ್ಕಳ ಹೆಸರು, ಹಿರಿಯಮಗನ ಹೆಸರು ದೊಡ್ಡಯ್ಯರಸು ಕಿರಿಯಮಗನ ಹೆಸರು ವೆಂಕಟಾದ್ರಿನಾಯಕ ; ಆ ರಂಗಪ್ಪನಾಯಕಗೆ ಹಾಗೆ ಇಬ್ಬರು ಮಕ್ಕಳು; ಆ ಇಬ್ಬರೊಳಗೆ ವೆಂಕಟಾದ್ರಿನಾಯಕಗೆ ಸಂತಾನವಿಲ್ಲ, ಈ ವೆಂಕಟಾದ್ರಿನಾಯಕನ ಅಣ್ಣನಾದ ದೊಡ್ಡಯ್ಯರಸಿನ ಮಕ್ಕಳ ಹೆಸರು, ಹಿರಿಯಮಗನ ಹೆಸರು ಕೃಷ್ಣಪ್ಪನಾಯಕ ಚಿಕ್ಕ ಮಗನ ಹೆಸರು ಕುಮಾರಸ್ವಾಮಿ ; ದೊಡ್ಡಯ್ಯರಸಿಗೆ ಹಾಗೆ ಇಬ್ಬರು ಪುತ್ರರು ಜನಿಸಿ ಬಲವಂತರಾಗಿ ಇರುತ್ತಾ ಭಲ್ಯದಲ್ಲು ಇದ್ದು ರಾಜ್ಯಂಗೆಯ್ಯುತ್ತಿರ್ಪ ಗೋಪಾಲನಾಯಕಂ ಬಹುಮೂತ್ರವ್ಯಾಧಿಮೂಲದಿಂ ಮೃತನಾಗಲಾಗಿ ಆ ತರುವಾಯ ರಂಗಪ್ಪನಾಯಕನ

ಇಂತಾ ಚನ್ನಬಸವಭೂ
ಕಾಂತಂ ಸುಯಶೋದಿಗಂತನಮಲಸ್ವಾಂತಂ ।
ಸಂತಸದಿಂ ರಿಪುನಿಕರಕೃ
ತಾಂತಂ ಧರ್ಮದೊಳ್ ರಾಜ್ಯಮಂ ಪಾಲಿಸಿದಂ ॥ ೮೬

ಇರುತಿರುತುಂ ತದ್ಧರಣೀ
ಶ್ವರನುರುವಿಧಿವಶದೆ ತಾಂ ಚತುರ್ದಶವರ್ಷಂ ।

---

ಕನಿಷ್ಠಪುತ್ರನಾದ ವೆಂಕಟಾದ್ರಿನಾಯಕನು ರಾಜ್ಯಾಧಿಕಾರಮಂ ವಹಿಸಿ ಭಲ್ಲ್ಯದಲ್ಲು ಇರುತ್ತಿದ್ದಲ್ಲಿ ಆ ವೆಂಕಟಾದ್ರಿನಾಯಕನ ಅಣ್ಣ ದೊಡ್ಡಯ್ಯರಸಿನ ಕುಮಾರನಾದ ಕೃಷ್ಣಪ್ಪನಾಯ್ಕನು ಧಾತು ಸಂವತ್ಸರದ ಭಾದ್ರಪದ ಬಹುಳದಲ್ಲು ತನ್ನ ಚಿಕ್ಕಪ್ಪನಾದ ವೆಂಕಟಾದ್ರಿನಾಯಕನ ಕಯ್ಯಾರ ಘಾತವ ಮಾಡಿ ತಾನು ತನ್ನ ತಮ್ಮ ಕೃಷ್ಣಸ್ವಾಮಿ . ಸಹಾ ಭಲ್ಲ್ಯದಲ್ಲು ರಾಜತ್ವಕ್ಕೆ ಸಿಲಲಾಗಿ ಈ ವರ್ತಮಾನವಂ ಕೊಡಗಿನ ವೀರರಾಜಂ ಕೇಳ್ದು ಈ ಕೃಷ್ಣಪ್ಪನಾಯಕಂ ಸ್ವಾಮಿದ್ರೋಹಿ ಇವನಂ ವಾರೆದೆಗಿಸಿ ಮೂಲಪುರುಷ ಬೇಲೂರ ವೆಂಕಟಾದ್ರಿನಾಯಕನ ಪಟ್ಟದ ಸ್ತ್ರೀಸಂತಾನಪರಂಪರೆಯಲ್ಲು ಜನಿಸಿದ ಗಣಗೂರ ಲಿಂಗಮ್ಮಗೆ ಗೃಹೀತಪುತ್ರನಾಗಿ ಇರುತ್ತಮಿದ್ದ ಕುಮಾರಕೃಷ್ಣಪ್ಪನಾಯಕನಂ ರಾಜತ್ವಕ್ಕೆ ನಿಲಿಸಬೇಕೆಂದಾಳೋಚಿಸಿ ಭಲ್ಲ್ಯಮಂ ವೇಷ್ಟೈಪುದೆಂದು ಸೈನ್ಯವಂ ಕಳುಪಿ ಈ ಪ್ರಕಾರ ಪ್ರಯತ್ನಮಂ ಮಾಡುತ್ತಿರಲಾಗಿ ಆ ಕೃಷ್ಣಪ್ಪನಾಯಕನು ಭಲ್ಲ್ಯದಲ್ಲು ನಿಸ್ತರಿಸಲಾರದೆ ಪಲಾಯನಂಬಡೆದು ಬಂದು ಕುಟುಂಬಸಹ ಕಳಸದ ಕೋಟೆಯಲ್ಲು ನಿಂತು ತನ್ನ ವೃತ್ತಾಂತಮಂ ಚನ್ನಬಸವಪನಾಯಕರ್ಗೆ ರಾಯಸಮಂ ಬರೆಸಿ ನಿಮ್ಮ ಹೊಂದಿದ ಪುತ್ರಮನೆತನದವನಾದೆನ್ನಂ ರಾಜತ್ವಕ್ಕೆ ನಿಲ್ಲಿಸಬೇಕೆಂದು ಬಿನ್ನವಿಸಿ ಕಳುಪಲ್ತಮ್ಮ ಮರೆವೊಕ್ಕವನು ಅವನೆಂತವನಾಗಿದೊರ್ಡಂ ಅವನ ಉದ್ಧಾರ ಮಾಡಬೇಕೆಂದು ಆಳೋಚಿಸಿ ರಾಯಸದ ಶಂಕರನಾರಣಯ್ಯನೊಡನೆ ಭೂರಿಸೈನ್ಯವಂ ಕಳುಪಿ ಭಲ್ಲ್ಯವಂ ವೇಷ್ಟೈಸಿದ ಕೊಡಗುಸೈನ್ಯವಂ ವಾರೆದೆಗಿಸಿ ಕೊಡಗಿನ ವೀರರಾಜನಂ ನಯಭಯೋಕ್ತಿಗಳಿಂದೊಡಂಬಡಿಸಿ ಕುಮಾರಕೃಷ್ಣಪ್ಪನಾಯ್ಕನಂ ಭಲ್ಲ್ಯದಿಂ ಹೊರದೆಗಿಸಿ ತಮ್ಮಂ ಮರೆವೊಕ್ಕ ಕೃಷ್ಣಪ್ಪನಾಯ್ಕನಂ ಬೇಲೂರ ಸಂಸ್ಥಾನದ ರಾಜತ್ವಕ್ಕೆ ನಿಲಿಸಿ ಪರಮಪ್ರಖ್ಯಾತಿಯಂ ಪಡೆದ ನಂತುಮಲ್ಲದೆಯುಂ .

ತರದೊಳ್ ಪರಿಣಯುವಿಲ್ಲದೆ
ನೆರೆ ರೋಗಾರ್ತಿಯೊಳ್ ಶಿವನೊಳೈಕ್ಯಂಬಡೆದಂ [1] ॥ ೮೨

ಈ ಚೆನ್ನಬಸವಪ್ಪನಾಯಕರ್ ತಮಗೆ ಪಟ್ಟವಾದ ಶಾಲಿವಾಹನ ಶಕ ವರ್ಷ ೧೬೭೬ನೆಯ ಭಾವ ಸಂವತ್ಸರದ ಕಾರ್ತಿಕ ಶುದ್ಧ ೫ ಯಾರಭ್ಯ ಈಶ್ವರ ಸಂವತ್ಸರದ ಶ್ರಾವಣ ಶುದ್ಧ ೧ಯು ವರೆಗೆ ವರ್ಷ ೨ ತಿಂಗಳು ೮ ದಿನ ೨೬ ಪರ್ಯಂತಂ ರಾಜ್ಯವನಾಳಿ ಐಕ್ಯವಾದರ್. [2]

ಏಕಾದಶಾಶ್ವಾಸಂ ಸಂಪೂರ್ಣಂ.

---

1 ಇವರು ಉಭಯತ್ರರ ಕಾಲದಲ್ಲು ಬದುಕುಗಳ ಮಾಡಿದವರು :— ಕರಣಿಕ ಕೋಳಾಲದ ವೆಂಕಟೇಶಯ್ಯ, ಆ ಮರಿಯಪ್ಪಯ್ಯ, ಆರಗದ ಪರಮೇಶ್ವರಯ್ಯ, ಸಬ್ಬನಿಸ ಕೃಷ್ಣಪ್ಪಯ್ಯ, ಕೋಳಿವಾಡದ ತಮ್ಮರಸಯ್ಯ, ರಾಯಸದ ಗಂಗಾಧರಯ್ಯ, ವಿಶ್ವೇಶ್ವರಯ್ಯ, ಹಲಸನಾಡ ನಾಗಪ್ಪ, ಗಾಜನೂರ ಭಾನಪ್ಪ, ಗರಜಿನ ಶಾಂತದೇವರು, ಮಹದೇವಪುರದ ದೇವಪ್ಪ, ಅಂಗಡಿ ಶಿವಲಿಂಗಪ್ಪ, ಸಿದ್ದಪ್ಪ ಸೇಜಂ (?) ಶಿವಯ್ಯ, ಸೌಂದರದಾಸ, ಷಡಕ್ಷರಯ್ಯ, ಪಂಚಾಕ್ಷರಯ್ಯ, ದಳವಾಯಿ ಅಂಚೆ ಶಾಂತಪ್ಪ, ಆ ವೀರಭದ್ರಯ್ಯ, ರಾಯಸದ ವೆಂಕಟನಾರಣಪ್ಪ, ಆ ಶೇಷಣ್ಣ, ಸೋದೆ ಅನಂತಯ್ಯ, ಸುಬೇದಾರ ರಾಮಪ್ಪ, ಮನೆವಾರ್ತೆ ಹುದಾರ ವೀರಭದ್ರಯ್ಯ, ಮರಿಯಪ್ಪಸೆಟ್ಟರ ಬಸವಲಿಂಗಪ್ಪನವರು ಮುಂತಾದವರು. (ಕ)

2 ಇವರಿಗೆ ಬಿದರೂರು ಕೊಪ್ಪಲಮಠದಲ್ಲಿ ಸಮಾಧಿಯಾಯಿತು. (ಕ)

## ದ್ವಾದಶಾಶ್ವಾಸಂ.

ಆ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೬೯ನೆಯ ಈಶ್ವರ ಸಂವತ್ಸರದ ಶ್ರಾವಣ ಬಹುಳ ೫ಗುರುವಾರದೊಳ್ ಬಸವಪ್ಪ ನಾಯಕರ ಪತ್ನಿ ಚನ್ನವೀರಮ್ಮಾಜಿಯವರ್ಗೆ ಗೃಹೀತಪುತ್ರನಾದ ಸೋಮಶೇಖರ ನಾಯಕರ್ಗೆ ರಾಜಪಟ್ಟಮಾದುದಾ ವಿವರಣಮೆಂತೆಂದೊಡೆ,

ಚನ್ನಬಸವೇಂದ್ರಭೂಪಂ
ಪನ್ನಗಭೂಷಣನೊಳೈಕ್ಯಮಾಗಲ್ಕೊಡನಾ ।
* ಚನ್ನವೀರಾಂಬೆ ಸಂಸ್ಥಾ
ನನ್ನಡೆವೊಡೆ ಮುಂತೆ ಮಾರ್ಗಮೆಂ ಕಾಣದಣಂ ॥ ೧

ಪಿರಿದುಂ ಚಿಂತಿಸಿ ಬಳಿಕೊಂ
ದುರುಪಥಮಂ ಕಂಡು ತಮ್ಮ ಸೋದರಮಾವಂ ।
ಗುರೆ ಪುತ್ರರ್ನಾಲ್ವರಿರ್ಪ
ರ್ವರಿಕಿಪೊಡಾ ನಾಲ್ವರೊಳ್ ಕನಿಷ್ಠಾತ್ಮಜನಂ ॥ ೨

ಸುಲಭದೆ ಗೃಹೀತಪುತ್ರನ
ನೊಲವಿಂದಂ ಮಾಡಿಕೊಂಡು ಸಂಸ್ಥಾನಕ್ಕಂ ।
ನಿಲಿಪುದೆ ಸುಮಂತ್ರಮೆಂದಾ
ಲಲನಾಮಣಿ ತನ್ನ ಮನದೆ ನಿಶ್ಚಯಿಸುತ್ತುಂ ॥ ೩

ವರಬಸವಲಿಂಗಪಾಗ್ರೇ
ಸರಸಿದ್ಧಪನಾಯಕಾರ್ಯಶಿವಲಿಂಗಪಮು ।
ಖ್ಯರೊಳಿದನಾಳೋಚಿಸಿ ಸ
ರ್ವರ ಸಮ್ಮತದಿಂದೆ ತಹುದ ನಿಶ್ಚಯಗೈದಳ್ ॥ ೪

ಇಂತು ನಿಶ್ಚಯಂಗೈದನಂತರಮಾ ಚನ್ನವೀರಮ್ಮಾಜಿ ಈಶ್ವರ ಸಂವತ್ಸರದ ಶ್ರಾವಣ ಬಹುಳ ಪಂಚಮಿ ಗುರುವಾರದೊಳ್ತಮ್ಮ ಸೋ

ದರವಮಾವನಾದ ಬಂಕಾಪುರದ ಪಟ್ಟಣಸೆಟ್ಟಿಚನ್ನವೀರಪ್ಪನವರ ಕನಿಷ್ಠ ಪುತ್ರನಂ ಸರ್ವಸಂಭ್ರಮದೊಳರಮನೆಯು ದೇವರ ಭವಂತಿಗೆ ಬಿಜಯಂಗೈಸಿ ತಂದಶೇಷಗುರಿಕಾರರಂ ಮುಂದಿಟ್ಟು ಕುಮಾರನಂ ಶಾಸ್ತ್ರೋಕ್ತ ಪ್ರಕಾರದಿಂ ತನಗೆ ಗೃಹೀತಪುತ್ರನಂ ಮಾಡಿಕೊಂಡಾ ಕುಮಾರಂಗಂ ಸೋಮಶೇಖರನಾಯಕನೆಂದು ನಾಮಕರಣಮಂ ರಚಿಯಿಸಿ ಗಗನ ಮಹಲ ಚಾವಡಿಯ ಸದರಿನೊಳ್ ಕುಳ್ಳಿರಿಸಿ [1] ರಾಜಪಟ್ಟಮಂ ಕಟ್ಟಿಸಿ ಸಂಸ್ಥಾನಾಧಿಪತ್ಯಕ್ಕೆ ನಿಲಿಸಿ ತದಾರಭ್ಯಮಾ ಸೋಮಶೇಖರನಾಯಕರ್ ಬಾಲಕರಾದ ಕಾರಣದಿಂದಾ ಕುಮಾರನಂ ಮುಂದಿಟ್ಟುಕೊಂಡು ತಮ್ಮರಸನಾಳಬರುತ್ತಿರ್ದ ರಾಜ್ಯರಾಷ್ಟ್ರದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಮಂತ್ರಿ ನಿಯೋಗಿ ಸಾಮಾಜಿಕ ಸಾಮಂತ ಗುರಿಕಾರ ಪುರಜನ ಪರಿಜನ ಮಿತ್ರಜನ ಸೇವಕಜನಮೆರ್ಯಂತಾದ ಸಮಸ್ತಜನರಂ ಸಂರಕ್ಷಿಸುತ್ತುಂ ಸಂಸ್ಥಾನದೊಳಗುಂಟಾದ ಕಾರ್ಯಗಳನೆಲ್ಲಮಂ ತಾನೆ ವಹಿಸಿ ವಿಚಾರಂಗೆಯ್ದು ನಿರ್ವಹಿಸಿ ನಡೆಸುತ್ತುಂ [2] ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರ್ದು ಶೃಂಗಪುರದ ಧರ್ಮಸಂಸ್ಥಾನದ ಸ್ವಾಮಿಗಳ ಮಠಕ್ಕೆ ಬಹಳ ಋಣಭಾರವಾಗಿರ್ದುದೆಂಬ ವರ್ತಮಾನಮಂ

---

1 ಸಮಸ್ತ ಮಂತ್ರಿ ನಿಯೋಗಿ ಸಾಮಾಜಿಕ ಗುರಿಕಾರ ಪ್ರಜೆ ಪರಿವಾರ ಮಹಾನಾಡು ಕೋಟೆ ಕಂದಾಚಾರ ಮಂದಿ ಮಕ್ಕಳು ಮುಂತಾದವರಿಂದುಡುಗೊರೆಗಳಂ ಮಾಡಿಸಿ ಕೈಮುಗಿಸಿ (ಕ.)

2 ವಸುಧಾರೆ ಕಳಸಯ್ಯ, ಅ ಕೃಷ್ಣಪ್ಪಯ್ಯ, ಹಲಸಗಾರ ನಾಗಪ್ಪ, ಕೋಳಾಲದ ಮರಿಯಪ್ಪಯ್ಯ, ಮುಂತಾದ ಬ್ರಾಹ್ಮಣ ಗುರಿಕಾರರ್ಗಂ, ರಾಯಸದ ವೆಂಕಟನಾರಣಪ್ಪಯ್ಯ, ಗಂಗಾಧರಯ್ಯ, ವಿಶ್ವೇಶ್ವರಯ್ಯ, ಸಬ್ನೀಸ ಕೃಷ್ಣಪ್ಪಯ್ಯ, ಆ ವಿಶ್ವೇಶ್ವರಯ್ಯ, ಸಬ್ಬಾಯಿತ ಹೊಸಂಗಡಿ ವೆಂಕಪ್ಪಯ್ಯ, ಈ ಮುಂತಾದ ಬ್ರಾಹ್ಮಣನಿಯೋಗಿಗಳ್ಗಂ, ಸಿದ್ದಪ್ಪನಾಯಕ, ನಂಬಯ್ಯ, ದಳವಾಯಿ ಅಂಡಿಗೆ ವೀರಭದ್ರಯ್ಯ, ಮನೆವಾರ್ತೆ ವೀರಭದ್ರಯ್ಯ, ಅವಸರದ ಕೆಂಡಪ್ಪ ಮುಂತಾದ ಶಿವಭಕ್ತಗುರಿಕಾರಜನರ್ಗಂ ತತ್ತದ್ಯೋಗ್ಯತಾನುಸಾರವರಿದುಚಿತಾಧಿಕಾರಂಗಳನಿತ್ತು ನಡೆಸಿಕೊಳುತ್ತುಂ (ಕ)

ಕೇಳ್ವಲ್ಲಿಗೆ [1] ಚಿನ್ನಭಂಡಾರದ ಪುರುಷೋತ್ತಮಯ್ಯನ ಮಗ ಹೂವಯ್ಯನಂ ಕಳುಪಿ ಅಭಿನವಸಚ್ಚಿದಾನಂದಸ್ವಾಮಿಯುವರಂ ವೇಣುಪುರಕ್ಕೆ ಬಿಜಯಮಾಡಿಸಿದಳ್.

ಇನ್ನಾ ಅಭಿನವ ಸಚ್ಚಿದಾನಂದ ಸ್ವಾಮಿಯುವರಾರೆಂದೊಡೆ:— ಸರ್ವಜಗತ್ಕರ್ತೃವಪ್ಪ ಶ್ರೀಮತ್ಪರಮೇಶ್ವರನಿಂ ಹರಿ ಹರಿಯಿಂ ಬ್ರಹ್ಮನಾ ಬ್ರಹ್ಮನಿಂ ವಸಿಷ್ಠನಾ ವಸಿಷ್ಠನಿಂ ಶಕ್ತಿಯಾ ಶಕ್ತಿಯಿಂ ಪರಾಶರನಾ ಪರಾಶರನಿಂ ವ್ಯಾಸನಾ ವ್ಯಾಸನಿಂ ಶುಕಯೋಗೀಂದ್ರನಾ ಶುಕಯೋಗೀಂದ್ರನ ಶಿಷ್ಯರ್ ಗೌಡಪಾದಾಚಾರ್ಯರಾ ಗೌಡಪಾದಾಚಾರ್ಯರ ಶಿಷ್ಯರ್ ಗೋವಿಂದಭಗವತ್ಪಾದಾಚಾರ್ಯರಾ ಗೋವಿಂದಭಗವತ್ಪಾದಾಚಾರ್ಯರಿಂ ದಿತ್ತಮಯೋನಿಜರೆಂದೆನಿಸಿ ಭೂಮಿಯೊಳವತರಿಸಿದ ಈಶ್ವರಾಂಶೀಭೂತರಾದ ಕಾರಣರೂಪರಾದ ಶ್ರೀಮಚ್ಛಂಕರಾಚಾರ್ಯರಾ ಶಂಕರಾಚಾರ್ಯರ್ಗೆ ನಾಲ್ವರ್ ಶಿಷ್ಯರವರಾರೆಂದೊಡೆ:— ಹಸ್ತಾಮಳಕಾಚಾರ್ಯರ್, ತೋಟಕಾಚಾರ್ಯರ್, ಪಾದಪದ್ಮಾಚಾರ್ಯರ್, ಸುರೇಶ್ವರಾಚಾರ್ಯರ್; ಇಂತೀ ನಾಲ್ವರ್ಶಿಷ್ಯರ್ಗೆ ಪೂರ್ವಪಶ್ಚಿಮದಕ್ಷಿಣೋತ್ತರಂಗಳೊಳ್ ದಿಗಂತವಾಗಿ ತಾವು ನಿರ್ಮಾಣಂಗೆಯ್ದಿರ್ದ ಸಂಕೇತಮಠಗಳಂ ಹಸುಗೆಯಂ ಮಾಡಿಕೊಟ್ಟು ತತ್ತನ್ಮಠಗಳಾಚಾರವಿಚಾರಂಗಳಂ ವಿಚಾರಮಂ ಮಾಡಿ ಕೊರತೆಹುಗದಂತೆ ನಡೆಸುವುದೆಂದು ನಿಯಾಮಕಂಗೆಯ್ದು ತಾವು ಪನ್ನೆರಡು ಪದಿನಾರು ವತ್ಸರಂಗಳೊಳಗೆ ಸಮಸ್ತವಿದ್ಯಾಪಾರಂಗತರೆನಿಸಿ ಚಿಕ್ಕತನದಲ್ಲಿಯೇ ಆಶ್ರಮಮಂ ತೆಗೆದುಕೊಂಡು ಸಮಸ್ತದಿಗ್ದೇಶಂಗಳೊಳ್ ಸಂಚರಿಸಿ ಬಹುವಿಧವಿಚಿತ್ರಚರಿತ್ರಂಗಳಿಂ ಮಹಿಮೆಯುಂ ಮೆರೆದು ಸೌಂದರ್ಯಲಹರಿ ಮುಂತಾದ ಗ್ರಂಥಗಳಂ ಮಾಡಿ ಬ್ರಹ್ಮಾಂಶೀಭೂತನಾಗೊಗೆದ ಮಂಡನಮಿಶ್ರನೊಡನೆ ವಿದ್ಯಾವಾದಮಂ ಮಾಡಿ ಮತ್ತಮಾಪಣದೊಳ್ ಪರಕಾಯಪ್ರವೇಶಮಂ ಮಾಡಿ ಮಗುಳ್ದು ಸ್ವಕಾಯಮಂ ಸಾರ್ದು ಅಮರುಕಮೆಂಬ ಗ್ರಂಥಮಂ ಮಾಡಿ ಬಳಿಕ್ಕಾ ಶಾರದಾಂಶೀಭೂತೆಯಾದ ಮಂಡನಮಿಶ್ರನ ಧರ್ಮಪತ್ನಿಯುಂ ವಿದ್ಯಾವಾದದಿಂ

1 ನಿಯೋಗಿಗಳಂ ಕಳುಪಿ (ಬ)

ಗೆಲ್ದು ಬಳಿಕ್ಕಂ ಶಾರದಾದೇವಿಯಂ ಕರ್ಣಾಟದೇಶದೆಡೆಯೊಳೊಪ್ಪುವ ತುಂಗಭದ್ರಾನದೀತೀರದೊಳಸೆವ ವಿಭಾಂಡಕರ್ಷೀಶ್ವರನ ಪುತ್ರನಾದ ಋಷ್ಯಶೃಂಗಮುನಿಯಾಶ್ರಮಮಧ್ಯದೊಳ್ ತಾವು ನಿರ್ಮಾಣಂಗೆಯ್ದಿರ್ದ ಶೃಂಗಪುರದ ಮಠಕ್ಕೆ ಬಿಜಯಂಗೆಯ್ಸಿತಂದು ಶಾರದಾಪೀಠದೊಳ್ ಸ್ಥಿರವಾಗಿ ನೆಲೆಗೊಳಿಸಿ ನಿಲಿಸಿ, ಶಾರದಾಪೀಠದಿಂ ಯುಕ್ತವಾದ ಧರ್ಮಸಂಸ್ಥಾನಮೆಂದು ಸಮಸ್ತದಿಗ್ದೇಶದೊಳ್ ಪ್ರಖ್ಯಾತಿಗೆ ತಂದು, ಸಾಂಖ್ಯತ್ರಯಪ್ರತಿಪಾದಕ, ವಿಶುದ್ಧಾದ್ವೈತಸಿದ್ಧಾಂತಮತಸ್ಥಾಪಕ, ಪದವಾಕ್ಯಪಾರಾವಾರಪಾರೀಣ, ಅಷ್ಟಾಂಗಯೋಗಾನುಸಂಧಾನನಿರತ, ಷಣ್ಮತಸ್ಥಾಪನಾಚಾರ್ಯ, ಜಗದ್ಗುರು, ಪರಮಹಂಸಪರಿವ್ರಾಜಕಾಚಾರ್ಯಶಂಕರಾಚಾರ್ಯರೆಂಬಿವು ಮೊದಲಾದ ಬಿರುದಂ ಪಡೆದು ಪರಮಪ್ರಸಿದ್ಧಿವೆತ್ತು ಮತ್ತಮಾ ಶೃಂಗಪುರದೊಳ್ ತಮ್ಮ ಶಿಷ್ಯರಾದ ಸುರೇಶ್ವರಾಚಾರ್ಯರಂ ನೆಲೆಗೊಳಿಸಿ ತಾವು ಸ್ವತಂತ್ರಸಂಚಾರವಿನೋದಶೀಲರಾಗಿರುತಿಂತು ವರ್ತಿಸುತ್ತುಂ, ಕೆಲವು ವತ್ಸರಮಿರ್ದು ಮುಕ್ತಿಗೆ ಸಂದರ್.

ಇನ್ನಾ ಸುರೇಶ್ವರಾಚಾರ್ಯರ ಕರಕಮಲಸಂಜಾತರಾರೆಂದೊಡೆ, ಅವರ ನಾಮಂಗಳ್:— ನಿತ್ಯಬೋಧಘನಾಚಾರ್ಯರ್, ಅವರ ತರುವಾಯ [1]ನೃಸಿಂಹಾಚಾರ್ಯರ್, ಆ ತರುವಾಯ ಜ್ಞಾನೋತ್ತಮಶಿವಾಚಾರ್ಯರ್, ಆ ತರುವಾಯ ಜ್ಞಾನಗಿರ್ಯಾಚಾರ್ಯರ್, ಆ ತರುವಾಯ ನೃಸಿಂಹಗಿರ್ಯಾಚಾರ್ಯರ್, ಆ ತರುವಾಯ ಈಶ್ವರತೀರ್ಥಾಚಾರ್ಯರ್, ಆ ತರುವಾಯ ನೃಸಿಂಹಾಚಾರ್ಯರ್, ಆ ತರುವಾಯ ವಿದ್ಯಾತೀರ್ಥಾಚಾರ್ಯರ್, [2] ಆ ತರುವಾಯ ಭಾರತೀತೀರ್ಥಕೃಷ್ಣಾಚಾರ್ಯರ್, ಆ ತರುವಾಯ ವಿದ್ಯಾರಣ್ಯಯೋಗೀಂದ್ರರ್.

ಮತ್ತಮಾ ವಿದ್ಯಾರಣ್ಯರೆಂಬವರ್ ಪಂಪಾಕ್ಷೇತ್ರದೊಳಿರ್ದು ಶ್ರೀಚಕ್ರೋಪಾಸನೆಯಿಂ ದೇವಿಯಂ ಮೆಚ್ಚಿಸಿ ಬಳಿಕ್ಕಾ ಶೃಂಗೇರಿಯ ಮಠ

1 ಜ್ಞಾನಪುನಚಾರ್ಯರ್ (ಕ)

2 ಭಾರತೀಕೃಷ್ಣಾಚಾರ್ಯರ್

ದೊಳ್ವರ್ತಿಸುತ್ತಿರ್ದ ವಿದ್ಯಾಶಂಕರರಿಂದಮಾಶ್ರಮಮಂ ಕೈಕೊಂಡು ಭಾಗ್ಯಮಂ ಪಡೆದು ಬಳಿಕ್ಕಾ ದೇವಿಯ ನಿರೂಪದಿಂ ಪಂಪಾಕ್ಷೇತ್ರಸಮೀಪದೊಳ್ ವಿದ್ಯಾನಗರಿಯೆಂಬ ಪಟ್ಟಣಮಂ ನಿರ್ಮಾಣಂಗೆಯ್ಸಿ ಆ ರತ್ನಸಿಂಹಾಸನದಲ್ಲಿ ಹರಿಹರ ಬುಕ್ಕರೆಂಬಿರ್ವರ್ಸಹೋದರರೊಳ್ ಪಿರಿಯನಾದ ಹರಿಹರರಾಯಂಗೆ ಪಟ್ಟಮಂ ಕಟ್ಟಿಸಿ, ಪಂಪಾಕ್ಷೇತ್ರಮಾರಭ್ಯ ಕೃಷ್ಣವೇಣೀಪರ್ಯಂತಮಾದ ರಾಜ್ಯಕ್ಕೆಲ್ಲಂ ಶ್ರೀವಿರೂಪಾಕ್ಷನೆ ಕರ್ತೃನೀವಾಸ್ವಾಮಿಯ ಹೆಸರಿನಲ್ಲಿ ಒಪ್ಪಮಂ ಹಾಕಿಕೊಂಡು ಆ ಸ್ವಾಮಿಯಲ್ಲಿ ಪರಮಭಕ್ತಿಯೊಳ್ ನಡೆದುಕೊಂಡು ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ವುದೆಂದು ನಿಯಾಮಿಸಿ ನಿಲಿಸಿ, ಆ ಬಳಿಕಂ ತಾವು ರೇವಣಸಿದ್ಧೇಶ್ವರನೆಂಬ ಗಣಾಧೀಶ್ವರನಿಂ ಚಂದ್ರಮೌಳೀಶ್ವರನೆಂಬ ಲಿಂಗಮಂ ಪಡೆದು ಶೃಂಗಪುರವರಕ್ಕೈತಂದಾಮಠದೊಳ್ನಿಂದು ಕೆಲಕಾಲಂ ವರ್ತಿಸುತ್ತುಮಿರ್ದು ಮುಕ್ತರಾದರ್.

ಆ ವಿದ್ಯಾರಣ್ಯರ ತರುವಾಯ ಚಂದ್ರಶೇಖರಭಾರತೀಂದ್ರರ್, ಆ ತರುವಾಯ ನೃಸಿಂಹಭಾರತಿಗಳ್, ಆ ತರುವಾಯ ಪುರುಷೋತ್ತಮಭಾರತಿಗಳ್, ಆ ತರುವಾಯ ಶಂಕರಭಾರತಿಗಳ್, ಆ ತರುವಾಯ ಚಂದ್ರಶೇಖರಭಾರತಿಗಳ್,[1] ಆ ತರುವಾಯ ನೃಸಿಂಹಭಾರತಿಗಳ್, ಆ ತರುವಾಯ ಪುರುಷೋತ್ತಮಭಾರತಿಗಳ್, ಆ ತರುವಾಯ ರಾಮಚಂದ್ರಭಾರತಿಗಳ್, ಆ ತರುವಾಯ ನೃಸಿಂಹಭಾರತಿಗಳ್,[1] ಆ ತರುವಾಯ ಮತ್ತಂ ನೃಸಿಂಹಭಾರತಿಗಳ್, ಆ ತರುವಾಯ ಅಭಿನವ ನೃಸಿಂಹಭಾರತಿಗಳ್, ಆ ತರುವಾಯ ಸಚ್ಚಿದಾನಂದಭಾರತಿಗಳ್, ಆ ತರುವಾಯ ಸಚ್ಚಿದಾನಂದಭಾರತೀಸ್ವಾಮಿಗಳ ಕರಕಮಲಸಂಜಾತರಾದ ಅಭಿನವಸಚ್ಚಿದಾನಂದ ಭಾರತಿಗಳ್.

ಇಂತಪ್ಪ ಅಭಿನವಸಚ್ಚಿದಾನಂದಭಾರತೀಸ್ವಾಮಿಯುವರಂ ಈಶ್ವರ ಸಂವತ್ಸರದ ಮಾರ್ಗಶಿರ ಬಹುಳ ೧೦ ಯೊಳ್ ॥ ೫೪

[1] ಈ ನಾಲ್ಕು ಹೆಸರುಗಳು (ಕ) ಪುಸ್ತಕದಲ್ಲಿಲ್ಲ.

ಭಾವಿಸೆಬಪ್ಪರ್ ನಾವುದ
ಚಾವಡಿಗೈತಂದು ನಿಂದು ಕರದೊಯ್ದೊಲವಿಂ ।
ದಾವಿಲಸಿತವಹ ಬಣ್ಣದ
ಚಾವಡಿಯೊಳ್ಬ್ಳೀಟಿಗೊಂಡು ಪರವೋತ್ಸವದಿಂ ॥ ೬

ನೆರೆಯುಚಿತವಾದ ಮಿಗಿಲುಡು
ಗೊರೆಗಳನಿತ್ತವರನೈದೆ ಸನ್ಮಾನಿಸಿಯಾ ।
* ದರಿಸಿ ಬೀಳ್ಕೊಟ್ಟು ಬಳಿಕಂ
ವರವೃಷವನದೆಡೆಯನೈದೆ ಶೃಂಗರಿಸುತ್ತುಂ ॥ ೭

ನೆರೆ ರಮ್ಯವಾಗಿ ಸತತಂ
ಮಿರುಪಾ ಸ್ಥಳಕಾ ಯತೀಂದ್ರನಂ ಕರೆದೊಯ್ದಾ ।
ದರದಿಂ ಭಿಕ್ಷವನಾಗಿಸಿ
ಪಿರಿದೆನೆ ಸಂತುಷ್ಟಿವಡಿಸಿ ಕಳುಪಿ ಬಳಿಕ್ಕಂ ॥ ೮

ಪುರದೊಳ್ ಪ್ರತಿದಿನಗಳೊಳಂ
ಗುರಿಕಾರರಿನೆಸೆವ ಪರದರಿಂದಂ ಹೆಜ್ಜೇ ।
ಬರಿನುರುಭಿಕ್ಷವನಾಗಿಸಿ
ನೆರೆ ಸಂತಸವಡಿಸಿದಳ್ದಲಾ ಯತಿವರನಂ ॥ ೯

ಮತ್ತಮದಲ್ಲದಾ ತರುವಾಯಿಯೊಳಾ ಸ್ವಾಮಿಗಳಗತ್ಯಂತದಿವ್ಯಮಾದ ಸ್ಫಟಿಕಲಿಂಗಮುಮಂ ಅನರ್ಘ್ಯರತ್ನಖಚಿತಗೋಪಾಲಕೃಷ್ಣಮೂರ್ತಿಯುಮಂ ಪದಕತಾಳಿಸರಪಣಿಸಹಿತಂ ಶಿವಾರ್ಪಿತವಾಗಿ ಧಾರೆಯನೆರೆದು ಮತ್ತಮಾದೇವರ್ಗೆಪ್ಪತ್ತುನಾಲ್ಕುವರಹದ ಭೂಸ್ವಾಸ್ಥೆಯಂ ನಿರೂಪಮಂ ಬರೆಸಿತ್ತು ಮತ್ತಮಂತುಮಲ್ಲದೆ, ಶೃಂಗಪುರದ ಮಠಕ್ಕೋಸುಗಂ ತನ್ನ ಭಕ್ತಿಯಿಂ ಬೇರೆ ಮುನ್ನೂರ್ವರಹದ ಭೂಸ್ವಾಸ್ಥೆಯಂ ಶಿವಾರ್ಪಿತವಾಗಿ ಉತ್ತಾರವಂ ಮಾಡಿಸಿ, [1] ಅಕಾಲಚಕ್ರದೊಳ್ ಕೊಳುತ್ತಿರ್ದುತ್ತಾರ ಪಗುದಿಯಂ ·ಬಿಡಿಸಿ, ಆ ಮಠದ ರುಣಭಾರಕ್ಕಂ

[1] ಅರಮನೆಗೆ ತೆಗೆದುಕೊಳ್ಳುವ ವುತ್ತಾರ ಪಗುದಿಯಂ ಬಿಡಿಸಿ (ಕ)

ಉಚಿತವರಿತು ಖಂಡಿತಕಾಯುಕಂಗಳಂ ಮಾಡಿಸಿಕೊಟ್ಟು ಮೇಲೆನಿಪ್ಪ ಡುಗೊರೆಯುಚಿತಮುಂತಾದುಪಚಾರಂಗಳಿಂ ಪಿರಿದು ಸನ್ಮಾನಿಸಿ ಸಂತಸಂ ಬಡಿಸಿ ತೆರಳ್ಚಿ ಕಳುಹಿದಳಂತುಮಲ್ಲದೆಯುಂ ॥

* ಅಡಸಿದಾರೆಯುರ ಘಾಜಿಂ
ಕಡೆದೆಗೆಸುತೆ ವೀರಭದ್ರನೃಪೇಂದ್ರನ ಮುಖದಿಂ ।
ಪಡುಗಡಲೆಡೆಯೊಳಗೊಪ್ಪುವ
ಮಿಡಿಜೆಯ ಕೋಂಟೆಯನೆ ಮಗುಳ್ ತಾಂ [1] ವಶಗೈದಳ್ ॥ ೧೦

ಈ ವೀರಮ್ಮಾಜಿ ಸೋಮಶೇಖರನಾಯಕರ್ ರಾಜ್ಯವಾಳಿದುದು ಈಶ್ವರಸಂವತ್ಸರದ ಶ್ರಾವಣ ಬಹುಳ ೫ ಯಾರಭ್ಯ ಚಿತ್ರಭಾನು ಸಂವತ್ಸರದ ಮಾಘ ಶುದ್ಧ.... ವರೆಗೆ ವರ್ಷ ೫ ತಿಂಗಳು ೬ ಪರ್ಯಂತಂ [2]

ದ್ವಾದಶಾಶ್ವಾಸಂ ಸಂಪೂರ್ಣಂ

---

ಶಕವರ್ಷ ೧೬೮೫ನೆಯ ಚಿತ್ರಭಾನು ಸಂವತ್ಸರದ ಮಾಘ ಶುದ್ಧ ೫ಯೊಳ್ ನಗರಸಂಸ್ಥಾನಂ ವಿಸ್ಖಲಿತಮಾಯ್ತು. ಈ ಶಿವಭಕ್ತರ ಸಂಸ್ಥಾನಂ ಇಲ್ಲಿಗೆ ಸಮಾಪ್ತಂ.

ಕೆಳದಿನೃಪವಿಜಯಂ ಸಂಪೂರ್ಣಂ.

ಮಂಗಳಮಸ್ತು.

---

1 ತಾಂ ವಶಗೈದು ಸುಖದಿಂದಿರ್ದರ್(ಕ)

2 ಶಕವರ್ಷ ೧೬೮೫ನೆಯ ಚಿತ್ರಭಾನು ಸಂವತ್ಸರದ ಮಾಘ ಶುದ್ಧ ೯ ವರೆಗೆ ವರ್ಷ ೫ ತಿಂಗಳು ೫ ದಿನ ೧೯ ಪರಿಯಂತ್ರ; ಶಿವಭಕ್ತರ ಸಂಸ್ಥಾನ ಸಮಾಪ್ತಿ; ಆ ತರುವಾಯ ಮ್ಲೇಂಛರ ಹೈದರನವಾಬು ಶುಭಕೃತು ಸಂವತ್ಸರದ ಫಾಲ್ಗುಣ ಶುದ್ಧ ೧೫ವರೆಗೆ ವರ್ಷ ೩೦ ತಿಂಗಳು ೧ ದಿನ ೬ ಪರಿಯಂತ್ರ; ಶ್ರೀರಂಗಪಟ್ಟಣದ ರಾಜ ಆಳಿದ ಅನಂತರ ಮೈಸೂರವರಿಗೆ ಸೇರಿತು. ಸಮಾಪ್ತ. ಮಂಗಳ. (ಕ)